ಶ್ರೀ ರಸ್ತು.

ಜಯ ಸೂರ್ಯಭಗವನ್.

ವೇದಾಂಗವಾದ ಜೋತಿಶ್ಶಾಸ್ತ್ರ ಸಂಹಿತಗಳಲ್ಲಿ
ಶ್ರೌತ ಸ್ಮಾರ್ತನಿತ್ಯ ನೈಮಿತ್ತಿಕಕರ್ಮ ಕಾಲಗಳನ್ನು
ಫಲಗಳನ್ನೂ ತಿಳಿಸುವ ಬಹುಗ್ರಂಥಗಳಿಂದ
ಸಂಗ್ರಹಿಸಲ್ಪಟ್ಟ.

# ಮುಹೂರ್ತ ದೀಪಿಕಾ,
# ಮುಹೂರ್ತ ದರ್ಪಣಗಳು.

ಎಂಬೀಗ್ರಂಥವು

ಪಂಡಿತರಿಂದ ಪರಿಶೋಧಿಸಲ್ಪಟ್ಟು
ಟಿ. ಕೆ. ಕೃಷ್ಣಸ್ವಾಮಿ ಶೆಟ್ರುವರಿಗಾಗಿ
(ಪ್ರಥಮ ಮುದ್ರಣ ೧,೦೦೦ ಪ್ರತಿಗಳು.)

ಎಂ. ಆರ್. ಕೃಷ್ಣಸ್ವಾಮಿ ಶೆಟ್ರು
ಸ್ವಕೀಯ
ಜಿನಿವಾ ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಿ ಪ್ರಕಟಿಸಲ್ಪಟ್ಟಿತು.



ಮದ್ರಾಸು
೧೯೦೯.
(ಕ್ರಯ ೧೦ ಆಣೆ.)

ಶ್ರೀ ರಸ್ತು.

# ಮುಹೂರ್ತದೀಪಿಕಾ.



ಶ್ಲೋ॥ ಯಃಕರ್ತಾಜಗತಾಂಭರ್ತಾಸಂಹರ್ತಾಮಹಸಾನ್ನಿಧಿಃ। ಪ್ರಣಮಾಮಿತಮಾದಿತ್ಯಂಬಹಿರಂತಸ್ತಮೋಪಹಂ॥

ಟೀ। ಯಾವನು ಲೋಕಗಳಿಗೆ ಕರ್ತನೋ,ರಕ್ಷಕನೋ,ಸಂಹಾರವನ್ನು ಮಾಡುವವನೋ, ತೇಜಸ್ಸುಗಳಿಗೆ ಮುಖ್ಯಸ್ಥಾನವಾಗಿ ಇದ್ದಾನೋ,ಒಳಗೆ ತಮೋಗುಣವನ್ನು ಹೊರಗೆ ಅಂಧಕಾರವನ್ನು ಸಹಹರಿಸುವನೋಅಂಥಾ ಆದಿತ್ಯನನ್ನು ನಾನುವಂದಿಸುತ್ತೇನೆಂದು ಶ್ಲೋಕಾರ್ಥವು.

ಶ್ಲೋ॥ ಭವತ್ಯಶ್ವಿನಿನಕ್ಷತ್ರಂ ಅಶ್ವೀದಸ್ರಸ್ತುರಂಗಮಃ।
ಆದ್ಯಸ್ತುರಂಗಸ್ತುರಗಃ ಅಶ್ವೋವಾಜೀಹಯೋಹರಿಃ॥

ಟೀ॥ ಅಶ್ವಿ, ದಸ್ರಃ, ತುರಂಗಮಃ, ಆದ್ಯಃ, ತುರಂಗಃ, ತುರಗಃ ಅಶ್ವಃ, ವಾಜೀ, ಹಯಃ, ಹರಿಃ, ಈ ೧೦ ಶಬ್ದಗಳು ಅಶ್ವಿನೀ ನಕ್ಷತ್ರದ ಹೆಸರು.

ಶ್ಲೋ॥ ಭರಣೀಸ್ಯಾದ್ಯ ಮೋಯಾಮ್ಯಸ್ತ್ವಂತ ಕೋಯಮ ಸಂಜ್ಞಿಕಃ॥

ಟೀ॥ ಯಮಃ, ಯಾಮ್ಯಃ, ಅಂತಕಃ, ಯಮಸಂಜ್ಞಿಕಃ, ಈ ೪ ಶಬ್ದಗಳು ಭರಣೀ ನತ್ರದ ಹೆಸರು.

ಶ್ಲೋ।ಕೃತ್ತಿಕಾಬಹುಳಾಜ್ಞ್ಯಾಹುತಭುಗ್ವಹ್ನಿಸಂಜ್ಞಿಕಾ।
ಷಟ್ತಾರಕೋಪಾವಕಶ್ಚಾನಲೋಧಜ್ವಲನಸ್ತಥಾ॥

ಟೀ॥ ಕೃತ್ತಿಕಾ, ಬಹುಳಾ, ಹುತಭುಕ್, ವಹ್ನಿ ಸಂಜ್ಞಿಕಾ, ಷ

---

[illegible]

ಟ್ರ್ರಾರಕೇ, ಪಾವಕಃ, ಅನಲಃ, ಜ್ವಲನಃ, ಈ ೮ ಶಬ್ದಗಳು ಕೃತ್ತಿಕನಕ್ಷತ್ರದ ಹೆಸರುಗಳು.

ಶ್ಲೋ॥ರೋಹಿಣೀಚವಿಧಿರ್ಬ್ರಹ್ಮಾಪ್ರಾಜಾಪತ್ಯಶ್ಚತುರ್ಮುಖಃ।
ಪ್ರಜಾಪತಿಃಪ್ರಜೇಶಶ್ಚವಿಧಾತಾಪಂಕೇಜಾಸನಃ।
ಆತ್ಮಭೂಃಪದ್ಮಯೋನಿಸ್ಸ್ಯಾದ್ಬ್ರಹ್ಮ ನಾಮತತಃಪರಂ ॥

ಟೀ ॥ ರೋಹಿಣೀ, ವಿಧಿಃ, ಬ್ರಹ್ಮಾ, ಪ್ರಾಜಾಪತ್ಯಃ, ಪದ್ಮಜಃ, ಪ್ರಜಾಪತಿಃ, ಪ್ರಜೇಶಃ, ವಿಧಾತಾ, ಪಂಕಜಾನನಃ, ಆತ್ಮಭೂಃ,ಪದ್ಮಯೊನಿಃ, ಬ್ರಹ್ಮನಾಮ, ಈ ೧೬ ಶಬ್ದಗಳು ರೋಹಿಣೀ ನಕ್ಷತ್ರದ ಹೆಸರುಗಳು.

ಶ್ಲೋ॥ ಮೃಗಶೀರ್ಷಮೃಗಶ್ಚಂದ್ರಐಂದವಹಿಮದೀಧಿತಿಃ।
ಸ್ಯಾಚ್ಚಂದ್ರಶಶಿಭಂಸೌಮ್ಯೋನಿಶಾನಾಥೋನಿಶಾಕರಃ॥

ಟೀ॥ ಮೃಗಶೀರ್ಷ, ಮೃಗಃ, ಚಂದ್ರಃ, ಐಂದವಃ, ಹಿಮದೀಧಿತಿಃ, ಚಂದ್ರಃ, ಶಶಿಭಂ, ಸೌಮ್ಯಃ, ನಿಶಾನಾಥಃ, ನಿಶಾಕರಃ, ಈ ೮ ಶಬ್ದಗಳುಮೃಗಶಿರ ನಕ್ಷತ್ರದಲ್ಲಿ ವರ್ತಿಸುವವು.

ಶ್ಲೋ॥ಆರ್ದ್ರಾರೌದ್ರೀಚಪುರಜಿಚ್ಛರ್ವಸ್ಥಾಣುರ್ಭವೋಹರಃ॥

ಟೀ॥ ಆರ್ದ್ರಾ, ಪುರಜಿತ್, ಶರ್ವಃ, ಸ್ಥಾಣುಃ, ಭವಃ, ಹರ, ಈ ೬ ಶಬ್ದಗಳಂ ಆರ್ದ್ರಾನಕ್ಷತ್ರದ ಹೆಸರುಗಳು.

ಶ್ಲೋ॥ ಪುನರ್ವಸ್ಸ್ವದಿತಿರ್ದೇವಮಾತಾಆದಿತ್ಯಮೇವಚ।

ಟೀ॥ ಪುನರ್ವಸು, ಅದಿತಿಃ, ದೇವಮಾತಾ, ಆದಿತ್ಯಂ, ಈ ೪ ಶಬ್ದಗಳುಪುನರ್ವಸು ನಕ್ಷತ್ರದ ನಾಮಗಳು

ಶ್ಲೋ॥ಇಜ್ಯಾರ್ಯೌತಿಷ್ಯಪುಷ್ಯೌತುಪೂಜಿತೋಗುರುನಾಮಕಃ।
ವಾಗೀಶಶ್ಚಾಮರೇಜ್ಯಶ್ಚಜೀವೋದೇವಪುರೋಹಿತಃ॥

ಟೀ॥ ಇಜ್ಯಃ, ಆರ್ಯಃ, ತಿಷ್ಯಃ, ಪುಷ್ಯಃ, ಪೂಜಿತಃ, ಗುರುನಾಮಕಃ, ವಾಗೀಶಃ, ಅಮರೇಜ್ಯಃ, ಜೀವಃ, ದೇವಪುರೋಹಿತಃ ಈ ೧೦ ಶಬ್ದಗಳು ಪುಷ್ಯ ನಕ್ಷತ್ರದ ಹೆಸರುಗಳು.

ಶ್ಲೋ॥ ಆಶ್ಲೇಷೋರಗಸಾರ್ಪಾಹಿಭುಜಂಗವ್ಯಾಳಸಂಜ್ಞಿಕಃ॥

ಟೀ ॥ ಆಶ್ಲೇಷಃ, ಉರಗಃ, ಸಾರ್ಪಃ, ಅಹಿಃ, ಭುಜಗಃ, ವ್ಯಾಳಸಂಜ್ಞಿಕಃ, ಈ ೬ ಶಬ್ದಗಳು ಅಶ್ಲೇಷ ನಕ್ಷತ್ರದ ಹೆಸರುಗಳು.

ಶ್ಲೋ॥ ಮಘಾಪಿತಾಚಪೈತ್ರಶ್ಚ ಮೇಖಲಾಪಿತ್ರೃಭಂತಥಾ ॥

ಟೀ॥ ಮಘಾ, ಪಿತಾ, ಪೈತಃ, ಮೇಖಲಾ, ಪಿತೃಭಂ, ಈ ೫ ಶಬ್ದಗಳುಮಘಾನಕ್ಷತ್ರದ ನಾಮಗಳು.

ಶ್ಲೋ॥ ಭಾಗ್ಯಂಪೂರ್ವಾಫಲ್ಗುನೀ ಸ್ಯಾದ್ಭಗಾಖ್ಯಂಭಗಸಂಜ್ಞಿಕಂ ॥

ಟೀ ॥ ಭಾಗ್ಯಂ, ಪೂರ್ವಫಲ್ಗುನೀ, ಭಗಾಖ್ಯಂ, ಭಗಸಂಜ್ಞಿಕಂ, ಈ ೪ ಶಬ್ದಗಳು ಪೂರ್ವಫಲ್ಗುನೀ ನಕ್ಷತ್ರದ ಹೆಸರುಗಳು.

ಶ್ಲೋ॥ ಅರ್ಯಮರ್ಯಮಣಂಚೈವಅರ್ಯಮ್ಣಂಚೊತ್ತರಂತಥಾ॥

ಟೀ ॥ ಅರ್ಯಮಾ, ಅರ್ಯಮಣಂ, ಅರ್ಯಮ್ಣಂ, ಉತ್ತರಂ, ಈ ೪ ಶಬ್ದಗಳು ಉತ್ತರ ಫಲ್ಗುನೀ ನಕ್ಷತ್ರದ ಹೆಸರುಗಳು.

ಶ್ಲೋ॥ ಹಸ್ತಸ್ಸವಿತೃಮರ್ಕಸ್ಸೂರ್ಯೋದಿವಾಕರಃ ॥

ಟೀ॥ ಹಸ್ತಃ, ಸವಿತಾ, ಸಾವಿತ್ರಃ, ಅರ್ಕಃ, ಸೂರ್ಯಃ, ದಿವಾಕರಃ ಈ ೬ ಶಬ್ದಗಳು ಹಸ್ತನಕ್ಷತ್ರದ ಹೆಸರುಗಳು.

ಶ್ಲೋ॥ ಚಿತ್ರಾಸ್ಯಾತ್ತ್ವಷ್ಟ್ರದೈವತ್ಯಂ ತ್ವಾಷ್ಟ್ರೇಂದ್ರಸುರವರ್ಧಕಂ ॥

ಟೀ॥ ಚಿತ್ರಾ, ತ್ವಷ್ಟ್ರದೇವತ್ಯಂ, ತ್ವಾಷ್ಟ್ರೇಂದ್ರಂ, ಸುರವರ್ಧಕಂ, ಈ ೪ ಶಬ್ದಗಳು ಚಿತ್ರಾನಕ್ಷತ್ರದ ಹೆಸರುಗಳಾಗುವವು.

ಶ್ಲೋ॥ಸ್ವಾತೀಸಮೀರಣೋವಾಯುಃಪವನಶ್ಚಾನಿಲೋಮರುತ್

ಟೀ॥ ಸ್ವಾತೀ, ಸಮೀರಣಃ, ವಾಯುಃ, ಪವನಃ, ಅನಿಲಃ, ಮರುತ್ ಈ ೬ ಶಬ್ದಗಳು ಸ್ವಾತೀ ನಕ್ಷತ್ರದ ಹೆಸರುಗಳು.

ಶ್ಲೋ॥ ವಿಶಾಖಂಶೂರ್ಪಮಿಂದ್ರಾಗ್ನಿದ್ವಿದೈವತ್ಯಂವಿಶಾಖಭಂ।

ಟೀ॥ ವಿಶಾಖಾ, ಶೂರ್ಪಂ, ಇಂದ್ರಾಗ್ನಿಂ, ದ್ವಿದೈವತ್ಯಂ, ವಿಶಾಖಭಂ ಈ ೫ ಶಬ್ದಗಳು ವಿಶಾಖನಕ್ಷತ್ರದ ಹೆಸರುಗಳು.

ಶ್ಲೋ॥ ಮಿತ್ರಂಮೈತ್ರ ಮಾನೂರಾಧ ಮನೂರಾಧಸ್ಯಸಂಜ್ಞಿಕಂ ॥

ಟೀ ॥ ಮಿತ್ರಂ, ಮೈತ್ರಂ, ಅನೂರಾಧಾ, ಈ ೩ ಶಬ್ದಗಳು ಅನೂರಾಧಾನಕ್ಷತ್ರದನಾಮಗಳು.

ಶ್ಲೋ॥ ಜ್ಯೇಷ್ಠೇ, ಇಂದ್ರಃ, ಪುರುಹುತಃ' ಇಂದ್ರಃ, ಶತಮುಖಃ,ಈ

೪ ಶಬ್ದಗಳು ಜ್ಯೇಷ್ಠಾನಕ್ಷತ್ರದ ಹೆಸರುಗಳು.

ಶ್ಲೋ॥ ಮೂಲಂನಿಶಾಚರಂಪ್ರೋಕ್ತಮಾಸುರಂನಿರ್ರುತಿಂ
ತಥಾ॥ನಕ್ತಂಚರಂಕೋಣಪಂಚರಾಕ್ಷಸಂಪಿಶಿತಾಶನಂ ॥

ಟೀ॥ ಮೂಲಂ, ನಿಶಾಚರಂ, ಅಸುರಂ, ನಿರುಋತಿಂ,ನಕ್ತಂಚರಂ, ಕೋಣಪಂ, ರಾಕ್ಷಸಂ, ಪಿಶಿತಾಶನಂ ಈ ೮ ಶಬ್ದಗಳು ಮೂಲಾ ನಕ್ಷತ್ರಧ ಹೆಸರುಗನ್ನಿಸಿಕೊಳ್ಳುತ್ತವೆ.

ಶ್ಲೋ॥ಪೂರ್ವಾಷಾಢಾಜಲಂತೋಯಮುದಕಂಚಾಪಯೆವಚ

ಟೀ॥ ಪೂರ್ವಾಷಾಢಾ, ಜಲಂ, ತೋಯಂ, ಉದಕಂ, ಆಪಃ,ಈ ೫ ಶಬ್ದಗಳು ವೂರ್ವಾಷಾಢಾನಕ್ಷತ್ರದ ಹೆಸರುಗಳು.

ಶ್ಲೋ॥ ಉತ್ತರಾಷಾಢವಿಶ್ವಂಚ ಅಭಿಜಿದ್ವಾಪ್ರಕಾಶಕಂ॥

ಟೀ॥ ಉತ್ತರಾಷಾಢ, ವಿಶ್ವಂ, ಈ ೨ ಶಬ್ದಗಳು ಉತ್ತರಾಷಾಢ ನಕ್ಷತ್ರದ ಹೆಸರುಗಳು, ಅಭಿಜಿತ್ ಅಪ್ರಕಾಶಕಂ, ಈ ೨ ಶಬ್ದಗಳು ಅಭಿಜಿತ್‌ನಕ್ಷತ್ರದ ಹೆಸರುಗಳು.

ಶ್ಲೋ॥ ಶ್ರವಣಂವೈಷ್ಣವಂಶ್ರೀಶಂಶ್ರೀಕಾಂತಮುರಜಿದ್ಧನಂ॥

ಟೀ॥ ಶ್ರವಣಂ, ವೈಷ್ಣವಂ, ಶ್ರೀಕಾಂತಂ, ಮುರಜಿತ್, ಧನಂ ಈ ಶಬ್ದಗಳು ಶ್ರವಣನಕ್ಷತ್ರದ ಹೆಸರುಗಗು.

ಶ್ಲೋ॥ ಶ್ರವಿಷ್ಠಾಚಧನಿಷ್ಠಾಚವಸುರ್ವಾಸವಪಿವಚ ॥

ಟೀ॥ ಶ್ರವಿಷ್ಠಾ, ಧನಿಷ್ಠಾ, ವಸುಃ, ವಾಸವಃ, ಈ ೪ ಶಬ್ದಗಳು ಧನಿಷ್ಠಾನಕ್ಷತ್ರದ ಹೆಸರುಗಳು.

ಶ್ಲೋ॥ ಪ್ರಾಚೆತಸೋಜಲನಿಧಿಶ್ಯತತಾರಶ್ಚವಾರುಣಃ ॥

ಟೀ॥ ಪ್ರಾಚೇತಸಃ, ಜಲನಿಧಿಃ, ಶತತಾರಂ, ವಾರುಣಃ, ಈ ೪ ಶಬ್ತಗಳು ಶತಭಿಷಾ ನಕ್ಷತ್ರದಹೆಸರುಗಳು.

ಶ್ಲೋ॥ಅಜೈಕಪಾತ್ಪ್ರೋಷ್ಠಪದಾಪೂರ್ವಾಭಾದ್ರಪದಾತಥಾ।

ಟೀ॥ ಅಜೈಕಪಾತ್, ಪ್ರೋಷ್ಠಪದಾ, ವೂರ್ವಾಭಾದ್ರ, ಪದಾ ಈ ೪ ನ್ನೂಪೂರ್ವಾಭಾಗ್ರನಕ್ಷತ್ರದ ನಾಮಗಳು.

ಶ್ಲೋ॥ ಉತ್ತರಾಭಾದ್ರಕಂಚೈವ ಅಹಿರ್ಬುಧ್ನಿನಿಶಾಮುಖಂ ॥

ಟೀ॥ ಉತ್ತರಾಭಾಧ್ರಕಂ, ಅಹಿರ್ಬುಧ್ನಂ, ನಿಶಾಮುಖಂ, ಈ೩ ನ್ನೂಉತ್ತರಾಭಾದಾ ನಕ್ಷತ್ರದ ನಾಮಗಳು.

ಶ್ಲೋ॥ ರೇವತೀಪೌಷ್ಣಇತ್ಯಾಹು ರಂತ್ಯಃಪೂಷಾತಥೈವಚ ॥
ಟೀ॥ ರೇವತೀ, ಪೌಷ್ಣಃ, ಅಂತ್ಯಃ, ಪೂಷಾ, ಈ ೪ ನ್ನೂ ರೇವತೀ ನಕ್ಷತ್ರದ ಹೆಸರುಗಳು.

ನಕ್ಷತ್ರನಿಘಂಟು ಸಂಪೂರ್ಣವು.



## ರಾಸಿನಿಘಂಟು.

ಶ್ಲೋ॥ ಅಜಾಕ್ರಿಯಾಛಾಗಬಸ್ತಾತೂಬರಾವಿಶ್ವಭೆಷಜೀ ॥
ಮೆಷವಾದ್ಯಾಕ್ರಿಯಾಬಸ್ತಾಛಾಗೀವಾಗಿರಯಸ್ತಥಾ ॥
ಟೀ॥ ಅಜ, ಕ್ರಿಯಃ, ಛಾಗಃ, ಬಸ್ತಾ, ತೂಬರಃ, ವಿಶ್ವ, ಭೇಷಜೀ, ಮೇಷಃ, ಅದ್ಯಃ, ಕ್ರಿಯಃ, ಛಾಗೀ, ವಾಗಿ, ಅಯಃ, ಈ ೧೧ ಶಬ್ದಗಳುಮೇಷರಾಶಿಯ ಹೆಸರುಗಳು.

ಶ್ಲೋ॥ ವೃಷಭಸ್ತಾಉರುಗೌಶ್ಚವೃಷಉಕ್ಷಾತಥೈವಚ ॥
ಅನಡ್ವಾನ್ಸೌರಭೆಯಶ್ಚದೂರಕ್ಷೋಭೀವೃಷಾಹ್ವಯಃ ॥
ಟೀ॥ ವೃಷಭಃ, ತಾವುರಃ, ಗೌಃ, ವೃಷಃ, ಉಕ್ಷಾ, ಅನದ್ವಾನ್, ಸೌರಭೇಯಃ,ದೂರಕ್ಷೋಭೀ,ಈ೮ ನ್ನೂ ವೃಷಭರಾಶಿಯಹೆಸರು.

ಶ್ಲೋ ॥ ಮಿಥುನಂಯಮಳಂಯುಗ್ಮಂನೃಯುಗ್ಮಂಚಯುಗಂತಥಾ ॥
ಟೀ॥ ಮಿಥುನಂ, ಯಮಳಂ, ಯುಗ್ಮಂ, ನೃಯುಗ್ಮಂ, ಯುಗಂ ಈ ೫ ನ್ನೂ ಮಿಥುನರಾಸಿಯ ಹೆಸರುಗಳು.

ಶ್ಲೋ॥ ಕುಳೀರಕರ್ಕಿಕಟಕಃಕರ್ಕಿಣೀನಿಚಳೀಝುವರ್ಾ ॥
ಟೀ॥ ಕುಳೀರಃ, ಕರ್ಕಿಃಕಟಕಃ, ಕರ್ಕಿಣೀ, ನಿಚಳೀ,ಝುವರ್ಾ ಈ ೬ ನ್ನೂ ಕಟಕರಾಶಿಯನಾಮಗಳು.

ಶ್ಲೋ॥ ಸಿಹೊಮೃಗಾರಿರ್ಮೃಗರಾಟ್ ಮೃಗೆಂದ್ರೊಮೃಗನಾಯಕಃ। ಹರಿಃಪಂಚಾನನೊರಾಜಾಲೆಯೊಕಂಠೀರವಸ್ತಥಾ॥
ಟೀ॥ ಸಿಂಹಃ, ಮೃಗಾರಿಃ, ಮೃಗರಾಟ್, ಮೃಗೇಂದ್ರಃ, ಮೃಗನಾಯಕಃ ಹರಿಃ, ಪಂಚಾನನಃ, ರಾಜಾ, ಲೆಯಃ, ಕಂಠೀರವಃ, ಈ ೧೦ ಶಬ್ದಗಳು ಸಿಹ್ಮರಾಶಿಯ ಹೆಸರುಗಳು.

ಶ್ಲೋ ॥ ಅಂಗನಾಸ್ತ್ರೀವಧೂಃ ಕನ್ಯಾಪಾರ್ಥೆಯಂ ಕ

ನ್ಯಕಾಬಲಾ ॥

ಟೀ॥ ಅಂಗನಾ-ಸ್ತ್ರೀ, ವಧೂಃ, ಕನ್ಯಾ ಪಾರ್ಥಾ ಕನ್ಯಕಾ ಅಬಲಾಈ ೭ ನ್ನೂ ಕನ್ಯಾರಾಶಿಯಹೆಸರುಗಳು.

ಶ್ಲೋ॥ ತುಲಾತೌಳಿವಣಿಗ್ಜೂಕಃತುಲಾಭೃದ್ಘಟಸಂಜ್ಞಿಕಃ ॥

ಟೀ॥ ತುಲಾ ತೌಳೀ ವಣಿಕ್ ಜೂಕಃ ತುಲಾಭೃತ್ ದಟ ಈ ೬ ನ್ನೂ ತುಲಾರಾಶಿಯ ನಾಮಗಳು.

ಶ್ಲೋ ॥ ಅಳಿಸ್ಸರೀಸೃಪಃಕೌರ್ಪಿಃಕೀಟೋವೃಶ್ಚಿಕವಾಚಕಃ ॥

ಟೀ ॥ ಅಳಿಃ, ಸರೀಸೃಪಃ, ಕೌರ್ಪಿಃ, ಕೀಟಃ, ಈ ೪ ಶಬ್ದಗಳು ವೃಶ್ಚಿಕರಾಸಿಯ ಹೆಸರುಗಳು.

ಶ್ಲೋ॥ ಶಾರ್ಙ್ಗನಶರಾಸನಂಪ್ರೋಕ್ತಂತೌಕ್ಷಿಕಂಮಾರ್ಗಣಾಸ ನಂಚಾಪಂತೂಣೀರಬಾಣಂಚಧನುಃಕೋದಂಡಕಾರ್ಮುಕವೆ॥

ಟೀ॥ ಶಾರ್ಙ್ಗಂ, ಶರಾಸನಂ, ತೌಕ್ಷಿಕಂ, ಮಾರ್ಗಣಾಸನಂ, ಚಾಪಂ ತೂಣೀರಂ. ಬಾಣಃ ಧನುಃ ಕೋದಂಡಂ ಕಾರ್ಮುಕಂ ಈ ೧೦ ಶಬ್ದಗಳುಧನೂರಾಶಿಯ ಹೆಸರುಗಳು.

ಶ್ಲೋ॥ ಮಕರಸ್ಯಾನ್ಮೃಗೋನಕ್ರಶ್ಚಾಕೋಕೇಕಶ್ಚಕಥ್ಯತೆ ॥

ಟೀ॥ ಮಕರಃ. ಮೃಗಃ ಆಕೋಕೇಕಃ ಈ ೩ ನ್ನೂ ಮಕರರಾಶಿಯಹೆಸರುಗಳು.

ಶ್ಲೋ॥ ಕುಂಭೋಘಟೋಜಲಧರೋಹೃದ್ರೋಗಇತಿಕೀರ್ತಿತಾಃ॥

ಟೀ॥ ಕುಂಭಃಘಟಃ ಜಲಧರಃ ಹೃದ್ರೋಗಃ ಈ ೪ ನ್ನೂ ಕುಂಭರಾಶಿಯು ಹೆಸರುಗಳು.

ಶ್ಲೋ॥ಮೀನಾಂತ್ಯೋನಿಮಿಷೋಮತ್ಸ್ಯೋಝುಷಶ್ಚಾವಾರಿಜೋಂಡಜಃ। ಜಲಜೋಪೃಥುರೂಪಾಚಮೀನಸಂಜ್ಞಾಪ್ರಕೀರ್ತಿತಾಃ।

ಟೀ॥ ಮೀನಃ ಅಂತ್ಯಃ ಅನಿಮಿಷಃ ಮತ್ಸ್ಯಃ ಝುಷಃ ವಾರಿಜಃ ಅಂಡಜಃಜಲಜಃ ಪೃಥುರೂಪಾ ಈ ೯ ಶಬ್ದಗಳುಮೀನರಾಸಿಯ ಹಸರುಗಳು.

ರಾಸಿನಿಘಂಟು ಸಂಪೂರ್ಣವು.

ಶ್ಲೊ॥ ಆದಿತ್ಯೋರ್ಕ್ಕರವಿರ್ಭಾನುರ್ಭಾಸ್ಕರಶ್ಚದಿವಾಕರಃ।
ಮಾರ್ತಾಂಡಸ್ಸವಿತಾಹೇಳಿಸ್ತೀಕ್ಷ್ಣಾಂಶುರ್ಮಿಹಿರೋರವಿಃ ॥

ಟೀ॥ ಆದಿತ್ಯಃ, ಅರ್ಕಃ, ರವಿಃ, ಭಾನುಃ, ಭಾಸ್ಕರಃ, ದಿವಾಕರಃ ಮಾರ್ತಾಂಡಃ ಸವಿತಾ, ಹೇಳಿಃ, ತೀಕ್ಷ್ಣಾಂಶುಃ, ಮಿಹಿರಃ, ಈ೧೧ ನ್ನೂ ಸೂರ್ಯಗ್ರಹದ ಹೆಸರುಗಳು.

ಶ್ಲೋ॥ ಚಂದ್ರಶ್ಚಶಶಶಾಂಕಶ್ಚ ವಿಧುಸ್ಸೋಮೊ ನಿಶಾಕರಃ।
ಶೀತಾಂಶುರುಡುನಾಥಶ್ಚ ಇಂದುಃಶ್ಚಂದ್ರಮಸೋದುಃ ॥

ಟೀ॥ ಚಂದ್ರಃ, ಶಶೀ, ಶಶಾಂಕಃ, ವಿಧುಃ, ಸೋಮಃ, ನಿಶಾಕರಃ ಶೀತಾಂಶುಃ, ಉಡುನಾಥಃ ಇಂದುಃ ಈ ೯ ಶಬ್ದಗಳುಚಂದ್ರಗ್ರಹದನಾಮಗಳು.

ಶ್ಲೋ॥ ಆರೋವಕ್ರೋಮಹೀಜಶ್ಚ ರುಧಿರೋರಕ್ತಯೆವಚ।
ಅಂಗಾರಕಃಕುಜೊಭೌಮೊರೋಹಿತಾಂಗೋಮಹೀಸುತಃ ॥

ಟೀ॥ ಆರಃ, ವಕ್ರಃ, ಮಹೀಜಃ, ರುಧಿರಃ ರಕ್ತಃ, ಅಂಗಾರಕಃ, ಕುಜಃಭೌಮಃ, ಲೋಹಿತಾಂಗಃ, ಮಹೀಸುತಃ, ಮತ್ತು ಕ್ರೂರದೃಕ್, ಅವನೇಯಃ, ಈ ೧೨ ನ್ನೂ ಕುಜಗ್ರಹದ ಹೆಸರುಗಳು.

ಶ್ಲೋ॥ ಸೌಮ್ಯೋವಿಡ್ಜ್ಞೋಬುಧೊಹೇಮಸ್ಸೋಮಜೊಬೋಧನಃಕ್ರಮೊತ್ ॥

ಟೀ॥ ಸೌಮ್ಯಃ ವಿಟ್ ಜ್ಞಃ, ಬುಧಃ, ಹೇಮಃಸೋಮಜಃಬೋಧನಃ ಈ ೭ ನ್ನೂ ಬುಧಗ್ರಹದಹೆಸರುಗಳು.

ಶ್ಲೋ॥ ಜೀವಆಂಗೀರಸೊವಾಚಸ್ಪತಿಶ್ಚಿತ್ರಶಿಖಂಡಿಜಃ।
ಆರ್ಯೋಬೃಹಸ್ಪತಿಸ್ಸೂರಿರ್ವಾಗೀಶೊವಚಸಾಂಪತಿಃ ॥

ಟೀ॥ ಜೀವಃ ಆಂಗೀರಸಃ ವಾಚಸ್ಪತಿಃ ಚಿತ್ರಶಿಖಂಡಿಜಃ ಆರ್ಯ ಬೃಹಸ್ಪತಿಃ ಸೂರಿಃ ವಾಗೀಶ ವಚಸಾಂಪತಿಃ ಈ ಶಬ್ದಗಳು ಬೃಹಸ್ಪತಿಯಹೆಸರುಗಳು.

ಶ್ಲೋ॥ ಶುಕ್ರೋಭೃಗುರ್ಭೃಗುಸುತಸ್ತ್ವಪ್ಪಜಶ್ಚಶ್ಚಸಿತಶ್ಚಸಃ
ಉಶನಾದೈತ್ಯಪೂಜ್ಯಶ್ಚಕಾವ್ಯಃಕವಿರಿತಿಸ್ಮೃತಃ ॥

ಟೀ॥ ಶುಕ್ರಃ ಭೃಗುಃ ಭೃಗುಸುತಃ ಅಪ್ಪಜಃ ಸಿತಃ ಉಶನಾಃ ದೈತ್ಯಪೂಜ್ಯಃಕಾವ್ಯಃ ಕವಿಃ ಈ ೯ ಶಬ್ದಗಳುನ್ನೂ ಶುಕ್ರಗ್ರಹದ

ಹೆಸರುಗಳು.

ಶ್ಲೋ.॥ ಕೋಣೋಮಂದಶ್ಶನಿಃಕೃಷ್ಣಸ್ಸೂರ್ಯಪುತ್ರೋಯಮ
ಶ್ಚಸಃಪಂಗುಶ್ಶನೈಶ್ಚರಸೌರಿಃಕಾಲಚ್ಛಾಯಾಸುತಶ್ಚಸಃ,

ಟೀ॥ ಕೋಣಃ, ಮದಃ, ಶರಃ ಕೃಷ್ಣಃ, ಸೂರ್ಯಪುತ್ರಃ ಯಮಃ ಗುಂಗುಃಶನೈಶ್ಚರ ಸೌರಿ ಕಾಲ ಛಾಯಾಸುತಃ ಈ ೧೧ ನ್ನೂ ಶನಿ ಗ್ರಹದನಾಮಗಳು.

ಶ್ಲೋ॥ ರಾಹುಸ ಮಸ್ಸುರೊಗಶ್ಚಸ್ವರ್ಭಾನುಸ್ಚನಿಧುಂತುದಃ।
ಪಾತುಶ್ಚಸೈಂಹಿಕೆಯಶ್ಚಭುಜಗಾಖ್ಯಾಇತಿಸ್ಮೃತಃ ॥

ಟೀ॥ ರುಹುಃ ತಮಃ ಸುರೋಗಃ ಸ್ವರ್ಭಾನುಃ ವಿಧುಂತಂದ ಪಾತುಃ ಸೈಂಹಿಕೆಯಃ ಭುಜಗಾಖ್ಯಃ ಈ ೮ ನ್ನೂ ರಾಹುಗ್ರಹದ ಹೆಸರುಗಳು.

ಶ್ಲೋ॥ಕೆತುಶ್ಶಿಖಿಧ್ವಜೊಧೂಮ್ರಉತ್ಪಾತೊಬಹುರೂಪಕೃತ್
ಶಿರೊಹೀನೊಘೊರರೂಪಶ್ಚಿತ್ರವರ್ಣಸ್ಸುಕೆತವಃ ॥

ಟೀ॥ ಕೇತುಃ ಶಿಖಿಃ ಧ್ವಜಃ ದೂಮ್ರಃ ಉತ್ಪಾತಃ ಬಹುರೂಪ ಕೃತ್ ಶಿರೋಹೀನಃ ಘೋರರೂಪಃ ಚಿತ್ರವರ್ಣಃ ಸುಕೇತುಃ ಈ ೧೦ ಶಬ್ದಗಳು ಕೇತುಗ್ರಹದ ಹೆಸರುಗಳು.

ಗ್ರಹನಿಘಂಟು ಸಂಪೂರ್ಣವು.



## ಅಥ ಸ್ಥಾನ ನಿಘಂಟು ಪ್ರಾರಂಭಃ.

ಶ್ಲೋ॥ಕ್ಷಿತೀಶೊಪ್ಯುದಯೋರಾಶಿರ್ಲಗ್ನಂಹೊರೊದಯಸ್ತನ॥
ಕಲ್ಯೋವಿಲಗ್ನಮಾತ್ಮಾಚಭಾವೊಯಂಮೊಭವತ್॥

ಟೀ॥ಕ್ಷಿತೀಶಃ,ಉದಯಃ,ರಾಶಿಃ,ಲಗ್ನಂ,ಹೋರೋದಯಃತನುಃ ಕಲ್ಯಃ, ವಿಲಗ್ನಂ, ಆತ್ಮಾ, ಈ ಶಬ್ದಗಳು ಲಗ್ನಭಾವದ ಹೆಸರುಗಳು

ಶ್ಲೋ।ದ್ವಿತೀಯಂಧನವಾಗ್ವಿತ್ತಂಕುಟುಂಬಂನ್ವೆತ್ರಸಂಜ್ಞಕಂ

ಟೀ॥ದ್ವಿತೀಯಂ, ಧನಂ ವಾಕ್,ವಿತ್ತ,ಕುಟುಂಬಂ, ನೇತ್ರಸಂಜ್ಞಕಂಈ೬ನ್ನೂ ದ್ವಿತೀಯ ಭಾವದ ಹೆಸರುಗಳು.

ಶ್ಲೋ॥ತೃತೀಯಂವಿಕ್ರಮಭ್ರಾತೃದುಶ್ಚಿತ್ಕಂಸಹಜಸ್ತಥಾ॥

ಟೀ॥ತೃತೀಯಂ,ವಿಕ್ರಮಃ,ಸಹಜಃ,ಭ್ರಾತಾ,ದುಶ್ಚಿತ್ಕಂ,ಈ೫ನ್ನೂ

ತೃತೀಯಭಾವದ ಹೆಸರುಗಳು

ಶ್ಲೋ॥ಚತುರ್ಥಂಹಿಬುಕಂವೇಶ್ಮಬಂಧುರಬ್ಧಿಸ್ಸುಖಂಜಲಂ
ಪಾತಾಳಂಜನನೀಮಾತ್ರ್ಯುದಕಂಚಪಯೋಮೃತಂ।

ಟೀ॥ ಚತುರ್ಥಂ,ಹಿಬುಕಂ,ವೇಶ್ಮ,ಬಂಧುಃ,ಅಬ್ಧಿಃ,ಸುಖಂ,ಜಲಂ ಪಾತಾಳಂ, ಜನನೀ, ಮಾತಾ,ಉದಕಂ,ಪಯಃ,ಈ ೧೨ನ್ನೂ ಚತುರ್ಥಭಾವದ ಹೆಸರುಗಳು.

ಶ್ಲೋ॥ಪಂಚಮಂತನಯೋಮಂತ್ರೀಹ್ಯಾತ್ಮಾಚಸುತಉಚ್ಯತೆ।

ಟೀ॥ಪಂಚಮಂ, ತನಯಃ,ಮಂತ್ರೀ,ಆತ್ಮ,ಸುತಃ, ಈ ೫ನ್ನೂ ಪಂಚಮಭಾವದಹೆಸರುಗಳು.

ಶ್ಲೋ॥ಷಷ್ಠಮಂರಿಪುಯಿತ್ಯಾಹುಃಕ್ಷತಇತ್ಯಭಿಧೀಯತೆ॥

ಟೀ॥ಷಷ್ಠಮಂ,ರಿಪು,ಣಿಳಂ,ಕ್ಷತ,ಈ೪ನ್ನೂ ಷಷ್ಠಭಾವದಹೆಸರುಗಳು

ಶ್ಲೋ॥ಸಪ್ತಮಂದ್ಯೂನಮಸ್ತಂಚದ್ಯೂತಂಚಮದನಸ್ಮರಃ।
ಕಾಮೊವಿವಾಹೊಜಾಮಿತ್ರಂಭಾರ್ಯೆತಿವಿನಿದರ್ಶಿತಂ।

ಟೀ॥ ಸಪ್ತಮಂ,ದ್ಯೂನಂ,ಅಸ್ತಂ, ದ್ಯೂತಂ, ಮದನಃ, ಸ್ಮರಃ, ಕಾಮಃವಿವಾಹಃ ಜಾಮಿತ್ರಂ, ಭಾರ್ಯಾಈ ೧೦ನ್ನೂ ಸಪ್ತಮಭಾವದಹೆಸರುಗಳು

ಶ್ಲೋ॥ಅಷ್ಟಮಂನಿಧನಂರಂಧ್ರಂಪಾಪಮಾಯುರ್ಮೃತೀರುಜಾ

ಟೀ॥ಅಷ್ಟಮಂ, ನಿಧನಂ,ರಂಧ್ರಂ,ಪಾಪಂ, ಆಯುಃ, ಮೃತಿಃ, ರುಜಾಈ೭ನ್ನೂ,ಅಷ್ಟಮಭಾವದ ಹೆಸರುಗಳು,

ಮೂ॥ನವಮಂಚತ್ರಿಕೋಣಂಚ ಸುಕೃತಂ ಗುರುಭಾಗ್ಯಕಂ,ಪಿತೃಜ್ಞಾನೊದಯೊಭಕ್ತಿರ್ದೇವದೊಪಾಸನಸ್ತಥಾ॥

ಟೀ॥ನವಮಂ, ತ್ರಿಕೋಣಂ,ಸುಕೃತಂ,ಗುರು,ಭಾಗ್ಯಂ, ಪಿತಾ, ಜ್ಞಾನೋದಯಃ,ಭಕ್ತಿಃ,ದೇವತೋಪಾಸನ,ಈ೯ನ್ನೂನವಮಭಾವದಹೆಸರುಗಳು.

ಮೂ॥ದಶಮೊಮಾನಆಜ್ಞಾಪಿ ಕರ್ಮಸ್ಥಾನಮಿತಿಸ್ಮೃತಃ॥೭
ವೃದ್ಧಿಕರ್ಮಾಭಿಧಾನಂಚ ವಜ್ರಿಸಂಕ್ಷಯಉಚ್ಯತೆ

ಟೀ॥ದಶಮಃ, ಮಾನಃ, ಆಜ್ಞಾ, ಕರ್ಮಃ,ಸ್ಥಾನಂ,ವೃದ್ಧಿಃ,ಕರ್ಮಾಭಿಧಾನಂ, ವಜ್ರೀ, ಸಂಕ್ಷಯಃ,ಈ೯ನ್ನೂದಶಮಭಾವದನಾಮಗಳು

ಮೂ॥ಏಕಾದಶೋಭವೇಲಾಭಆಯುಃಶ್ಚವಿಜಯೀಶುಭಃ॥

ಟೀ॥ ಏಕಾದಶಃ,ಲಾಭಃ,ಆಯುಃ,ವಿಜಯೀಶುಭಃ,ಈ೫ನ್ನೂ ಏಕಾದಶ ಭಾವದ ನಾಮಗಳು.

ಮೂ॥ದ್ವಾದಶಂಚವ್ಯಯಸ್ಥಾನಂಪಾಪಸ್ಥಾನಂಪ್ರಶಸ್ಯತೇ॥

ಟೀ॥ದ್ವಾದಶಂ, ವ್ಯಯಸ್ಥಾನಂ, ಪಾಪಸ್ಥಾನಂ,ಈ೩ನ್ನೂದ್ವಾದಶಭಾವದ ಹೆಸರುಗಳು

ಸ್ಥಾನನಿಘಂಟು ಸಂಪೂರ್ಣ



ಅಥ ಭಾವ ನಿಘಂಟು ಪ್ರಾರಂಭಃ,

ಮೂ॥ ಲಗ್ನಂಸ್ಯಾದುದಯೋರಾಶಿಃ ಕಲ್ಯಂಹೋರೋದಯಸ್ತನುಃ
ಆದ್ಯೋದೇಹಶ್ಶರೀರಂಚ ವಿಲಗ್ನಾಧಾರಮೂರ್ತಯಃ॥೧॥
ಸ್ವಭಾವೋಜನ್ಮಚಾತ್ಮಾಚ ಭಾವೋಯಂಪ್ರಥಮಸ್ಸ್ಮೃತಃ,

ಟೀ॥ಲಗ್ನಂ,ಉದಯಃ,ರಾಶಿಃ,ಕಲ್ಯಂ,ಹೋರಾ,ಉದಯಃ,ತನುಃ ಅದ್ಯಃ,ದೇಹಃ,ಶರೀರಂ, ವಿಲಗ್ನಂ,ಆಧಾರಃ, ಮೂರ್ತಯಃ, ಸ್ವಭಾವಃಜನ್ಮ,ಆತ್ಮ,ಈ೧೬ಶಬ್ದಗಳು ಲಗ್ನ ಭಾವದ ಹೆಸರುಗಳು.

ಮೂ॥ದ್ವಿತೀಯಂದ್ರವಿಣಂಸ್ವಾರ್ಥಕುಟುಂಬೋಧನವೇಶ್ಮಕಂ ಸತ್ಯವಾಚಿಕವಾಕ್ಸ್ಥಾನೆಯುಗ್ಮಂಕೋಶೋಹಿರಣ್ಯಕಂ।ಕರ್ಣಃ ಪ್ರಯಾಣನೇತ್ರಂಚಮುಖಂದಕ್ಷಿಣನೇತ್ರಿಕಂ೩॥ಲೋಹಂಮುಕ್ತಾಫಲಂಸ್ವರ್ಣಂವಿದ್ಯಾಭುಕ್ತಿಸ್ತುಕಂಬಳಃ। ರತ್ನಂಧಾತುಶ್ಚವಿತ್ತಂಚ ಭಾವೋಯಂಚದ್ವಿತೀಯಕಃ॥

ಟೀ॥ದ್ವಿತೀಯಂ,ದ್ರವಿಣಂ,ಸ್ವಂ,ಅರ್ಥಃ,ಕುಟುಂಬಃ,ಧನವೇಶ್ಮ ಸತ್ಯವಾಚಿಕಂ,ವಾಕ್ಸ್ಥಾನಂ, ಯುಗ್ಮಂ, ಕೋಶಃಹಿರಣ್ಯಕಂ, ಕರ್ಣಃ,ಪ್ರಯಾಣಂ,ನೇತ್ರಂ,ಮುಖಂ,ದಕ್ಷಿಣನೇತ್ರ,ಲೋಹಂ,ಮುಕ್ತಾಫಲಂ,ಸ್ವರ್ಣಂ,ವಿದ್ಯಾ,ಭುಕ್ತಿಃ, ಕಂಬಳಂ,ರತ್ನಂ, ಧಾತುಃ,ವಿತ್ತಂ,ಈ೨೫ನ್ನೂ ದ್ವಿತೀಯ ಭಾವದನಾಮಗಳು.

ಮೂ॥ತೃತೀಯಂಭಗಿನೀಭ್ರಾತಾಸಹಜಶ್ಚಾಗ್ರಜೋನುಜಃ।ಸಹಭಾವೋಗ್ರುಧಾಯೋಗಃದಾಸೀದಾಸ್ಯಾದಿವರ್ಗಕಂ।೫॥ಸತ್ವಂಪರಾಕ್ರಮಃಕೋಪಃರೌದ್ರಂಶಾಂತಮುಪಾಯಕಂ। ಕಾರ್ಯಸಂದಾ

ನಮಿತ್ರಂಚಸ್ವರೋಗರಣಭಕ್ಷಣಂ ॥ಆಪ್ರೋಕ್ಲೀಬಂದರಕ್ಷೇತ್ರಂ ಭಾ
ವೋಯಂಚ ತೃತೀಯಕಂ॥

ಟೀ॥ತೃತೀಯ, ಭಗಿನೀ,ಭ್ರಾತಾ,ಸಹಜ,ಅಗ್ರಜ,ಅನುಜ, ಸಹ
ಭಾವ,ಪುಗಧಾರಯೋಗ,ದಾಸೀ, ದಾಸ್ಯಾದಿವರ್ಗಃ, ಸತ್ವಂ, ಪರಾ
ಕ್ರಮಃ, ಕೋಪಃ,ರೌದ್ರಂ,ಶಾಂತಂ,ಉಪಾಯಕಂ, ಕಾರ್ಯಸಂಧಾ
ನಂ, ಮಿತ್ರಂಸ್ವರಃ,ಗರಳಭಕ್ಷಣಂ,ಅಪ್ರೋಕ್ಲೀಬಂ, ದರಕ್ಷೇತ್ರ, ಈ
೧೭ನ್ನೂ ತೃತೀಯಭಾವದಹೆಸರುಗಳು.

ಮೂ॥ ಚತುರ್ಥಂಜಲಪಾತಾಳೆಬಂಧುಶ್ಚ ಹಿಬುಕಂಸುಖಂ॥೭॥
ವಾಪೀಕೂಪತಟಾಕಾಶ್ಚ ಪ್ರವಾಹೊದ್ವಾರಮೆದೆನೀ। ಪುಸ್ತಕಂ
ಗೃಹಶಯ್ಯಾಚಪಶುಸಸ್ಯಂಚಧಾನ್ಯಕಂ॥೮॥ವಿದ್ಯಾವಾಹನಕಾ
ರ್ಯೆಚಮಾತೃಷೌಷಧ ಮಂತ್ರಕಂ ವಿವಾದಸಾಕ್ಷಿಪೌರಾಣಂ ಭಾ
ವೋಯಂಚಚತುರ್ಥಕಂ॥

ಟೀ ॥ ಚತುರ್ಥಂ,ಜಲಂ,ಪಾತಾಳಂ,ಬಂಧುಃ,ಹಿಬುಕಂ,ಸುಖಂ,
ವಾಪೀಕೂಪಃ,ತಟಾಕಃ,ಪ್ರವಾಹಃದ್ವಾರಂಃ,ಮೇದಿನೀ,ಪುಸ್ತಕಂ
ಗೃಹಂ,ಶಯ್ಯಾ,ಪಶುಃ,ಸಸ್ಯಂ, ಧಾನ್ಯಕಂ, ವಿದ್ಯಾ, ವಾಹನ, ಕಾ
ರ್ಯಂಮಾತಾ,ಔಷಧಂ,ಮಂತ್ರಕಂ,ವಿವಾದಸಾಕ್ಷಿ,ಪೌರಾಣಂಈ
೨೬ ನ್ನು ಚತುರ್ಥಭಾವದಹೆಸರುಗಳು.

ಮೂ ॥ಪಂಚಮಂಮಂತ್ರಿಪುತ್ರಶ್ಚ ತನಯೊಪ್ರತಿಭಾತ್ಮಜಃ॥ಪ
ಣಾಪರಶ್ಯಕ್ತಿಶ್ಚ ಭಾವೋಯಂಪಂಚಮಸ್ಮೃತಃ॥

ಟೀ॥ಪಂಚಮಂ,ಮಂತ್ರೀ,ಪುತ್ರಃ,ತನಯಃ,ಪ್ರತಿಭಾ,ಆತ್ಮಜಃ
ಪಣಾಪರಃ,ಶಕ್ತಿಃ,ಈ೮ನ್ನು ಪಂಚಮಭಾವದ ಹೆಸರುಗಳು.

ಮೂ॥ಷಷ್ಟೋವೈರಿರಿಪುಶ್ಶತ್ರುಃಕ್ಷತಾರೀರೋಗಭೀತಿದಂ।
ಜ್ಞಾತಿಶಸಾಂತ್ರ್ಯಪಣಂಪಾಪಂ ಭಾವೋಯಂಷಷ್ಠಮಸ್ಮೃತಃ॥

ಟೀ॥ಷಷ್ಠಃವೈರೀ,ರಿಪುಃ, ಶತ್ರುಃ, ಕ್ಷತಃ, ರೋಗಃ, ಭೀತಿಃ,ಜ್ಞಾ
ತಿಃ,ಶಸಾಂತ್ರ,ಆಪಣಂ,ಪಾಪಂ,ಈ೧೨ಷಷ್ಠಭಾವದಹೆಸರುಗಳು.

ಮೂ॥ಜಾಮಿತ್ರ್ಯಂಜೂಕಮಸ್ತಂಚಕಾಮೋಭರ್ತೃತಿಚಸ್ಮರಃ॥ಕಟ
ಕೊದ್ಯೂತವಾಣಿಜ್ಯಕ್ರಯವಿಕ್ರಯಸಂಗ್ರಹಃ॥೧೨॥ಕಳತ್ರಂ
ಸೌಖ್ಯವೈವಾಹೆಂಭೋಗಸ್ಥಾನಂಮನೋಹರಂ। ಅಲಂಕೃತಿಶ್ಚ

ಸರ್ವೇಷಾಂಭಾವ್ರೊಯಂಸಪ್ತಮಸ್ಮೃತಃ

ಟೀ॥ಜಾಮಿತ್ರಂ,ಜೂಕಂ,ಅಸ್ತಂ,ಕಾಮಃ, ಭಾರ್‍ಯಸ್ಮರಃಕಟಕಃ, ದ್ಯೂತಂ,ವಾಣಿಜ್ಯಂ,ಕ್ರಯಃ,ವಿಕ್ರಯಸಂಗ್ರಹಃ,ಕಳತ್ರಂ, ಸೌಖ್ಯಂವೈವಾಹಂ, ಭೋಗಸ್ಥಾನಂ,ಮನೋಹರಂ,ಅಲಂಕೃತಿಃ, ಈ ಹದಿನೇಳುಸಪ್ತಮಭಾವದ ಹೆಸರು

ಮೂ॥ಅಷ್ಟಮಂನಿಧನಂರಂಧ್ರಂಮೃತಿರ್ನಾಶಶ್ಚನೈಧನಂ ।ಆಯುಷ್ಯಂಜೀವನೋಪಾಯಂಮೋಕ್ಷೋಲಯನಿವಾರಣೆ।೧೪॥ಭಕ್ಷಭೋಜ್ಯಾದಿನಾಶಶ್ಚಭಾವ್ರೊಯಂಚಾಷ್ಟಮಃಸ್ಮೃತಃ॥

ಟೀ॥ಅಷ್ಟಮಂ,ನಿಧನಂ,ರಂದ್ರಂ,ಮೃತಿಃನಾಶಃ,ನೈಧನಂಆಯುಷ್ಯಂ ಜೀವನೋಪಾಯಂ. ಮೋಕ್ಷಃ.ಲಯಃ.ನಿವಾರಣಂಃ ಭಕ್ಷಭೊಜ್ಯಾದಿನಾಶಃ.ಈ೧೨ಅಷ್ಟಮಭಾವದ ಹೆಸರುಗಳು.

ಮೂ॥ನೂವಮಂತಪಧೀಕಂಚಸುಕೃತಂಗುರುಭಾಗ್ಯಕಂ॥೧೫॥ ಪಿತೃಜ್ಞಾನಂದಯಾಭಕ್ತಿರ್ದೇವತೋಪಾಸನಸ್ತಥಾ । ಚಿತ್ರಾನಂದದಥಾಸ್ವಾಮೀಭಾವ್ರೊಯನ್ನವಮಸ್ಮೃತಃ॥

ಟೀ॥ನವಮಂ.ತಪಧೀಕಂ. ಸುಕೃತಂ. ಗುರುಃ.ಭಾಗ್ಯಕಂ. ಪಿತೃಜ್ಞಾನಂ·ದಯಾಭಕ್ತಿಃ.ದೇವತೋಪಾಸನಂ. ಚಿತ್ರ. ಆನಂದಃಸ್ವಾಮಿಈ೧೨ನವಮಭಾವದ ಹೆಸರುಗಳು.

ಮೂ॥ದಶಮಮಾನಸಂಕರ್ಮವ್ಯಾಪಾರೊಂಬರಮೆವಚ । ಕಾರ್‍ಯಂಚವ್ಯೋಮವಾಕಾಶಃಆಜಾಪುಣ್ಯದರಾಜ್ಯಕಂ॥೧೬॥ವೀರ್‍ಯಸ್ಥಾನಂಚಸತ್ಕರ್ಮಭಾವ್ರೊಯಂದಶಮಸ್ಮೃತಃ॥

ಟೀ॥ದಶಮಂ.ಮಾನಸಂ. ಕರ್ಮಂ. ವ್ಯಾಪಾರಃ. ಅಂಬರಃ. ಕಾರ್‍ಯಂ.ವ್ಯೋಮ.ಆಕಾಶಃ.ಆಜಾ.ಪುಣ್ಯಂ. ರಾಜ್ಯಕಂ. ವೀರ್‍ಯ. ಸತ್ಕರ್ಮ.ಈಹದಿಮೂರು ದಶಮಭಾವದ ಹೆಸರುಗಳು.

ಮೂ॥ಏಕದಶಂಭವೆತ್ರಾಯುರರ್ಧಲಾಭೊಜಯಸ್ತಥಾ॥೧೭॥ ಪೃಷ್ಠಂಸ್ಯಾದಧಪೃಷ್ಠಂಚಭಾವ್ರೊಚ್ಚೈಕಾದಶಸ್ಮೃತಃ॥

ಟೀ॥ಏಕಾದಶಂ.ಆಯು. ಅರ್ಧಲಾಭಃ. ಜಯಃ.ಪೃಷ್ಠ. ಅಧಃಪೃಷ್ಠಂ ಈ ಆರೂ ೧೧ನೇ ಭಾವದ ಹೆಸರುಗಳು

ಮೂ॥ ದ್ವಾದಶಾಂತ್ಯೋವ್ಯ ಯೋರಿಪ್ಪಃ ಆಘ್ರೋಕ್ಲಿಬೊಪವರ್ಗ

ಶ್ಲೋ॥ಲಾಕ್ಷೇಣನರಕೋನಾಶೋಭಾವೋಯಂದ್ವಾದಶಸ್ಮೃತಃ।
ಟೀ॥ದ್ವಾದಶ.ಅಂತ್ಯಃ.ವ್ಯಯಃ।ರಿಪ್ಪಃಅಪ್ರೋಕ್ಷ್ಮೀಬಃ.ಅಪವರ್ಗಃ ಲಾಕ್ಷೇಣಃ,ನರಕಃ,ನಾಶಃ.ಈಒಂಬತ್ತು೧೨ನೇಭಾವದಹೆಸರು.

ಭಾವನಿಘಂಟು ಸಂಪೂರ್ಣವು.



ಕಾರಕ ನಿಘಂಟು ಪ್ರಾರಂಭವು.

ಮೂ॥ಆತ್ಮಾಪ್ರಭಾವೋಶಕ್ತಿಶ್ಚಪಿತೃಚಿಂತಾರವೇಃಫಲಂ।
ಟೀ॥ ಆತ್ಮ.ಪ್ರಭಾವ.ಶಕ್ತಿಃ.ನೆವುಗಳಿಗೆಕಾರಕನು ಸೂರ್ಯನು.
ಮೂ॥ನುನೋಬುದ್ಧಿಃಪ್ರಸಾದಂಚವಾತೃಚಿಂತಾಚಚಂದ್ರಮಾಃ।
ಟೀ॥ ಮನಸ್ಸು. ಬುದ್ಧಿಪ್ರಸಾದಮಾತೃಚಿಂತಾಇವುಗಳಿಗೆಕಾರಕನುಚಂದ್ರನು.
ಮೂ॥ಭ್ರಾತಾಭೃತ್ಯಗಣೋಭೂಮಿರ್ಭೌಮೇನೈವವಿಚಿಂತಯೇತ್॥
ಟೀ॥ಭ್ರಾತೃ.ಭೃತ್ಯಗಣಃಭೂಮಿಇವುಗಳನ್ನು ಅಂಗಾರಕನಿಂದಲೇಯೋಚಿಸತಕ್ಕದ್ದು ಅಂಗಾರಕನು ಇವುಗಳಿಗೆಕಾರಕನು.
ಮೂ॥ವ್ಯಾಜ್ಞಾಚಕರ್ಮವಿಜ್ಞಾನಂ ಬುಧೇನೈವವಿಚಿಂತಯೇತ್
ಟೀ॥ವ್ಯಾಜ್ಞಾ.ಕರ್ಮ. ವಿಜ್ಞಾನಈ೩ಕ್ಕೂಬುಧನೇಕಾರಕನು.
ಮೂ॥ಗುರುಣಾದೇಹಪುಷ್ಟಿಶ್ಚಬುದ್ಧಿಪುತ್ರಾರ್ಥಸಂಪದಃ॥
ಟೀ॥ ದೇಹಪುಷ್ಟಿಬದ್ಧಿಪುತ್ರಅರ್ಥಸಂಪತ್ತು.ಇವುಗಳಿಗೆಗುರುಕಾರಕನು.
ಮೂ॥ ಶುಕ್ರೋವಿವಾಹಂಭಾಗ್ಯಂಚಭೋಗಸ್ಥಾನಂಚವಾಹನಂ॥
ಟೀ॥ಶುಕ್ರನುವಿವಾಹ. ಭಾಗ್ಯ. ಭೋಗಸ್ಥಾನವಾಹನ ಇವುಗಳಿಗೆ ಕಾರಕನು.
ಮೂ॥ ಆಯುಷ್ಯಂ ಜೀವನೋಪಾಯಂ ಮರಣಂಚಶನೈಶ್ಚರಃ।
ಟೀ॥ ಶನೈಶ್ಚರನು ಆಯುಷ್ಯ ಜೀವನೋಪಾಯ ಮರಣಇವುಗಳಿಗೆಕಾರಕನು.
ಮೂ॥ತಟಾಕಾರಾಮವಿಶ್ರಾಮೋರಾಹೋರ್ಮಾತಾಮಹಂಭವೇತ್
ಟೀ॥ ರಾಹುವು ತಟಾಕ ಆರಾಮ ವಿಶ್ರಾಮ ಮಾತಾಮಹ ಇವುಗಳಿಗೆ ಕಾರಕನು.

ಮೂ॥ ಕೇತೋಪಿತಾಮಹಶ್ಚಿಂತಾ ಬಹುಧಾನಶ್ಚ ಮೋಕ್ಷದಃ ॥

ಟೀ॥ ಕೇತುವು ಪಿತಾಮಹ ಚಿಂತಾ ಬಹುಧಾನ ಮೋಕ್ಷ ಇವುಗಳಿಗೆಕಾರಕನು.

ಕಾರಕ ನಿಘಂಟು ಸಂಪೂರ್ಣವು.

ಅಂಕೆಗಳಸಂಜ್ಞಾನಿ ಘಂಟು.

ಮೂ॥ ಶಶೀಸೋಮಶ್ಶಕಾಂಕಶ್ಚ ಇಂದ್ರುಕಳಾನಿಧಿಃ ।
ರಾಜಾವಿಧುಸ್ಸುಧಾಂಶುಶ್ಚ ಯಮುವಿಕಜನಸ್ತಥಾ ॥

ಟೀ॥ ಶಶೀ ಸೋಮ ಶಕಾಂಕಃ ಇಂದುಃ ಚಂದ್ರಃ ಕಳಾನಿಧಿಃ ರಾಜಾ ವಿಧುಃ ಸುಧಾಂಶುಃ ಯಮುಃ ಏಕಃ ಜನಃ ಈ ೧೨ ನ್ನು ಒಂದು ಅಂಕೆಯು ಹೆಸರುಗಳು.

ಮೂ॥ ಅಕ್ಷೀಚಕ್ಷುಕರಂನೇತ್ರಂ ಲೋಚನಂಬಾಹುಕರ್ಣಕಾಃ ।
ಪಕ್ಷದೃಷ್ಟಿದ್ವಯಂಯುಗ್ಮಂಅಂಬಕೌನಯನೇಕ್ಷಣೇ ॥

ಟೀ॥ ಅಕ್ಷಿ ಚಕ್ಷುಃ ಕರಂ ನೇತ್ರಂ ಲೋಚನಂ ಬಾಹುಃ ಕರ್ಣಕಃ ಪಕ್ಷಃ ದೃಷ್ಟಿಃ ದ್ವಯಂ ಯುಕಗ್ಮಂ ಅಂಬಕಾ ನಯನೇಯಿಕ್ಷಣಂಯಿವಾಗಳ ನ್ನೂ ಯೆರಡೆಂಬ ಸಂಖ್ಯೆಗಳ ಹೆಸರುಗಳು.

ಮೂ॥ ವಹ್ನಿರಾಮಶಿಖೀಚಾಗ್ನಿಃ ಪಾವಕೋದಹನಾನಲೌ ।
ಶಂಕರಾಕ್ಷೀಪುರೀಲೋಕಾತ್ರೀಣಿಕಾಲರೂತ್ರಯೋಗುಣಃ ॥

ಟೀ॥ ವಹ್ನಿಃ ರಾಮಃ ಶಿಖೀ ಅಗ್ನಿಃ ಪಾವಕಃ ದಹನಃ ಅನಲಃ ಶಂಕರಾಕ್ಷಿ ಪುರ ಲೋಕಃ ತ್ರೀಣಿ ಕಾಲಃ ತ್ರಯಂ ಗುಣಃ ಈಗಳನ್ನು ಮೂರೆಂಬ ಅಂಕೆಗೆ ಹೆಸರುಗಳು.

ಮೂ॥ ಅಬ್ಧಿಸಾಗರಚತ್ವಾರೀವನರಾಶಿಯುರ್ಗೋಂಬುಧಿಃ ॥
ಚತುರ್ವಾರ್ಧಿಗತಿಶ್ಚಾಪಿ ಜಲಧೀನೀರಧಿಸ್ತಥಾ ॥

ಟೀ॥ ಅಬ್ಧಿಃ, ಸಾಗರಃ, ಚತಾರಿ, ವನರಾಶಿಃ, ಯುಗಃ, ಅಂಭುಧಿಃ, ಚತುಃ, ವಾರಿಧಿ ಗತಿಃ, ಜಲಧಿಃ, ನೀರಧಿಃ, ಈ ೧೧ ನ್ನು ನಾಲ್ಕರ ಅಂಕೆಯು ಹೆಸರುಗಳು

ಮೂ॥ ಇಂದ್ರಿಯಂಸಂಚಮಂಜ್ಞಾನಂ ಯಿಷುರ್ಬಾಣಾಶ್ಚಮೋ
ರ್ಗಣಃಪ್ರತೋಭೂತಂಶರಃಪರ್ವಾಪಾಣಾಶ್ಚವಿಷೆಯುಸ್ತಥಾ॥

ಟೀ॥ ಇಂದ್ರಿಯಂ, ಪಂಚಮಂ, ಜ್ಞಾನಂ, ಳೆಷುಃ, ಬಾಣಃ, ಮಾಗಣಃ, ಪ್ರತಂ, ಭೂತಂ, ಶರಃ, ಪರ್ವಾ, ಪ್ರಾಣಃ, ವಿಷಯಃ, ಈ ೧೨ ಐದರಅಂಕೆಯ ಹೆಸರುಗಳು.

ಮೂ॥ ಶಾಸ್ತ್ರಂಷಟ್ಚರುಚಿಶ್ಚೈವಕಾಲಶ್ಚಋತುಸಂಜ್ಞಿಕಂ ।
ರಸದ್ರವ್ಯಂಚಕೋಶಶ್ಚಷದ್ದರ್ಶನಷಡಾಗಮಾ ॥

ಟೀ॥ ಶಾಸ್ತ್ರಂ, ಷಟ್, ರುಚಿಃ, ಕಾಲಃ, ಋತುಃ, ರಸಃ,ದ್ರವ್ಯಂ, ಕೋಶಃ, ಷಟ್, ದರ್ಶನಂ, ಷಡಾಗಮಃ, ಈ ೯ ಆರವಯಂಕೆಗೆ ಹೆಸರುಗಳು.

ಮೂ॥ ಶೈಲೋದ್ರಿದ್ವೀಪವಾಯುಶ್ಚ ಮುನಿಸ್ಸಪ್ತಾಚಲೋಗಿರಿಃ।
ತುರಗಾಶ್ವನಗಾಗೋತ್ರಾಮಹೇಂದ್ರಋಷಿಸಂಜ್ಞಿಕಃ ॥

ಟೀ॥ ಶೈಲಃ, ಅದ್ರಿಃ, ದ್ವೀಪಃ, ವಾಯುಃ, ಮುನಿಃ, ಸಪ್ತ, ಅಚಲಃ, ಗಿರಿಃ, ತುರಗಃ, ಅಶ್ವಃ, ನಗಃ, ಗೋತ್ರಃ, ಋಷಿಃ, ಈ ೧೪ ನ್ನು ಏಳನೇ ಅಂಕೆಯ ಹೆಸರುಗಳು.

ಮೂ॥ ಅಷ್ಟಮಂಗಜಕರ್ಣೀಚ ದಿಗ್ಗಜೋದಂತಿಹಸ್ತಿಚ ।
ಸಾಮಜೋಮತ್ತಮಾತಂಗಃ ದಿಕ್ಪಾಲವಸುವಾರಣಾಃ ॥

ಟೀ॥ ಅಷ್ಟಮಂ, ಗಜಃ, ಕರ್ಣೀಃ, ದಿಗ್ಗಜಃ, ದಂತೀ, ಹಸ್ತೀ, ಸಾಮಜಃ ಮತ್ತಮಾತಂಗಃ, ದಿಕ್ಪಾಲಃ, ವಸುಃ, ವಾರಣಃ, ಈ೧೧ ನ್ನು ಎಂಟನೇಅಂಕೆಯ ಹೆಸರುಗಳು,

ಮೂ॥ ನವಮಂನವರತ್ನಂಚ ಬ್ರಹ್ಮಾಚಕಮಲಾಸನಃ।
ನಿಧಿಗ್ರಹಶ್ಚಖಂಡಂಚರಂಧ್ರಭಾವಶ್ಚಲಬ್ಧಕಃ ॥

ಟೀ॥ ನವಮಂ, ನವರತ್ನಂ,ಬ್ರಹ್ಮ,ಕಮಲಾಸನಃ,ದಿಧಿಃ,ಗ್ರಹಃ, ಖಂಡಂರಂಧ್ರಃ, ಭಾವಃ, ಈ೯ ಒಂಭತ್ತೆಂಬಸಂಖ್ಯೆಗೆಹೆಸರುಗಳು.

ಮೂ॥ ಆಕಾಶಂಗಗನಂಶೂನ್ಯಂ ಅಂತರಿಕ್ಷಂಮರುತ್ಪಥಂ ॥

ಟೀ॥ ಆಕಾಶಂ, ಗಗನಂ, ಶೂನ್ಯಂ, ಅಂತರಿಕ್ಷಂ, ಮರುತ್ಪಥಂ, ಈ ೫ ನ್ನು ಸೊನ್ನೆಗಳಿಗೆ ಹೆಸರುಗಳು.

ಮೂ॥ ಕಾದಿರ್ನವೋಟಾದಿನವಃಪಾದಿಪಂಚಶ್ಚಯಾಷ್ಟಕಃ ॥

ಟೀ॥ ಕಕಾರ ಮೊದಲು ೯ ಅಕ್ಷರಗಳೂ, ಟಕಾರ ಮೊದಲು ೯ಅಕ್ಷರಗಳೂ, ಪಕಾರ ಮೊದಲು ೫ ಅಕ್ಷರಗಳೂ, ಯಕಾರ ಮೊದಲು

೮ ಅಕ್ಷರಗಳೂ, ಅಂಕೆಗಳ ಹೆಸರ್ಗಳೆಂದು ತಿಳಿಯತಕ್ಕದ್ದು ಅಂದರೆ, —೧ಕ-೨ಖ==೩ಗ==೪ಘ==೫ಙ==೬ಚ==೭ಛ==೮ಜ==೯ಝ==೧ಟ==೨ಠ==೩ಡ==೪ಢ==೫ಣ==೬ತ==೭ಥ==೮ಧ==-೧ಪ==೨ಫ==೩ಬ==೪ಭ==೫ಮ==೧ಯ-೨ರ==೩ಲ==೪ವ==೫ಶ==೬ಷ==೭ಸ==೮ಹ== ಈ ಮೇರೆ ಕವರ್ಗ-೯, ಟವರ್ಗ-೯, ಪವರ್ಗ ೫ ಯವರ್ಗ ೮ ಎಂಬದಾಗಿ ವರ್ಗಾಕ್ಷರಗಳನ್ನು ತಿಳಿಯುವದು.

ಅಂಕ ಸಂಜ್ಞಾನಿ ಘಂಟು ಸಂಪೂರ್ಣವು.



### ರಾಸಿಗಳ ನಾಮಾಂತರ ಅಧಿಪತಿಗಳು.

ಮೂ॥ ಕ್ರಿಯತಾಪುರುಜಿತುಮ ಕುಳೀರಲೇಯಪಾಕೋನಜೂಕ
ಧೌರ್ಪ್ಯಾಖ್ಯಾಃ। ತೌಕ್ಷಿಕಆಕೋಕೇರೋಹೃದ್ರೋಗಶ್ಚಾಂತ್ಯಂ
ಭಂಚದಂ । ಕ್ಷಿತಿಜಸಿತಜ್ಞಚಂದ್ರರವಿಸೌಮ್ಯಸಿತಾವನಿ
ಜಾಃ ಸುರಗುರುಮಂದಸೌರಿಗ। ರವಶ್ಚ ಗೃಹಾಂಶಪಾಃ ॥

ಟೀ॥ ಕ್ರಿಯ, ತಾಪುರು, ಜಿತುಮ, ಕುಳೀರ, ಲೇಯ, ಪಾಕೋನ, ಜೂಕಕೌರ್ಪಿ, ತೌಕ್ಷಿಕ, ಆ ಕೋಕೇರ, ಹೃದ್ರೋಗ, ಅಂತ್ಯಭ ಈ ೧೨ನ್ನು ಮೇಷಮೊದಲುಮೀನದವರಿಗೂರಾಶಿಗಳುನಾಮಾಂತರಗಳ

ಟೀ॥ ಮೇಷಕ್ಕೆ ಕುಜನು, ವೃಷಭಕ್ಕೆಂಶುಕ್ರನು, ಮಿಥುನಕ್ಕೆ ಬುಧನುಕಟಕಕ್ಕೆ ಚಂದ್ರನು, ಸಿಂಹಕ್ಕೆ ಸೂರ್ಯನು, ಕನ್ಯೆಗೆ ಬುಧನು, ತುಲೆಗೆ ಶುಕ್ರನು, ವೃಶ್ಚಿಕಕ್ಕೇ ಅಂಗಾರಕನು, ಧನಸ್ಸಿಗೆ ಗುರುವು, ಮಕರಕ್ಕೆಶನಿಯುಕುಂಭಕ್ಕೆ ಶನಿಯು, ಮೀನಕ್ಕೆಗುರುವು, ಯೀಮೇರೆ ರಾಶ್ಯಾಧಿಪತಿಗಳನ್ನು ತಿಳಿಯುವದು.

### ಗ್ರಹಗಳ ಶತ್ರುಮಿತ್ರತ್ವವು.

ಸೂತ್ರವು= ಸ್ವಸ್ವಾಂತ್ಯಧೀಧರ್ಮಸ್ವೋಚ್ಚಾಯುಸ್ಸುಖಪಾಃ ॥

ಟೀ॥ ಸೂರ್ಯನಿಗೆ ಶನಿ, ಶುಕ್ರರುಶತ್ರುಗಳು, ಬುಧನು ಸಮನು ಚಂದ್ರಕುಜ ಗುರುವು ಮಿತ್ರರು, ಚಂದ್ರನಿಗೆ ರವಿ ಬುಧರು ಮಿತ್ರರು, ಕುಜ, ಗುರುವು ಶುಕ್ರನು, ಶನಿ ಇವರು ಸಮರು, ಕುಜನಿಗೆ ಗುರು, ಚಂದ್ರ ರವಿಗಳು ಮಿತ್ರರು, ಬುಧನು ಶತ್ರುವು, ಶು

ಕ್ರಶನಿಗಳು ಸಮರು, ಬುಧನಿಗೆ ರವಿ ಶುಕ್ರರು ಮಿತ್ರರು,ಚಂದ್ರನು ಶತ್ರುವು, ಕುಜ ಗುರು ಶನಿಗಳು ಸಮರು, ಗುರುವಿಗೆ ಬುಧ ಶುಕ್ರರು ಶತ್ರುಗಳು, ಶನಿ ಸಮನು, ರವಿ ಚಂದ್ರ ಕುಜರು ಮಿತ್ರರು ಶುಕ್ರನಿಗೆ ಬುಧ ಶನಿಗಳು ಮಿತ್ರರು, ಕುಜ ಗುರುಗಳು ಸಮರುರವಿ ಚಂದ್ರರು, ಶತ್ರುಗಳು, ಶನಿಗೆ ಶುನಿಗೆ ಶುಕ್ರಬುಧರುಮಿತ್ರರು, ಗುರುಸಮನುರವಿ ಚಂದ್ರ ಕುಜರು ಶತ್ರುಗಳೆಂದು ತಿಳಿಯತಕ್ಕದ್ದು.

ಉಚ್ಚ ನೀಚ ಗ್ರಹಗಳು.

ಮೂ॥ ಅಜೋಕ್ಷನಕ್ರಪಾದೋನಕರ್ಕಿಮತ್ಸ್ಯತುಲಾಕ್ರಮಾತ್
ರವ್ಯಾದಿತುಂಗಾನೀಚಂತು ತತ್ತತ್ಸಪ್ತಮಮಾಚರೇತ್ ॥

ಟೀ॥ ಸೂರ್ಯನಿಗೆ ಮೇಷವು ಉಚ್ಚರಾಸಿಯು, ಅದಕ್ಕೇಳನೇತುಲಾರಾಶಿನೀಚರಾಶಿ, ಚಂದ್ರನಿಗೆ ವೃಷಭವುಚ್ಚ, ಅದಕ್ಕೇಳನೇ ವೃಶ್ಚಿಕನೀಚರಾಶಿಅಂಗಾರಕನಿಗೆ ಮಕರವುಚ್ಚರಾಶಿ, ಅದಕ್ಕೇಳನೇ ಕಟಕನೀಚರಾಶಿ, ಬುಧನಿಗೆಕನ್ಯೆಯು, ಉಚ್ಚರಾಶಿ,ಅದಕ್ಕೇಳನೇ ಮೀನ ನೀಚರಾಶಿ, ಗುರುವಿಗೆಕಟಕವುಚ್ಚ, ಅದಕ್ಕೇಳನೇ ಮಕರ ನೀರಾಶಿ, ಶುಕ್ರನಿಗೆ, ಮೀನ ವುಚ್ಚರಾಶಿ, ಅದಕ್ಕೇಳನೇ ಕನ್ಯೆ ನೀಚರಾಶಿ, ಶನಿಗೆ ತುಲೆಯುಚ್ಚರಾಶಿ, ಅದಕ್ಕೇಳನೇ ಮೇಷ ನೀಚರಾಶಿ, ಎಂಬದಾಗಿ ತಿಳಿಯತಕ್ಕದು.

ಗ್ರಹಗಳ ದೃಷ್ಟಿಗಳು.

ಸೂತ್ರ ॥ ನಗಧಾಮಜಢಸೇಕ್ಷಣಂ ॥

ಟೀ॥ ಶನಿಗೆ ೩—೭—೧೦ನೇ ರಾಶಿಗಳಲ್ಲಿ ದೃಷ್ಟಿ, ಗುರುವಿಗೆ-೫—೭—೯ನೇ ರಾಶಿಗಳಲ್ಲಿ ದೃಷ್ಟಿಯು, ಕುಜನಿ ೪—೭—೮ನೇ ರಾಶಿಗಳಲ್ಲಿ ದೃಷ್ಟಿರವಿ ಚಂದ್ರ ಬುಧ ಶುಕ್ರರಾಹು ಕೇತುಗಳಿಗೆ ೭ನೇರಾಶಿಗಳಲ್ಲಿ ದೃಷ್ಟಿಯೆಂದು ತಿಳಿಯೇವದು.

ಷಡ್ವರ್ಗ.

ಸೂ॥ಬಜಯುಗ್ಮರವಿಚಂದ್ರೌ ॥

ಟೀ॥ ದ್ವಾದಶರಾಶಿಗಳಲ್ಲಿ ಒಂದು ಓಜ, ಒಂದು ಯುಗ್ಮ ಯೆಂಬದಾಗಿಮೇಷಮೊದಲು೧—೩—೫—೭—೯—೧೧ಈಓಂರಾಸಿಗಳುಬ

ಜಗಳು೨_೪೬_೮_೧೦_೧೨ಈ೬ಯುಗ್ಮಗಳು .ಇವುಗಳಲ್ಲಿ ಓ ಜದಲ್ಲಿಮೊದಲನೇ ಅರ್ಧಭಾಗ ಸೂರ್ಯಹೋರೆ. ೨ನೇ ಅರ್ಧಬಾಗ ಚದ್ರಹೋರೆ.ಯೆಂಬದಾಗಿಯೂಯುಗ್ಮದಲ್ಲಿ೧ನೇಅರ್ಧಬಾಗಚಂದ್ರಹೋರೆ೨ನೇಸೂರ್ಯಹೋರೆಎಂಬದಾಗಿಯೂ ತಿಳಿಯತಕ್ಕದ್ದು.

## ದ್ರೇಕ್ಕಾಣ.

ಸೂತ್ರ॥ಲಗ್ನತ್ರಿಭಾಗೋದ್ರೇಕ್ಕಾಣಃ॥

ಟೀ॥ಮೇಷಾದಿ೧೨ರಾಸಿಗಳಲ್ಲಿಮೇಷಚರವೃಷಭಸ್ಥಿರಮಿಥುನ ಉಭಯರಾಸಿ.ಈಮೇರೆಮೇಷಕಟಕತುಲಾಮಕರ ಈ ೪ರಾಸಿಗಳು.ಚರಗಳುವೃಷಭಸಿಂಹವೃಶ್ಚಿಕ ಕುಂಭಈ ೪·ರಾಸಿಗಳುಸ್ಥಿರಗಳು. ಮಿಥುನ. ಕನ್ಯಾ.ಧನುಸ್ಸು. ಮೀನಈ೪ರಾಶಿಗಳುದ್ವಿಸ್ವಭಾವಗಳು. ಇವುಗಳಲ್ಲಿಯೊಂದೊಂದು ರಾಸಿಯನ್ನ ಮೂರುಭಾಗವಾಡಿದರೆ ಆ ಭಾಗಗಳಿಗೆದ್ರೇಕ್ಕಾಣವೆಂದು ಸಂಜ್ಞೆಯುಇದಕ್ಕೆ೭ಚರರಾಸಿಯಲ್ಲಿ ಮೊದಲುದ್ರೇಕ್ಕಾಣಭಾಗವು.ಆಲಗ್ನವೇಯುರಡನೇಯುಭಾಗವು. ಅದಕ್ಕೈದನೇರಾಸಿ೩ನೇಭಾಗವು.ಅದಕ್ಕೆ೯ನೇರಾಸಿಯು ಈ ಮೇರೆ ಸ್ಥಿರರಾಸಿಗೆ೧ನೇಭಾಗನವಮರಾಸಿ೨ನೇಭಾಗಲಗ್ನವು.೩ನೇಭಾಗ ಪಂಚಮರಾಸಿ ದಿಸ್ವಭಾವರಾಸಿಗೆ೧ನೇಭಾಗ ಪಂಚಮರಾಸಿ ೨ನೇ ಭಾಗನವಮರಾಸಿ ೩ನೇಭಾಗಲಗ್ನರಾಸಿಯೆಂಬದಾಗಿಯೂ ಆ ರಾಶ್ಯಧಿಪತಿಗಳು ದ್ರೇಕ್ಕಾಣಾಧಿಪತಿಗಳೆಂಬದಾಗಿಯೂ ತಿಳಿಯತಕ್ಕದ್ದು

## ನವಾಂಶ

ಸೂತ್ರ।ನವಾಂಶೋನವದಂಶಪಃಅಜಮೃಗತೌಳಿಚಂದ್ರಭವನಾದಿ

ಟೀ॥ಲಗ್ನವನ್ನು೯ಭಾಗಮಾಡಿದರೆ ಆ ಭಾಗಗಳಿಗೆನವಾಂಶಗಳೆಂದುಹೆಸರು. ಆಭಾಗಗಳನ್ನು ಮೇಷಸಿಂಹಧನಸ್ಸುಈಮೂರುರಾಸಿಗಳಪೈಕಿ ಯಾವರಾಸಿಗೆ ನವಾಂಶ ನೋಡಬೇಕಾದರೂ ಮೇಷಮೊದಲುಎಣಿಸಬೇಕು.ವೃಷಭ ಕನ್ಯಾಮಕರಈಮೂರುಗಳ ಪೈಕಿ ಯಾವದಕ್ಕಾದರೂ ತುಲಾಮೊದಲು ಯೆಣಿಸಬೇಕು. ಕಟಕ.ವೃಶ್ಚಿಕಮೀನಗಳಪೈಕಿ ಯಾವದಕ್ಕಾದರೂ ಕಟಕಮೊದಲು ಎಣಿಸತಕ್ಕದ್ದು.ಹೀಗೆಯೆಣಿಸುವಾಗ ಜನನ ಮೊದಲಾದ ಕಾರ್ಯಗಳುಎಷ್ಟ

ನೇಭಾಗದಲ್ಲಾಗುತವ್ರೋ ಆ ಭಾಗ ಯಾವಲಗ್ನವ್ರೋಅದೇನವಾಂ ಶಲಗ್ನವೆಂದು ತಿಳಿಯಬೇಕು

## ದ್ವಾದಶಾಂಶ.

ಸೂತ್ರ॥ ರಯಭಾಗೊದ್ವಾದಶಂಶಃ॥

ಟೀ॥ ಲಗ್ನವನ್ನು ಹನ್ನೆರಡುಭಾಗಾವಮಾಡಿ ಅದನ್ನೊಂದುಭಾಗಕ್ಕೆ ಒಂದುರಾಸಿಯಾಗಿ ಯೆಣಿಸುವಲ್ಲಿ ಯಾವಭಾಗದಲ್ಲಿ ಕಾಲ ನಿಲ್ಲುತ್ತದೋ ಅದೇದ್ವಾದಶಾಂಶರಾಸಿ ಯೆಂಬದಾಗಿಯೂ ಆದಕ್ಕಧಿಪತಿಯೇದ್ವಾದಶಾಂಶಾಧಿಪತಿಯೆಂಬದಾಗಿಯೂತಿಳಿಯುವದು

## ತ್ರಿಂಶಾಂಶುಗಳು.

ಸೂ॥ಭೌಮಮಂದಗುರುಜಶ್ಶುಕ್ರಾಃಮಾಮಾದಾಸಾಮವಕ್ರಂ।

ಟೀ॥ಲಗ್ನವನ್ನು ೩ಂಭಾಗವಮಾಡಿ ಅವುಗಳಲ್ಲಿ ಲಗ್ನ ವಿಷಮರಾಶಿಯಾದರೆ ಮೊದಲು ಕುಜನಿಗೆ ಭಾಗ೫ ಶನಿಗೆ ಭಾಗ೫ಗುರುವಿಗೆ ಭಾಗ೮ಬುಧನಿಗೆ ಭಾಗ೭ಶುಕ್ರನಿಗೆಭಾಗ೫ಲಗ್ನಸಮರಾಸಿಯಾಗಿ ಇದನ್ನು ವ್ಯುತ್ಕ್ರಮವಾಗಿ ಮೊದಲು ಶುಕ್ರನಿಗೆಭಾಗ೫ಬುಧನಿಗೆಭಾಗ೭ಗುರುವಿಗೆಭಾಗ೮ಶನಿಗೆ ಭಾಗ೫ಕುಜನಿಗೆ ಭಾಗ೫ ಈ ಮೇರೆ ತಿಳಿಯುವದು

## ರಾಹುಕಾಲವು.

ಸೂತ್ರ॥ ವಿಧುಸ್ಸೌರಿಭೃಗುಸುತಜಜೀವಭೌಮಾರ್ಕಾಃ ॥೧॥ ತ್ರಿಪಾದತ್ರೀಣಿವೃದ್ಧಿಃ॥

ಟೀ॥ ಸೋಮವಾರದಲ್ಲಿ೩॥। ಗಳಿಗೆಗೆ ಶನಿವಾರದಲ್ಲಿ ೭॥ಶುಕ್ರವಾರದಲ್ಲಿ ೧೧।, ಬುಧವಾರದಲ್ಲಿ ೧೫, ಗುರುವಾರದಲ್ಲಿ·೧೮॥।, ಮಂಗಳವಾರದಲ್ಲಿ ೨೨॥. ಆದಿತ್ಯವಾರದಲ್ಲಿ ೨೬।, ಈವಾರಗಳಲ್ಲಿ ಇಷ್ಟಷ್ಟಗಳಿಗೆಗಳ ಮೇಲೆ ೩॥। ಗಳಿಗೆ ರಾಹುಕಾಲವೆಂದು ತಿಳಿಯುವದು.

## ನಕ್ಷತ್ರತ್ಯಾಜ್ಯವು.

ಮೂ॥ನೈಶಂವೀರನಲಂನಭೋಭಂ ಕರಂನೀಲಂನರಂಘಾಲಿನಾ।
ಗೋದೀರಂಹಯಕಾರಿಣೀರಭಯಭೋಪ್ರೋನೆಕಭೆಕಂತಮಃ।ವಾರಂನೀರನಕೆಂನಕಂಹಯತ ಪ್ರೋವಾರಂನಗಂದಸ್ರತೈಃ। ಸಂ

ಖ್ಯೋರ್ಧ್ವಂವಿಷನಾಡಿಕಾ ಅದಧಯೋರ್ಲಗ್ನ ಸ್ಪ್ರಶೋವ್ಮ್ರತ್ಯೋ
ದಾಃ॥

ಟೀ॥ ಅಶ್ವಿನಿಗೆ ೫೦, ಭರಣಿಗೆ ೪ ಕ್ರೃತ್ತಿಕೆ೩೦ ರೊ ೪೦ ಮ್ರೃ೧೪ ಅರ್ದ್ರ೨೦,ಪುನ೩೦,ಪುಷ್ಯ೨೦, ಆಶ್ಲೇ೩೨, ಮಘ,೩೦ ಪೂಪ ೨೦ ಉ=ಫ ೧೫೨೧,ಚೆ೨೦,ಸ್ವಾತಿ ೧೪,ವಿಶಾ ೧೪ ಅನೂ ೧೦,ಜೇ೧೪ ಮೂ೨೦, ೫೬,ಪೂಷಾ೨೪,ಉಷಾ೨೦,ಶ್ರ೧೦,ಧ೧೦, ಶತ೧೮,ಪು ಭಾ ೧೬॥ ಉಭಾ೨೪, ರೆ ೩೦ ಈನಕ್ಷತ್ರಗಳಿಗೆ ಈ ಗಳಿಗೆಗಳ ಮೇಲೆ೪ಘಟಿಕೆಗಳವರಿಗೂತ್ಯಾಜಕಾಲ ಆಗ ಯಾವಕಾರ್ಯವನ್ನು ಮಾಡಬಾರದು

## ಪಕ್ಷಚ್ಛಿದ್ರಗಳು.

ಮೂ॥ಅಷ್ಟಮೀದ್ವಾದಶೀಷಷ್ಟೀಚತುರ್ಥೀಚಚತುರ್ದಶೀ। ಪಕ್ಷ
ಚ್ಛಿದ್ರಾಹ್ವತಿಧಯಶ್ಯುಭಕಾರ್ಯೇಷುನಿಂದಿತಾಃ

ಟೀ॥ಶುಕ್ಲ ಕೃಷ್ಣಪಕ್ಷಗಳಲ್ಲಿ ಅಷ್ಟಮೀ,ದ್ವಾದಶೀ,ಷಷ್ಟೀ॥ಚತುರ್ಥೀಚತುರ್ದಶೀ,ಯೀ ತಿಥಿಗಳು ಪಕ್ಷಚ್ಛಿದ್ರಗಳು. ಇವುಗಳಲ್ಲಿ ಶುಭಕಾರ್ಯಗಳನ್ನು ಮಾಡಬಾರದು.

## ಜಾತ ಕರ್ಮ.

ಮೂ॥ತಸ್ಮಿನ್ಜನನಮುಹೂರ್ತೇಪಿಸೂತಕಾಂತೆಧವಾಶಿಶೋಃ॥ಜಾತ
ಕರ್ಮಚಕರ್ತವ್ಯಂಪಿತೃಪೂಜನತತ್ಪರಃ

ಟೀ॥ಮಗುಹುಟ್ಟಿದ ಮಹೂರ್ತದಲ್ಲಾಗಲಿ ಸೂತಕತೀರಿದ ಬಳಿಕಾಗಲಿಅದಕ್ಕೆಜಾತಕರ್ಮವನ್ನು ಮಾಡತಕ್ಕದ್ದು.

## ನಾಮಕರಣ ಕಾಲವು.

ಮೂ॥ ಉತ್ತರತ್ರಯಹಸ್ತವಾರುಣಸ್ವಾತಿವಿಷ್ಟ್ರವೈಷ್ಣನಪುನ
ರ್ವಸುದ್ವಯ।ಪೌಷಮೂಲಮೃಗವಾಸವಾಜಭೈರ್ನಾಮಕರ್ಮ
ಶುಭದಂಪಿದುರ್ಬುಧಾ॥

ಟೀ॥ಉತ್ತರ, ಹಸ್ತ, ಚಿತ್ರ, ಉಷಾ,ಉಭಾ, ಶತ,ಶ್ರವ, ಪುನ, ಪುಷ್ಯ,ರೇವ,ಮೂ,ಮೃಗ,ಧನಿ,ಅಶ್ವಿನಿ, ಈನಕ್ಷತ್ರಗಳು ನಾಮಕರಣಕ್ಕೆ ಯೋಗ್ಯಗಳು.

ಅನ್ನಪ್ರಾಶನಕಾಲವು.

ಮೂ॥ಆದಿತ್ಯಸೌಮ್ಯ ವಸುತಿಷ್ಯಕರಾನಿಲಾಶ್ವಿ ವೈತ್ರಾಖ್ಯವಿಷ್ಣುವರುಣೊತ್ತರಭಾನಿಚಿತ್ರಾಃ । ಬಾಲಾನ್ನಭೋಜನವಿಧೌದಶಮೇವಶುದ್ಧೆಛಿದ್ರಾಂವಿಹಾರುನವಮಿಂತಿಥಯಃಶುಭಾಸ್ಯುಃ॥

ಟೀ॥ಪುನ,ಮೃಗ,ಧನಿ,ಪುಷ್ಯ,ಹ,ಸ್ವಾತಿ,ಅಶ್ವಿ,ಅನೂ,ಶ್ರವ,ಶತ,ಉತ್ತ ಉಷಾ,ಉಭಾ,ಚಿತ್ತಾ,ಈ ೧೪ ನಕ್ಷತ್ರಗಳು ಉತ್ತಮಗಳು, ೮ ೧೨-೬-೪-೧೪-೯-೩೦-೧೫ ಈತಿಥಿಗಳಲ್ಲಿ ಕಡಮೇ ತಿಥಿಗಳಲ್ಲಿ ಲಗ್ನಕ್ಕೆಲಗ್ನಶುದ್ಧಿ ದಶಮಶುದ್ಧಿಇರುವಾಗ ಶಿಶುವಿಗೆಅನ್ನಪ್ರಾಶನಮಾಡಬೇಕು

ಕರ್ಣವೇದನ ಕಾಲವು.

ಮೂ॥ಹರಿಹರಾಕರಚಿತ್ರಾಸೌಮ್ಯ ಪೌಷ್ಣೋತ್ತರಾರ್ಧ್ಯಾದಿ ತಿವಸುಘಟಾಳಿಸಿಂಹಲಗ್ನೆವಿವರ್ಜಿ । ಶಶಿಬುಧಗುರುಕಾವ್ಯಾನಾಂಸಿತೆಪದ್ವಿರಿಕ್ತರಹತಿಥಿಷುವಿಶುದ್ಧೈನ್ರೈಧಳಕರ್ಣವೇಧಃ॥

ಟೀ॥ಶ್ರ,ಆರ್ದ,ಹ,ಮೃ,ರೆ,ಉತ್ತ,ಉಷಾ, ಉಭಾ,ಪುಷ್ಯ,ಪುನ, ಧನಿ,ಈ೧೨ನಕ್ಷತ್ರಗಳಲ್ಲೂ,ಕುಂಭ,ವೃಶ್ಚಿಕ,ಸಿಂಹರಾಶಿಗಳನ್ನುಬಿಟ್ಟು ಕಡಮೆ ರಾಸಿಗಳಲ್ಲೂ, ಸೋಮ, ಬುಧ, ಗುರು,ಶುಕ್ರವಾರಗಳಲ್ಲೂ, ಶುಕ್ಲಪಕ್ಷದಲ್ಲು-೨-೩-೫-೭-೧೦-೧೩ ಈ ತಿಥಿಗಳಲ್ಲೂ,ಲಗ್ನಕ್ಕೆಅಷ್ಟಮಶುದ್ಧಿ ಇರುವಾಗಲೂ ಕರ್ಣವೇಧನವು ಶುಭಕರವು.

ಕೇಶಖಂಡನ ಕಾಲವು.

ಮೂ॥ಅಶ್ವೀಪುಷ್ಯಪುನರ್ವಸೂಮೃಗಶಿರಸ್ಸ್ವಾತ್ಯಂತೆವಿಷ್ಣುತ್ರಯೆಂಚಂದ್ರಜ್ಞಾಮರಪೂಜ್ಯಶುಕ್ರಸಹಿತಾಃ ಪೂರ್ಣಾಜಯಾಖ್ಯಾಶ್ಶುಭಾಃ। ಪೂರ್ವಾಹ್ಣೆಶುಭಲಗ್ನಹೊರದಿವಸೆಯುಗ್ಮೆಚಮಾಸೆಶಿಶೊ। ಕೆಶಚ್ಛೆದನಮಿಷ್ಟದಂಮುನಿವರ್ಯೈರ್ಯುಕ್ತಂವರಾಹಾದಿಭಿಃ

ಟೀ॥ಅಶ್ವಿ,ಪುಷ್ಯ, ಪುನ, ಮೃ, ಸ್ವಾ, ರೇ, ಶ್ರ, ಧ, ಶತ, ಈ ೯ ನಕ್ಷತ್ರಗಳಲ್ಲೂ, ಸೊ,ಬು,ಗುರು,ಶು,ಈವಾರಗಳಲ್ಲೂ, ೨-೩-೫-೭-೧-೧೩,ಈತಿಥಿವಾರಗಲ್ಲೂ, ಪೂರ್ವಾಹದಲ್ಲೂ,ಶುಭಲಗ್ನ ಶುಭ ಹೊರಗಳಲ್ಲೂ ಯುಗ್ಮವಾಸಗಳಲ್ಲೂ ಶಿಸುವಿಗೆ ಕೇಶಖಂಡನಶುಭಕರವು

ಕ್ಷೌರಕ್ಕೆಕಾಲ.

ಮೂಪುಷ್ಯಪುನರ್ವ ಸುರೆವತಿಹಸ್ತಾ ಶ್ರವಣಧನಿಷ್ಠಮೃಗಾಶ್ವಿ

ನಿಚಿತ್ರಾ । ವಾಸವವಾರುಣವಾಯು ಸಮೇತಂದ್ವಾದಶಋಕ್ಷಂಕ್ಷೌರಪ್ರಶಸ್ತಂ॥

ಟೀ॥ಪುಷ್ಯ ಪುನರ್ವಸು ರೆ ಹ ಶ್ರ ಧ ಮ್ರ ಅಶ್ವಿ ಚಿ ಜ್ಯೇಶತಸ್ವಾ ಈ೧೨ನಕ್ಷತ್ರಗಳಲ್ಲೂ ಕ್ಷೌರವು ಶುಭಕರವು.

ಕ್ಷೌರವರ್ಜಕಾಲ

ಮೂ॥ಮಾತುಶ್ಚತುರ್ಥೀಭಗಿನೀಚತುರ್ದಶೀಭ್ರಾತುಶ್ಚಷಷ್ಟೀಪಿತರೇವಪರ್ವಸು । ಅದೌನವಮ್ಯಾಂಧನಧಾನ್ಯನಾಶಂ ಕುಟುಂಬಹಾನೀಕ್ಷೌರಾಷ್ಟಮೇಷು॥

ಟೀ॥ ಚತುರ್ಥಿ, ಷಷ್ಠೀ, ಚತುರ್ದಶೀ, ಪಂಚಪರ್ವಗಳು, ಪಾಡ್ಯಮಿ ನವಮಿ, ಅಷ್ಟಮಿ, ಈ ತಿಥಿಗಳಲ್ಲಿ ಕ್ಷೌರವಶುಭಕರವು.

ವಿದ್ಯಾಭ್ಯಾಸಕಾಲವು.

ಮೂ ॥ ಹಸ್ತಾದಿತ್ಯಸಮೀರ ಮಿತ್ರಪುರಜಿತ್ಪೌಷಾಶ್ವಿಚಿತ್ರಾಚ್ಯುತೇಷ್ವಾರಾರ್ಕಾರ್ಕಜವಾಸರಾದಿ ರಹಿತೇರಾಶೌಚರೇಚೋಭಯೇ। ಪಕ್ಷೇಪೂರ್ಣನಿಶಾಕರೇಪ್ರತಿಪದಂರಿಕ್ತಾಂವಿಹಾಯಾಷ್ಟಮೀ। ಷಷ್ಠೀಮಷ್ಟಮಶುದ್ಧಿಭಾಜಿಭವನೇಪ್ರೋಕ್ತಾಕ್ಷರಸ್ವೀಕೃತಿಃ ॥

ಟೀ॥ ಹಸ್ತ, ಪುನರ್ವಸು, ಸ್ವಾತೀ, ಅನೂರಾಧಾ, ಜ್ಯೇಷ್ಠಾ, ರೇವತೀ, ಅಶ್ವಿನೀ, ಚಿತ್ರಾ, ಶ್ರವಣ, ಈ ನಕ್ಷತ್ರಗಳಲ್ಲೂ ರವಿವಾರ, ಮಂಗಳ, ಶನಿ ಈ ವಾರಗಳನ್ನು ಬಿಟ್ಟು ಚರರಾಶಿ ಉಭಯ ರಾಸಿಗಳಲ್ಲೂ, ಶುಕ್ಲ ಪಕ್ಷದಲ್ಲೂ ಚಂದ್ರನುಪೂರ್ಣನಾಗಿ ಇರುವಾಗಲೂ ೧-೪-೧೪-೮-೯-೬-೧೫-೩೦ ಈ ತಿಥಿಗಳನ್ನೂ ॥ ಬಿಟ್ಟು ಲಗ್ನಕ್ಕೆ ಅಷ್ಟಮಶುದ್ಧಿ ಮೂಢಾದಿ ದೋಷಗಳಿಲದಿರುವಾಗಲೂ ಅಕ್ಷರಸ್ವೀಕಾರ ಮಾಡತಕ್ಕದ್ದು.

ಉಪನಯನುಪ್ರಕರಣ.

ಮೂ॥ ಚಂದ್ರಾದಿತ್ಯೋತ್ತ ರಾಶ್ವಿಶ್ರವಣವಸುಮರುತ್ವಷ್ಟ್ರ ಪೌಷ್ಣಾರ್ಕಮಿತ್ರಪ್ರಾಜೆಕಾರ್ಯೇಷು ಸೌಮ್ಯಾಮರಗುರುಶಶಿಭೃಗಾರಾಂಶಕೆಷೋಪನೀತಃ। ತ್ಯಕ್ತ್ವಾನಧ್ಯಾಯರಿಕ್ತಾಂಪಿತೃ ತಿಥಿಷುಯಮಾರ್ಕಯುಕ್ತಾನ್ಯ ರಾಶೌಗೋಜೋ

ಷಾಂತ್ಯಂಗನಾಟಕತುಲಮಿಥುನೇಷ್ವಷ್ಟಮೇಧಾಮ್ನಿ ಶುದ್ಧಿಃ

ಟೀ॥ ಮೃಗಶಿರ, ಪುನ, ಉತ್ತ, ಉಷಾ, ಉಭಾ, ಅಶ್ವಿನೀ, ಶ್ರವಣ, ಧನಿಷ್ಠಾ, ಚಿತ್ರಾ, ರೇವತಿ, ಹಸ್ತ, ಅನೂರಾಧಾ, ರೋಹಿಣಿ,ಪುಷ್ಯ, ಈ ಹದಿನೈದು ನಕ್ಷತ್ರಗಳಿಲ್ಲೂ, ಬುಧ–ಗುರು-ಶುಕ್ರ-ಸೋಮವಾರಗಳಲ್ಲೂ, ಮಾಡಬಹುದು, ಅನಧ್ಯಾಯನ ತಿಥಿಗಳು, ರಿಕ್ತತಿಥಿಗಳುಪಿತೃದಿನಗಳು, ಶನಿರವಿ ಕುಜವಾರಗಳಲ್ಲೂ, ಉಪನಯನ ಮಾಡಬಾರದು ಮೇಷ, ವೃಷಭ, ಮೀನ, ಕಟಕ, ಕನ್ಯಾ, ತುಲಾ, ಮಿಥುನ.ಈರಾಶಿಗಳಲ್ಲೂ ಅಷ್ಟಮರಾಶಿಶುದ್ಧವಾಗಿ ಇರುವಾಗಲೂ ಉಪನಯನ ಮಾಡತಕ್ಕದ್ದು.

ಮೂ॥ ಕೇಂದ್ರತ್ರಿಕೋಣೋಪಚಯಶ್ಯುಭೈಸಾತ್ಯ್ರಯಾರಿಗೈ, ಪರೈಃ॥ಲಗ್ನೇಷ್ವಷ್ಟಾಂತ್ಯಜಾಂಹೀನಚಂದ್ರೇಣವ್ರತಮೀರಿತಂ

ಟೀ॥ ಶುಭಗ್ರಹಗಳಾದ ಸೋಮ, ಬುಧ, ಗುರು, ಶುಕ್ರನು, ಇವರು ಕೇಂದ್ರತ್ರಿಕೋಣಗಳಲ್ಲೂ, ರವಿ, ಕುಜ, ಶನಿಗಳು೩-೬-೧೧ ಈರಾಶಿಗಳಲ್ಲೂಇರಬೇಕು, ಚಂದ್ರನು ೧-೬೧೨ ರಾಶಿಗಳಲ್ಲೂ ಇರಕೂಡದು

ಮೂ॥ ಲಗ್ನಾತ್ಕೇಂದ್ರಗತೇರವೌಸ್ಫುರಜಿತತ್ವಾಚಾರ್ಯಶಿಷ್ಯೌ ವ್ರತೇಭೌಮೇಕೋಜಿತನಾಮಕಂಸ್ತುಜನನೀಂ ಹಂತೇಷಮುಂದೇಕುಲಂ । ದೋಷೋಯಂರುಧಿಸಾಭಿಧಸ್ತಮಸಿಚೇದುಗ್ರಾಭಿದೋಬಾಲಕಂರಂದ್ರಾಖ್ಯಃಪಿತರಂಧ್ವಜಿದಶನಗದಕ್ಷೋತ್ಯ್ಭಿ ಕೇಂದಾಭಿದಾಃ ॥

ಟೀ॥ ಲಗ್ನವೊದಲು ನಾಲ್ಕು ಕೇಂದ್ರಗಳಲ್ಲಿ ಸೂರ್ಯನಿದ್ದರೆ ಸ್ಫುರಜಿತವೆಂಬ ದೋಷ ಉಂಟಾಗುತ್ತದೆಯಾಗಿ ಯಾದೋಷವಾಚಾರ್ಯರಿಗೆ ಹಾನಿ ಕರವು. ಅವುಗಳಲ್ಲಿ ಕುಜನಿದ್ದರೆ ಕೋಜಿತವೆಂಬ ದೋಷ ಉಂಟಾಗುತ್ತದೆಯಾಗಿ ಅದು ಮಾತೃಹಾನಿ ಕರವು ಅವುಗಳಲ್ಲಿ ಶನಿ ಯಿದ್ದರೆ, ರುಧಿರ ದೋಷಉಂಟಾಗುತ್ತದೆ, ಅದು ವಟುವಿಗೆ ಕುಲ ಹಾನಿಕರವು. ಅಲ್ಲಿರಾಹುವಿದ್ದರೆ ಉಗ್ರದೋಷವು ಅದು ವಟುವಿಗೆ ಹಾನಿಕರವು. ಕೇತುವಿದ್ದರೆ ರಂಧ್ರ ದೋಷವು,ವಟುವಿನ ತಂದೆಗೆ ನಾಶವುಂಟಾಗುವದು, ಕೇಂದ್ರವಂದರೆ ಲಗ್ನ,ಚ

ತುರ್ಥ, ಸಪ್ತಮ, ದಶಮ ರಾಶಿಗಳು. ತ್ರಿಕೋಣಗಳೆಂದರ೫-೯-ನೇ ರಾಶಿಗಳು.

## ಕೂಟಗಳು-ದಿನಕೂಟವು

ಮೂ॥ ಕನ್ಯಾದಿವರರುಕ್ಷಾಂತಂಗಣಯೆನ್ನವಸಂಖ್ಯಯಾ।
ನವಮಾಂತ್ಯತಾರಕಂಶ್ರೇಷ್ಠಂದಿನಕೂಟಂಪ್ರಶಸ್ಯತೆ ॥

ಟೀ॥ ಕನ್ಯೆಯ ನಕ್ಷತ್ರಮೊದಲು ವರನ ನಕ್ಷತ್ರದವರಿಗೆ ಒಂಭತ್ತೊಂಭತ್ತಾಗಿ ತಾರಾಬಲವಂತ ಎಣಿಸುವಾಗ ಅಲ್ಲಿ೨-೪-೬-೮ ಈಸಮ ಸಂಖ್ಯೆಯುಳ್ಳ ನಕ್ಷತ್ರಗಳು ಶುಭಕರಗಳು.

## ಗಣಕೂಟವು.

ಮೂ ॥ ಪುನರ್ವಸುಪ್ಪಯಂಸ್ವಾತಿ ಕರಶ್ರವಣತಾರಕಾಃ ।
ಪೌಷ್ಣಮೈತ್ರೇಂದುದಸ್ರಾಖ್ಯಾತಾರಾದೇವಗಣಾಸ್ಮೃತಾಃ

ಟೀ॥ ಪುನರ್ವಸು, ಪುಷ್ಯ, ಸ್ವಾತಿ, ಹಸ್ತ, ಶ್ರವಣ, ರೇವತಿ, ಅನೂರಾಧಾ, ಮೃಗಶೀರ್ಷ, ಅಶ್ವಿನೀ, ಈ ೯ ನಕ್ಷತ್ರಗಳು, ದೆವಗಣನಕ್ಷತ್ರಗಳು.

ಮೂ॥ ರೊಹಿಣೀತ್ರೀಣಿಪೂರ್ವಾಣಿ ಭರಣೀರೌದ್ರಮೆವಚ ।
ತ್ರೀಣ್ಯುತ್ತರಾಶ್ಚವಿಜ್ಞೆಯಾಃಮಾನುಷಾಃಪರಿಕೀರ್ತಿತಾಃ॥

ಟೀ॥ ರೋಹಿಣೀ, ಪೂರ್ವಫಲ್ಗುಣೀ, ಪೂರ್ವಾಷಾಢಾ, ಪೂರ್ವಾಭಾದ್ರ, ಭರಣೀ, ಆರ್ದ್ರಾ, ಉತ್ತರಫಲ್ಗುಣೀ, ಉತ್ತರಾಷಾಢಾ, ಉತ್ತರಾಭಾದ್ರ, ಈ ೯ ನಕ್ಷತ್ರಗಳು ಮಾನುಷಗಣಗಳು.

ಮೂ॥ ಕೃತ್ತಿಕಾಚಮಘಾಜೆಷ್ಠಧನಿಷ್ಠಾಚಿತ್ರರೋಹಿಣಿ ।
ವಿಶಾಖಾಶತತಾರಾಚ ಮೂಲಂರಾಕ್ಷಸಸಂಜ್ಞಿಕಾಃ ॥

ಟೀ॥ ಕೃತ್ತಿಕಾ, ಮಘಾ, ಜ್ಯೇಷ್ಠಾ, ಧನಿಷ್ಠಾ, ಚಿತ್ರಾ, ರೋಹಿಣೀ, ವಿಶಾಖಾ, ಶತಭಿಷಕ್, ಮೂಲ, ಈ ೯ ನಕ್ಷತ್ರಗಳು, ರಾಕ್ಷಸಗಣಗಳು, ಈಗಣಗಳಲ್ಲಿ ಸ್ತ್ರೀಪುರುಷರು ಒಂದೇ ಗಣವಾಗಿ ಇದ್ದರೆ ಶುಭವು, ದೇವಮಾನುಷ ಗಣಗಳು ಮಧ್ಯಮ, ರಾಕ್ಷಸದೇವಗಣಗಳು ಅಧಮ, ಮಾನುಷ ರಾಕ್ಷಸಗಳು ಮೃತ್ಯುಕರವು.

## ಮಾಹೇಂದ್ರಕೂ.

ಮೂ॥ ವಧ್ವಾದೀನಾಂಚತುಸ್ಸಪ್ತದಶಮಂಚತ್ರಯೊದಶ ॥

ಷೋಡಶ್ಚೈಕೋನವಿಂಶಶ್ಚ ದ್ವಾವಿಂಶಃಪಂಚವಿಂಶತಿಃ ॥
ಏತೇಮಾಹೇಂದ್ರಯೋಗಾಸ್ಯುರ್ವಿವಾಹೇಷುಪ್ರಶಸ್ತ್ಯೇ ॥

ಟೀ॥ ಸ್ತ್ರೀನಕ್ಷತ್ರವೊಲು ಪುರುಷನಕ್ಷತ್ರದರಿವಗೂಣಿಸುವಾಗ ೪-೧೦-೭-೧೬-೧೯-೨೨-೨೫-ಈ ಅಂಕೆಗಳುಬಂದರೆಶುಭವು.

ಸ್ತ್ರೀದೀರ್ಘಕೂಟ.

ಮೂ॥ತ್ರಯೊದಶಭವಾದೂರ್ಧ್ವಂಸ್ತ್ರೀದೀರ್ಘಮತಿಶೊಭನಂ

ಟೀ॥ ಸ್ತ್ರೀನಕ್ಷತ್ರವೊದಲು ೧೩ ನಕ್ಷತ್ರದ ಮೇಲೆಪುರುಷ ನಕ್ಷತ್ರವಿದ್ದರೆಶುಭವಹುದು.

ರಾಶಿಕೂಟ.

ಮೂ॥ ದ್ವಿಕೇದ್ವಾದಶಗೆಮೃತ್ಯುರಾಯುದ್ವಾರ್ದಶಕೆದ್ವಿಗೇ। ತ್ರಿತೀಯೆಕಾದಶಂದುಃಖಂ ಸುಖಮೆಕಾದಶತ್ರಿಕೆಂ॥ ನೀಚಂ ಚತುರ್ಧದಶಮಂಧನಂದಶಚತುರ್ಥಕೆಶುಭಂಚನವಮುಮ ಶುಭಂನವಪಂಚಕೆಂ।ಷಷ್ಠಾಷ್ಟಕೆಪುತ್ರನಾಶಃಪುತ್ರಲಾಭೊಷ್ಟಷಷ್ಟಕೆ। ಸವಸಪ್ತೆಮವಾಂಗಲ್ಯಂದಂಪತ್ಯೋಃ ಪ್ರೀತಿವರ್ಧನಂ ॥

ಟೀ॥ ಸ್ತ್ರೀರಾಶಿವೊದಲು೨, ಪುರುಷರಾಶಿ ವೊದಲು ೧೨ ಇದ್ದರೆ ಮೃತ್ಯುವನ್ನು ಕೊಡುತ್ತದೆ ಸ್ತ್ರೀರಾಶ್ಯಾದಿ ೧೨, ಪುರುಷರಾಶ್ಯಾದಿ ೧೨ ಆದರೆ ಆಯುರ್ವೃದ್ಧಿ, ಸ್ತ್ರೀರಾಶ್ಯಾದಿ ೩ ಪುರುಷರಾಶ್ಯಾ ೧೧ ಇದ್ದರೆ ದುಃಖವು, ಸ್ತ್ರೀರಾಶ್ಯಾದಿ ೧೧, ಪುರುಷರಾಶ್ಯಾದಿ೩ಇದ್ದರೆ ಸುಖವು, ಸ್ತ್ರೀರಾಶ್ಯಾದಿ ೪ ಪುರುಷರಾಶ್ಯಾದಿ೧೦ ಇದ್ದರೆತ್ಯಾಜ್ಯವು, ಸ್ತ್ರೀರಾಶ್ಯಾದಿ ೧೦ ಪುರುಷರಾಶಾದಿ ೪ ಇದ್ದರೆಧನಪ್ರಾಪ್ತಿ ಸ್ತ್ರೀರಾಶ್ಯಾದಿ ೫ ಪುರುಷರಾಶ್ಯಾದಿ ೯ ಇದ್ದರೆ ಶುಭವು, ಸ್ತ್ರೀರಾ ರಾಶ್ಯಾದಿ ೯ ಪುರುಷರಾಶ್ಯಾದಿ ೫ ಇದ್ದರೆ ಅಶುಭವುಸ್ತ್ರೀರಾಶ್ಯಾದಿ ೬ ಪುರುಷ ರಾಶ್ಯಾದಿ ೮ ಇದ್ದರೆ ಪುತ್ರನಾಶವು, ಸ್ತ್ರೀರಾಶ್ಯಾದಿ ೮ ಪುರುಷ ರಾಶ್ಯಾಗಿ ೬ ಇದ್ದರೆ ಪುತ್ರಲಾಭವು, ಸ್ತ್ರೀರಾಶ್ಯಾದಿ ೭ ಪುರುಷ ರಾಶ್ಯಾದಿ ೭ಇದ್ದರೆ ಮಾಂಗಲ್ಯಾವೃದ್ಧಿಯೆಂದು ತಿಳಿಯುವದು.

ರಜ್ಜುಕೂಟವು.

ಮೂ॥ ಅಶ್ವೀಸಾರ್ಪಮುಖಾಜ್ಯೇಷ್ಠಾ ಮೂಲಾಂತ್ಯಂಪಾದರಜುನಃ। ಯಮಾರ್ಯಭಾಗ್ಯಮೈತ್ರಾಖ್ಯಂ ಅಹಿರ್ಬುಧ್ನ್ಯಾಃಕಟೀರಿತಾ ಅಗ್ನ್ಯಾದಿತ್ಯಾರ್ಯಮೋಶೂರ್ಪಾವಿಶ್ವಪ್ರೋಷ್ಠಪದೋದರೇ । ಬ್ರಹ್ಮರುದ್ರಕರಸ್ವಾತೀಶ್ರವಣಂವಾರುಣಂಸ್ತಥಾ ॥ ಕಂಠದೇಶವಿಜಾನೀಯಾದ್ವಸುಚಿತ್ರೇಂದು ಮಸ್ತಕಂ । ಮುಖಪತಿಂಗಳೆತ್ಕನ್ಯಾಂಕಂಠೌಸಸ್ಯಾತ್ಮಜಾಂಜರತ್। ದರಿದ್ರತಾಭವೇತ್ಕಟ್ಯಾಂ ಪಾದೇವಾಭ್ರಮಣಂತಥಾ ॥

ಟೀ॥ ಅ, ಆಶ್ಲೇ, ಮ, ಜ್ಯೇ, ಮೂ, ರೇ, ಈ ೬ ಪಾದ ರಜ್ಜು ನಕ್ಷತ್ರಗಳು,ಭ, ಪುಷ್ಯ, ಪ್ರೋಷ, ಅನೂ, ಪೂಷಾ, ಪೂಭಾ, ಈ ೬ ನ್ನು ಕಟಿವಜ್ಜುನಕ್ಷತ್ರಗಳು,ಕೃ, ಪುನ, ಉತ್ತರ, ವಿ-ಉಷಾ, ಪೂಭಾ, ಈ ೬ ನ್ನು ಉದರೋರಜ್ಜುನಕ್ಷತ್ರಗಳ್ಳು ರೋಹಿಣೀ, ಆರ್ದ್ರಾ, ಹ, ಸ್ವಾಶ್ರ, ಶತ ಈ ೬ನ್ನು ಕಂಠರಜ್ಜು ನಕ್ಷತ್ರಗಳು ಮೃ, ಚಿ, ಧ, ಈ ೩ ನ್ನು ಶಿರೋರಜ್ಜು ನಕ್ಷತ್ರಗಳು. ಇವುಗಳಿಗೆ ಫಲವು ಶಿರೋರಜ್ಜು ಪತಿಯನ್ನು ಕೊಲ್ಲುತ್ತದೆ ಕಂಠರಜ್ಜುಸ್ತ್ರೀಗೆ ನಾಶಕರವು, ಉದರ ರಜ್ಜು ಮಕ್ಕಳಿಗ ಹಾನಿ, ಕಟಿರಜ್ಜುದಾರಿದ್ರ್ಯವನ್ನುಂ ಮಾಡುತ್ತದೆ ಪಾದರಜ್ಜು ಆಸ್ತ್ರೀಪುರುಷರಿಗೆ ವಂದು ಕಡೆನೆಲೆಯಿಲ್ಲದೆ ತಿರಿಗಿಸುತ್ತಲಿರುತ್ತದೆ

ನಾಡೀ ಕೂಟ.

ಮೂ ॥ ಅಶ್ವಿನ್ಯಾರ್ದ್ರಾಪುನರ್ವಸ್ವ ವುತ್ತರಾಹಸ್ತಜ್ಯೇಷ್ಠಭಂ ।
ಮೂಲಾವಾರುಣತೋಯಶ್ಚಪಾರ್ಶ್ವನಾಡೀನವಸ್ತಥಾ ॥

ಟೀ॥ ಅ, ಆರ್ದ್ರಾ, ಪುನ, ವುತ್ತರ, ಹ, ಜ್ಯೇ, ಮೂ, ಶತ, ಪೂಭಾ ಈ ೯ ನ್ನು ಪ್ರಥಮ ಪಾರ್ಶ್ವ ನಾಡೀ ನಕ್ಷತ್ರಗಳು.

ಮನುಷ್ಯನಾಡೀ ಕೂಟ.

ಮೂ॥ ಭರಣೀಂದುಗುರುರ್ಭಾಗ್ಯಂಚಿತ್ರಾನೂರಾಧಪೂಷಭಂ।
ಶ್ರವಿಷ್ಠಾಚೋತ್ತರಾಭಾದ್ರ ಮಧ್ಯನಾಡೀನವಸ್ತಥಾ ॥

ಟೀ॥ ಮೃ ಪುಷ್ಯಪುಬ್ಬ, ಚಿ, ಅನೂರಾಧ ಪೂಷಾ, ಧ, ವುಭಾ. ಈ ೯ ಮಧ್ಯೇಕನಾಡೀ ನಕ್ಷತ್ರಗಳು.

ಮೂ॥ ಕೃತ್ತಿಕಾವಿಧಿಮಾಶ್ಲೇಷಪಿತೃಸ್ವಾತಿವಿಶಾಖಭಂ। ವುತ್ತ

ರಾಷಾಢವಿಷ್ಣ್ವೈಕರ್ಕ್ಷೇಅಂತ್ಯನಾಡೀತ್ರುಪಾರ್ಶ್ವಕೇ ॥

ಟೀ॥ ಕೃ, ರೊ, ಆಶ್ಲೆ, ಮ, ಸ್ವಾ ವಿ ಉಷಾ ಶ್ರ ರೇ, ಈ ೯ ದ್ವಿತೀಯ, ಪಾರ್ಶ್ವನಾಡೀ ನಕ್ಷತ್ರಗಳು ಇದಕ್ಕೆ ಫಲವು.

ಮೂ॥ ಏಕನಾಡೀಪತಿಂಹಂತಿ ಪಾರ್ಶ್ವ ನಾಡೀತ್ರುಕನ್ಯಕಾಂ ॥

ಟೀ॥ ದಂಪತಿಗಳ ನಕ್ಷತ್ರಗಳು ಮಧ್ಯನಾಡೀ ನಕ್ಷತ್ರಗಳಲ್ಲಿದ್ದರೆ ಪುರುಷಹಾನಿಕರವು ಪಾರ್ಶ್ವನಾಡಿಗಳಲ್ಲಿದ್ದರೆ ಸ್ತ್ರೀಗೆ ನಾಶಕರವು.

### ವಶ್ಯಕೂಟ.

ಮೂ॥ ಸಿಂಹಾಲಿಕರ್ಕ್ಯವಣಿಜೌಕನ್ಯಾವೃಶ್ಚಿಕಕಾರ್ಮುಕೌ ।
ತುಲಾಮೀನಯುಮಾನಕ್ರಕನ್ಯಾಕರ್ಕಟಕಸ್ತ್ರಮಿಃ । ಮೆ
ಷಕುಂಭಾವ್ರಜೋನಕ್ರಮೆಷಾದೇರ್ವಶ್ಯರಾಶಯಃ ॥

ಟೀ॥ ಮೇಷರಾಶಿಗೆ ಸಿಂಹ ವೃಶ್ಚಿಕಗಳು, ವೃಷಭಕ್ಕೆ ಕರ್ಕಟಕತುಲೆಗಳು. ಮಿಥುನಕ್ಕೆ ಕನ್ಯಾರಾಶಿಯು, ಕಟಕಕ್ಕೆ ವೃಶ್ಚಿಕ ಧನಸ್ಸುಗಳು, ಸಿಂಹಕ್ಕೆ ತುಲೆಯು, ಕನ್ಯರಾಶಿಗೆ ಮೀನಮಿಥುನಗಳು, ತುಲಾರಾಶಿಗೆ ಮಕರ ಕನ್ಯೆಗಳು ವೃಶ್ಚಿಕರಾಸಿಗೆ ಕಟಕವು ಧನೂರಾಶಿಗೆ ಮೀನ ರಾಶಿಯುಮಕರರಾಶಿಗೆ ಮೇಷ ಕುಂಭಗಳು ಕುಂಭರಾಶಿಗೆ ಮೇಷರಾಶಿಯು, ಮೀನರಾಶಿಗೆ ಮಕರವು ಈಮೇರೆ ಇವುಗಳು ವಶ್ಯಗಳೆಂದು ತಿಳಿಯುವದು.

### ವರ್ಣ ಕೂಟವು.

ಮೂ॥ ಕರ್ಕ್ಯಂತೆವೃಶ್ಚಿಕೆವಿಪ್ರಾಃಕ್ಷತ್ರ್ಯಸಿಂಹಧನುಸ್ತುಲಾ ॥
ಮೆಷಯುಗ್ಮಘಟಾವೈಶ್ಯಾಶೂದ್ರೊವೃಷಮೃಗಾಂಗನಾಃ॥

ಟೀ॥ ಕರ್ಕಟ, ಮೀನ ವೃಶ್ಚಿಕ ಈ ೩ ರಾಗಳು ಬ್ರಹ್ಮಜಾತಿ ಸಿಂಹಧನುಸ್ಸು ತುಲಾ ಈ ೩ ನ್ನು ಕ್ಷತ್ರಿಯಜಾತಿ ಮೇಷ ಮಿಥುನ ಕುಂಭ ಈ ೩ ನ್ನು ವೈಶ್ಯಜಾತಿ ವೃಷಭ ಮಕರ ಕನ್ಯಾಈ ಮೂರುನ್ನು ಶೂದ್ರಜಾತಿ ಈ ರಾಶಿಗಳಲ್ಲಿ ಸ್ತ್ರೀಪುರುಷರು ಏಕಜಾತಿಯಾಗಿರುವದುತ್ತಮ.

### ಯೋನಿಕೂಟಕವು.

ಮೂ॥ ಅಶ್ವಂಗಜಮಜಳಿಸರ್ಪೌಸರ್ಪಿಣೀಶುನವಾರ್ಜಾರೀ। ಅಜ

ಮಾರ್ಜಾಲಮೂಷಕ್ಕ ಮೂಷಿಕಶ್ಚವೃಷಮಾಹಿಷೀ॥ ವ್ಯಾಘ್ರಶ್ಚ ಮಹಿಷೋವ್ಯಾಘ್ರೀಮೃಗೀಮೃದಶುನಃಕಪಿಃ । ಗೋಷಂಡೋವಾನರೀಸಿಂಹೀತುರಗೀಸಿಂಹಗೋಗಜಿ ॥

ಟೀ॥ ಅಶ್ವಿನಿಗೆ ಯೋನಿಯು ಕುದುರೆ ಭರಣಿಗೆಆನೆಯುಕೃತ್ತಿಕೆಗೆಮೇಕೆ, ರೋಹಿಣಿಗೆ ಸರ್ಪವು ಮೃಗಶಿರಕ್ಕೆ ಹೆಂಣುಹಾವು ಅರ್ದ್ರೆಗೆ ನಾಯಿ ಪುನರ್ವಸುವಿಗೆ ಹೆಂಣು ಬೆಕ್ಕು ಪುಷ್ಯಕ್ಕೆ ಹೆಂಣು ಮೇಕೆಯು, ಆಶ್ರೇಷಕ್ಕೆ ಗಂಡುಬೆಕ್ಕು ಮುಖಕ್ಕೆ ಇಲಿಯು ಹುಬ್ಬೆಗೆ ಹೆಂಣಿಲಿ ಉತ್ತರೆಗೆ ಯೆತ್ತು ಹಸ್ತಕ್ಕೆ ಯೆಮ್ಮೆಯು ಚಿತ್ರೆಗೆ ಹುಲಿಯು ಸ್ವಾತಿಗೆಕೋಣ ವಿಶಾಖೆಗೆ ಹೆಂಣುಹುಲಿ ಅನೂರಾಧಕ್ಕೆ ಹೆಂಣುಹೇಲ್ಲೆಯು ಜ್ಯೇಷ್ಠೆಗೆ ಗಂಡುಹೇಲ್ಲೆಯು ಮೂಲಕ್ಕೆ ಹೆಂಣು ನಾಯಿ, ಪೂರ್ವಾಷಾಢೆಗೆ ಕಪಿಯು, ಉತ್ತರಾಷಾಢೆಗೆ ಮುಂಗಿಸಿ, ಶ್ರವಣಕ್ಕೆ ಹೆಂಣು ಕೋತಿ, ಧನಿಷ್ಟೆಗೆ ಹೆಂಣು ಸಿಹ್ಮವು, ಶತಭಿಷಗೆ ಹೆಂಣು ಕುದುರೆಯು, ಪೂರ್ವಾಭಾದ್ರೆಗೆ ಗಂಡುಸಿಹ್ಮವು, ಉತ್ತರಾಭಾದ್ರೆಗೆಹಸುವು, ರೇವತಿಗೆ ಹೆಂಣಾನೆಯು ಈ ಮೇರೆ ನಕ್ಷತ್ರಗಳಿಗೆಯೋನಿಗಳನ್ನು ತಿಳಿಯುವದು ಅವುಗಳಲ್ಲಿ ದಂಪತಿಗಳ ನಕ್ಷತ್ರಗಳು ವೈರವುಳ್ಳಯೋನಿಗಳಾದರೆ ವೈರಉಂಟಾಗುವದು, ವೈರ ವರ್ಗವಾಗದಿದ್ದರೆ ಶುಭವು, ಒಂದೇ ಯೋನಿಯಾಗಿದ್ದರೆ ಸರ್ವೋತ್ತಮವೆಂದು ತಿಳಿಯಬೇಕು.

## ವಿವಾಹಕ್ಕೆ ಯೋಗ್ಯವಾದ ಮಾಸಗಳು.

ಮೂ॥ ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಶುಭಪ್ರದಾಃ ।
ಮಧ್ಯಮಂಕಾರ್ತಿಕಮಾರ್ಗಶೀರ್ಷೆವೈನಿಂದಿತಾಃಪರೆ ॥

ಟೀ॥ ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠ ಈ ೪ ತಿಂಗಳುಉತ್ತಮಗಳು, ಕಾರ್ತಿಕ, ಮಾರ್ಗಶಿರ, ಈ ೨ ಮಾಸಗಳು ಮಧ್ಯಮಗಳು, ಕಡಮೆಮಾಸಗಳು ಅಧಮಕೆಳು.

## ನಕ್ಷತ್ರಗಳು.

ಮೂ॥ ಮೂಲಮೈತ್ರಮೃಗರೋಹಿಣಿ ಕರೈಃಪೌಷಮಾರುತಮಘೊತ್ತರಾನ್ವಿತೈ। ಆರ್ಯವಮಾದದಡುಭಿರ್ಮೃಗೀಂದ್ರಶಾಂಹಾಣಿಪೀಡನವಿದಿರ್ವಿಧೀಯತೈ ॥

ಟೀ॥ ಮೂ, ಅನೂ, ಮೃಗ, ರೋ, ಹ, ರೇ, ಸ್ವಾ, ಮ, ಉಫ, ಉಷಾ, ಉಭಾ, ಈ ೧೧ ನ್ನು ವಿವಾಹಕ್ಕೆ ಶ್ರೇಷ್ಠನಕ್ಷತ್ರಗಳು.

ಮೂ॥ ಶುಭೇಕ್ಷಿತಯುತಾಶ್ಮಸಾ, ಉದ್ವಾಹೇಖಿಲರಾಶಯಃ । ಶುಭಷಡ್ವರ್ಗಕೇಲಗ್ನೆ ಮಹಾದೋಷವಿವರ್ಜಿತೆ ॥

ಟೀ ॥ ಲಗ್ನದಲ್ಲಿ ಶುಭಗ್ರಹಗಳಿದ್ದರೂ ನೋಡಿದರೂಶುಭಕರವು ಶುಭಷಡ್ವರ್ಗವು, ಲಗ್ನಕ್ಕೆ ಮಹಾದೋಷಗಳಿಲ್ಲದಿರುವಿಕೆಯು ಇವೆಲ್ಲ ಶುಭಪ್ರದವು.

## ಲಗ್ನಬಲವು.

ಮೂ॥ ಶುಕ್ರಃಪಂಚಸಹಸ್ರಾಣಿಬುಧಃಪಂಚಶತಾನಿಚ । ಲಕ್ಷಮೇಕಂತುದೋಷಾಣಾಂಗುರುಃಕೇಂದ್ರೋವ್ಯಪೋಹತು ॥

ಟೀ॥ ಶುಕ್ರನುವಿವಾಹಲಗ್ನಕೇಂದ್ರಗಳಲ್ಲಿದ್ದರೆ೫ ಸಾವಿರದೋಷಗಳನ್ನುಹರಿಸುತ್ತಾನೆ ಬುಧನು ಲಗ್ನಾದಿಕೇಂದ್ರಗಳಲ್ಲಿ ಇದ್ದರೆ ೫ ನೂರು ದೋಃಷಗಳನ್ನು ಹರಿಸುತ್ತಾನೆ ಗುರುವು ಲಗ್ನಾ ಕೇಂದ್ರಗಳಲ್ಲಿದ್ದರೆ ಲಕ್ಷದೋಷಗಳನ್ನು ಹರಿಸುತ್ತಾನೆ.

ಮೂ॥ ಕಾವ್ಯೇಗುರೌವಾಸೌವ್ಯೋವಾಯಧಾಕೇಂದತ್ರಿಕೋಣಗೆ।ನಶ್ಯಂತಿಸಕಲಾಃದೋಷಾಃಪಾಪಾನೀವಹರಿಸ್ಮೃತೆಃ।

ಟೀ॥ ಶು, ಗು, ಬುಧರು ವಿವಾಹ ಲಗ್ನಕ್ಕೆ ಕೇಂದತ್ರಿಕೋಣಗಳಲ್ಲಿದ್ದರೆಹರಿಸ್ಮರಣೆಯುಸರ್ವಪಾಪಗಳನ್ನು ಹರಿಸುವಂದದಿ ಅವರುಗಳುಸಕಲದೋಷಗಳನ್ನು ಹರಿಸುವರು.

## ವಿವಾಹಕ್ಕೆ ಅಯೋಗ್ಯ ತಿಥಿಗಳು.

ಮೂ॥ ಮಾಸಾಂತೆ ಪಂಚದಿವಸಾಃತ್ಯಜೇದ್ರಿಕ್ತಾಮಮಾಷ್ಟಮಿಾಂ । ಷಷ್ಟಿಂಚಪರಿಘಾದ್ಯರ್ಥಂವ್ಯತೀಪಾತಸವೈಧೃತಿಂ ॥

ಟೀ॥ ಮಾಸಾಂತ್ಯದಲ್ಲಿ ೫ ತಿಥಿಗಳು, ರಿಕ್ತಾತಿಥಿಗಳು, ಅಮಾವಾಸ್ಯೆ, ಅಷ್ಟಮಿ, ಷಷ್ಟಿ, ಪರಿಘಾಯೋಗದ ಪೂರ್ವಭಾಗವು, ವ್ಯತೀಪಾತವೈಧೃತಿ, ಇವುಗಳಲ್ಲಿ ವಿವಾಹವನ್ನು ಮಾಡಕೂಡದು.

ಮೂ॥ ಜಾಮಿತ್ರಾದ್ಯೇಕವಿಂಶಚ್ಚ ಮಹಾದೋಷಾವಿವರ್ಜಿತಂ ॥

ಟೀ॥ ಸಪ್ತಮಶುದ್ಧಿ ಇಲ್ಲದ್ದು ಮೊದಲಾದ ಇಪ್ಪತ್ತೊಂದುಮಹಾದೋಷಗಳನ್ನು ಅವಶ್ಯಬಿಡತಕ್ಕದ್ದು.

## ಸ್ತ್ರೀಗೆ ಗೃಹ ಪ್ರವೇಶ.

ಮೂ ॥ ವಿವಾಹಮಾರಭ್ಯವಧೂಪ್ರವೇಶೋಯುಗ್ಮತಿಥೌಷೋಡಶವಾಸರಾಂತೆ । ಪಂಚಾಂಗಶುದ್ಧ್ಯಾ ದಿನಂವಿನಾಪಿತಿಥೌನಸದೊಚರುಗೇಪಿಕಾರ್ಯಃ ॥

ಟೀ॥ ವಿವಾಹದ ದಿನ ಮೊದಲು ೧೬ ದಿನಗಳಲ್ಲಿ ಸಮದಿನಗಳಲ್ಲಿ ಸ್ತ್ರೀಗೆಗೃಹಪ್ರವೇಶ ಮಾಡತಕ್ಕದ್ದು. ಈ ದಿನಗಳಲ್ಲಿ ದೋಷಗಳಿದ್ದರೂ ಮಾಡಹುದೆಂದು ಮುನಿಗಳು ಹೇಳಿದರು.

## ಋತುಕಾಲ ನಿರ್ಣಯವು.

ಮೂ॥ಕೆರಾದಿಪಂಚೊತ್ತರಮೂಲಪೌಷ್ಣವಿಷ್ಣುತ್ರಯಾಶ್ವಿಜ್ಯ ವಿಧೆಂದು ಭೆಷುಆದ್ಯರ್ತವಂ ಸೌಖ್ಯಸುತಾಯುರರ್ಧಣಂ ಸೌಭಾಗ್ಯವೃದ್ಧಿ ಕುರುತೆಂಗನಾನಾ

ಟೀ॥ ಹ, ಚಿ, ಸ್ವಾ, ಡೆ, ಅನೂ, ಉತ್ತ್ರಾ, ಉಷಾ, ಉಭಾ, ಮೂ, ರೆ, ಶ್ರ, ಧ, ಶತ, ಅ, ರೋ, ಮೃ, ಪು, ಈ .ನಕ್ಷತ್ರಗಳಲ್ಲಿ ಕನ್ಯೆಯು ಮೊದಲುಋತುವಾದರೆ ಸೌಖ್ಯ, ಸಂತಾನ ಆಯುಸ್ಸು, ಧನಲಾಭ, ಸೌಭಾಗ್ಯ, ಯಶೋವೃದ್ಧಿ, ಇವುಗಳುಂಟಾಗುವವು.

## ವರ್ಜ್ಯ ತಿಥಿಗಳು

ಮೂ॥ ಅಮಾರಕ್ತಾಚಷಷ್ಟೀಚದ್ವಾದಶೀವ್ರತಪರ್ವಸು । ಪರಿಘಸ್ಯಚಪೂರ್ವಾರ್ಧೆವ್ಯತೀಪಾತೆಚವೈದೃತೌ । ಸಂಧ್ಯೋಕುಪ್ಲವನೆವಿದ್ಯಾಮಶುಭಂಪ್ರಥಮಾರ್ತವಂ ॥

ಟೀ॥ ೪-೬-೮-೯-೧೨-೧೪-೧೫-೩೦-ಈತಿಥಿಗಳು, ಪರಿಘಾಪೂರ್ವಾರ್ಧವು ವ್ಯತೀಪಾತ ವೈಧೃತಿಗಳು ಭದ್ರಾಕರಣವು, ಸಂಧ್ಯಾಕಾಲವು, ಸೂರ್ಯಚಂದ್ರಗ್ರಹಣಗಳು, ಇವುಗಳಲ್ಲಿ ಮೊದಲು ಋತುವಾಗಕೊಡದು.

ಮೂ ॥ ಬುಧಶುಕ್ರೆಂದುಜೀನಾಂವಾರಾರೆಷುಶುಭದಂಭವೇತಾ । ಶುಭಾನಾಮಂಶಕೆಂಶ್ರೇಷ್ಟಮಾರ್ತವೆಪ್ರಥಮೇಶುಭಂ ॥

ಟೀ॥ ಬು, ಶು, ಚಂ, ಗು, ಇವರುಗಳ ವಾರಗಳು ರಾಸಿಗಳು,ಅಂಶಗಳು ಇವುಗಳೆಲ್ಲವೂ ಶುಭಕರಗಳು.

## ನಿಷೇಕ ಕಾಲ.

ಮೂ॥ವಿಷ್ಣುಪ್ರಜೇಶರವಿಮಿತ್ರಸಮೀರ ಪೌಷ್ಣಮೂಲೋತ್ತರಾ
ವರುಣ ಭಾನಿನಿಷೇಕಕಾರ್ಯೆ। ಪೂಜ್ಯಾನಿಪುಷ್ಯವಸುಶೀತಕ
ರಾಶ್ವಿಚಿತ್ರಾದಿತ್ಯಾಶ್ಚ ಮಧ್ಯಮಫಲಾವಿಫಲಾಸ್ಯುರನ್ಯೇ॥

ಟೀ॥ಶ್ರ, ರೋ,ಹ,ಅನೂ,ಸ್ವಾ,ರೇಮೂ, ಉತ್ತ್ರ,ಉಭಾ,ಶತ,ಈನಕ್ಷತ್ರಗಳುನಿಷೇಕಕ್ಕೆಯೋಗ್ಯಗಳುಪುಷ್ಯ,ಧ,ಮೃ,ಅಶ್ವಿ,ಚಿ,ಪುನ, ಈ ನಕ್ಷತ್ರಗಳು ಮಧ್ಯಮಗಳು ಉಳಿದು ನಕ್ಷತ್ರಗಳು ಅಧಮಗಳು.

ಮೂ॥ ಷಷ್ಠ್ಯಷ್ಟಮೀಂಪಂಚದಶೀಚತುರ್ಥೀಂಚತುರ್ದ್ದಶೀಮ ಪ್ಯುಭಯತ್ರಹಿತ್ವಾ । ಶೇಷಾಶ್ಶುಭಾಸ್ಯುಸ್ತಿಥಯೋನಿಷೇಕೇವಾರಾಶ್ಶಶಾಂಕಾದ್ಯಸಿತೇಂದುಜಾನಾ॥

ಟೀ॥ ೪-೬-೮-೧೪-೧೫-೩೦ಈ ತಿಥಿಗಳನ್ನು ಬಿಟ್ಟು ಕಡೆವೆ ತಿಥಿಗಳಲ್ಲಿಯು, ಸೋಮ, ಬುಧ, ಗುರು, ಶುಕ್ರವಾರಗಳಲ್ಲಿಯುನಿಷೇಕವು ಶುಭಕರವು ಮೂಲ, ವೃಷಭಮಿಥುನಕರ್ಕಿಸಿಂಹಕನ್ಯಾತುಲಘಟಚಾಪಝ್ಯಷಾಶ್ಶುಭಾಹಂತಿ । ಯಧಿಶುಭಫಲಶಾಲಿನೋನು ಕೂಲೇನಿಧನವಿಶುದ್ಧಯುತೇನಿಷೇಕಕಾರ್ಯೆ॥

ಟೀ॥ ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ಕುಂಭ, ಧನುಸ್ಸು, ಮೀನ, ಈ ರಾಶಿಗಳು ಶುಭಗ್ರಹಗಳು. ಇವುಗಳು ಕೇಂದ್ರಾದಿಸ್ಥಾನಗಳಲ್ಲ ಬಲವಂತರಾಗಿ ಕೂಡಿಯಿರುವಾಗಲು ಅಷ್ಟಮಶುದ್ಧಿ ಇರೇವಾಗಲು ನಿಷೇಕಮಾಡುವದುಒಳ್ಳೇದು.

## ಪುಂಸವನ ಕಾಲವು.

ಮೂ॥ ಕುರ್ಯಾತ್ಪುಂಸವನಂಪ್ರಸಿದ್ಧವಿಷಯೇಮಾಸೇತೃತೀಯೇ
ಧವಾಪರ್ವ ಸ್ಪಷ್ಟತಸೌತುಷಾರಕಿರಣೇಪುಷ್ಯೇಧವಾವೈಷ್ಣವೇ।
ಹಿತ್ವಾಕರ್ಕಟಕಸ್ಸಯುಗ್ಮಮಖಿಲೇಷ್ವನ್ಯೇಷ್ವರಿಕ್ತೇತ್ರಿಥಾಶು
ಧ್ದನ್ಯೆಧನಧಾಮ್ನಿ ಶುಕ್ರಶಶಭೃದ್ವಿಣ್ಮಂತ್ರಿಣಾಂವಾಸರೇ॥

ಟೀ॥ ಪುಂಸವನವು ಪ್ರಸಿದ್ಧವಾದುಮೂರನೇ ತಿಂಗಳಲ್ಲಿ ಮಾಡತಕ್ಕದು, ಅಥವಾ ಗರ್ಭವು ಸ್ಪಷ್ಟವಾಗಿ ತಿಳಿದು ತರುವಾಯುವಾದಗು ಮಾಡತಕ್ಕದು. ಮತ್ತು ಮೃ, ಪುಷ್ಯ ಈ ೨ ನಕ್ಷತ್ರಗಳಲ್ಲಿಯೂ, ಅಥವಾ ಶ್ರವಣ ನಕ್ಷತ್ರದಲ್ಲಿ ಮಾಡಬಹುದು ಕರ್ಕಾಟಕ, ಕನ್ಯಾ, ಮಿಥುನ ರಾಶಿಗಳಲ್ಲಿಯು, ರಿಕ್ತತಿಥಿಗಳನ್ನು ಬಿಟ್ಟು ಅ

ಷ್ಟಕಶುದ್ಧಿ ಇರುವಾಗಲು, ಶುಕ್ರ, ಸೋಮಬುಧೆ, ಗುರುವಾರಗಳಲ್ಲಿಯು ಪುಂಸವನ ಮಾಡುವದು ಒಳ್ಳೆದು.

### ಸೀಮಂತಕಾಲವು.

ಮೂ॥ ಚತುರ್ಥಷಷ್ಠಾಷ್ಟಮಮಾಸಿಭಾಜಿಸೌರೇಣಗರ್ಭಂಪ್ರಥಮಂವಿಧೇಯಂ। ಸೀಮಂತಕರ್ಮದ್ವಿಜ ಭಾಮಿನೀನಾಂ ಮಾಸೇಷ್ಟಮೆವಿಷ್ಣುಬಲಿಂಚಕುರ್ಯಾತ್॥

ಟೀ॥ ಬ್ರಾಹ್ಮಣ ಸ್ತ್ರೀಯರಿಗೆಪ್ರಥಮ ಗರ್ಭವುಪ್ರಕಾಶವಾಗಿ ತಿಳಿಯುಬರುವಾಗ ೪-೬-೮ಈತಿಂಗಳುಗಳಲ್ಲಿ ಸೀಮಂತವುಮಾಡತಕ್ಕದ್ದು.೮ನೇತಿಂಗಳಲ್ಲಿವಿಷ್ಣುಬಲಿಯನ್ನೂಮಾಡತಕ್ಕದ್ದು.

ಮೂ॥ ಸೀಮಂತೆತಿಷ್ಯಹಸಾದಿತಿಹರಿಶಶಭೃತ್ಪೌಷ್ಣವಿದ್ಯೋತ್ತರಾಖ್ಯಾಃ ಪಕ್ಷಚ್ಛಿದ್ರಾಂಚರಿಕ್ತಾಂಪಿತೃತಿಥಿಮಸಹಾಯಾಪರೆಸ್ಯುಃಪ್ರಶಸ್ತಾಃ ಸಿಂಹಾಳೀವರ್ಜಯಿತ್ವಾಶುಭಫಲಬುಹುಳಾರಾ ಶಯೋಪ್ಯಂಶಕಾನಿಶ್ರೇಷ್ಠಾಸ್ಯುಶ್ಚೇತರೋಚೇ ಭೃಗುಬುಧಧಿಷಣಾನಾಂವಿದ್ಧಿಷಮೇಪಿ ॥

ಟೀ॥ ಸೀಮಂತದಲ್ಲಿ ಪುಷ್ಯ, ಹ, ಪುನ, ಶ್ರ ಮೃ, ರೇ, ರೋ, ಉತ್ತ, ಉಷಾ, ಉಭಾ, ಈ ನಕ್ಷತ್ರಗಳು ಮುಖ್ಯವಾದವು ಪಕ್ಷಚ್ಛಿದ್ರಗಳು, ರಿಕ್ತತಿಥಿಗಳು ಪಿತೃತಿಥಿಗಳು, ಸಿಂಹ, ವೃಶ್ಚಿಕ ರಾಶಿಗಳು,ಇವುಗಳನ್ನು ಬಿಟ್ಟು ಮಿಕ್ಕಾದರಾಶ್ಯಂಶಗಳತಯು, ತಿಥಿಗಳಲ್ಲಿಯು ಸೋಮ, ಬುಧ, ಗುರು, ಶುಕ್ರರುಪ್ರಬಲವಾಗಿರುವಾಗಲು, ಅಷ್ಟಮಶುದ್ಧಿ ಇರುವಾಗಲುಸೀಮಂತವು ಶುಭಕರವು.

### ಯಾತ್ರಾಪ್ರಕರಣವು—ತಿಥಿಶೂಲಗಳು.

ಮೂ॥ ಪ್ರತಿಪನ್ನವಮೀಪೂರ್ವೆದ್ವಿತೀಯೆದಶಮೋತ್ತರೆ । ತೃತೀಯೆಕಾದಶೀಯಾಗ್ನೇಚತುರ್ದ್ವಾದಶನೈಋತೌ ॥ ಪಂಚತ್ರಯೋದಶೀಯಾಮ್ಯೆಜಲೆಷಷ್ಟಿಚತುರ್ದಶೀ ॥ ಸಪ್ತಮೀಪೂರ್ಣವಾಯವ್ಯಾಂಅಮಾವಾಸ್ಯಾಷ್ಟಮಿಶಯೋಃ ॥

ಟೀ॥ ೧-೯ ಈ ತಿಥಿಗಳಲ್ಲಿ ಪೂರ್ವದಿಕ್ಕಿಗು, ೨-೧೦ ಗಳಲ್ಲಿ ಉತ್ತರದಿಕ್ಕಿಗು, ೩-೧೧ ಗಳಲ್ಲಿಆಗ್ನೇಯಕ್ಕು, ೪-೧೨ ನಿರುಋತಿದಿಕ್ಕಿಗು, ೫-೧೩ ಗಳಲ್ಲಿದಕ್ಷಿಣದಿಕ್ಕು, ೬-೧೪ಗಳಲ್ಲಿಪಶ್ಚಿಮಕ್ಕು,

೬-೧೫ಗಳಲ್ಲಿ ವಾಯುವ್ಯಕ್ಕೆ ೩೦-೪ಗಳಲ್ಲಿಯಿಶಾನ್ಯಕ್ಕೆ ಹೋ
ಗಕೊಡದುಇವೇತಿಧಿಶೂಲಗಳು ವಾರಶೂಲಗಳು

ಶ್ಲೋ॥ ನಪೂರ್ವೆಶನಿಸೊಮೇಚನ ಗುರುರ್ದಕ್ಷಿಣಸ್ತಧಾ। ನಪ
ಶ್ಚಾದ್ಬಾನುಶುಕ್ರೆಚನೊತ್ತರೆಬುಧಮಂಗಳೆ ॥

ಟೀ॥ ಶನಿಸೋಮವಾರಗಳು ಪೂರ್ವಧಿಕ್ಕಿಗು, ಗುರುವಾರದಲ್ಲಿ ದಕ್ಷಿಣಕ್ಕೆ ಆದಿತ್ಯ ಶುಕ್ರವಾರಗಳಲ್ಲಿ ಪಶ್ಚಿಮಕ್ಕೆ, ಮಂಗಳಬುಧ ವಾರಗಳಲ್ಲಿ ಉತ್ತರದಿಕ್ಕೆ ಪ್ರಯಾಡಬಾರದು.

ಪ್ರಯಾಣಕ್ಕೆ ಮುಖ್ಯ ನಕ್ಷತ್ರಗಳು.

ಮೂ॥ಮೃಗಾಶ್ವಿನೀಪುಷ್ಯಪುನರ್ವಸೂಚ ಹಸ್ತಾನು ರಾಧಾಶ್ರವಣಂಚಮೂಲಾ।ಧನಿಷ್ಟರವತ್ಯಗತೆಪ್ರಯಾಣೆಫಲಂಲಭೆಚ್ಛೇಪ್ರವಿವರ್ತನಂಚ।

ಟೀ ॥ಮೃ, ಅಶ್ವಿ, ಪುಷ್ಯ, ಪುನ, ಹ, ಅನೂ, ಮೂ, ಧ, ರೇ, ಈನಕ್ಷತ್ರಗಳು ಪ್ರಯಾಣದಲ್ಲಿ ವಳ್ಳೆಶುಭಪಲಗಳನ್ನು ಕೊಡುವದು.

ಯೋಗಿನಿ.

ಮೂ ॥ ಶತೆಮುಖಂದುಹುತಾಶೆನರಕ್ಷ ಸಾಯುಮಜಲೆಶಸಮಿಾರಣ ಶೂಲಿನಾ ॥ದಿವಿಭುವಿಕ್ರಮಶಃ ಪರಿವರ್ತತೆಸಿತತಿಧಿ ಪ್ರಥಮಾದಿಷು ಯೋಗಿನೀ॥

ಟೀ॥ಶು೧-೧೦ ಬ ೬, ಈತಿಧಿಗಣಲ್ಲಿ ಪೂರ್ವದಿಕ್ಕಿನಲ್ಲಿಯು,ಶು೨ ೧೨ಬ ೭,ಇವುಗಳಲ್ಲಿಉತ್ತರದಿಕ್ಕಿನಲ್ಲಿಯು,ಶು೩-೧೩-ಬ ೪ ಲ್ಲು ಆಗ್ನೇಯದಲ್ಲಿಯು,ಶು೪-೧೪,ಬ೯ಲ್ಲು ನಿರುಋತಿ ದಿಕ್ಕಿನಲ್ಲಿಯು, ಶು೫-೧೫ಬ ೧೦ರಲ್ಲು,ದಕ್ಷಿಣದಲ್ಲಿಯು,ಶು೬ಬ೧-೩೦ಲ್ಲು ಪಶ್ಚಿಮದಲ್ಲಿಯು,ಶು೭-ಬ-೨-೧೨ಲ್ಲುವಾಯುವ್ಯದಲ್ಲಿಯು, ಶು-೪-ಬ-೩ ೧೩ಲ್ಲುಈಶಾನ್ಯೆದಲ್ಲಿಯು,.ಶು-೯-ಬ-೪-೧೪ಲ್ಲು ಆಕಾಶ ದಲ್ಲಿಯು, ಶು೧೦-ಬ೫-೩೦ಲ್ಲು ಭೂಮಿಯಲ್ಲಿಯೂ ಯೋಗಿನಿಇರುವದ್ದರಿಂದ ಆಯಾ ತಿಥಿಗಳಲ್ಲಿ ಆಯಾದಿಕ್ಕುಗಳಿಗೆ ಯಾತ್ರೆ ಹೋಗಕೊಡದು.

ಶ್ಲೋ ॥ಅಜಾಳಿಕನ್ಯಾಘಟಕೀಟ ಭೇಷುಯಾತ್ರಾಂನ ರೋಯಃ ಕುರುಲೆಸ್ತಮೃತ್ಯುಃ॥

ಟೀ॥ಮೇಷ,ಸಿಂಹ,ಕನ್ಯೆ,ವೃಶ್ಚಿಕ, ಕುಂಭ,ಈರಾಶಿಗಳಲ್ಲಿ ಪ್ರಯಾಣಮಾಡುವವರಿಗೆ ಅನಿಷ್ಟಸಂಭವಿಸುವದು.

ನರಿಕೂಗು. ಶೀನು,ದನಗಳಶೀನು,ಇವುಗಳಿಗೆ ಫಲವು.

ಮೂ॥ಪ್ರಾಗಾದೌಶನಿವಾಸರಾದಿಗದಿತಾಃಸೂರೋದಯೇಷ್ಟೌಗ್ರಹಾಃನಾಗಾನಾಗಾನಗಾನಿಧೀನಿಶಿನಭೋನಾದೋನಸೋನಾಡಿಕಾಃ।
ಹಾನಿಪ್ರೀತಿದುರುಕ್ತಿಬಂಧುಕನಕಸ್ತ್ರೀಗ್ರಾಮ್ಯಾನ್ನತಾಪಾರ್ತಿದಾಃ॥
ಶೋತ್ರುಃಕ್ರೋಷ್ಟುರುತೇಕ್ಷುತೆಪಲಮಿದಂವ್ಮೃತ್ಯೋಸ್ಸದಾಗೋಕ್ಷುತಂ।

ಟೀ॥ಶನಿವಾರ ಹಗಲು ೩ಂಘಳಿಗೆ ಮೂಡಲೆ ದಿಕ್ಕಿನಲ್ಲಿಯುಆರಾತ್ರಿ೩ಂಘಳಿಗೆ ಆಗ್ನೇಯದಲ್ಲೂ, ಆದಿತ್ಯವಾರಹಗಲು೩ಂಘಳಿಗೆದಕ್ಷಿಣ ದಿಕ್ಕಿನಲ್ಲಿಯೂ, ಆರಾತ್ರಿ೩ಂಘಳಿಗೆ ಸೋಮವಾರದಲ್ಲಿ ೬ಂಘಳಿಗೆ ನಿರುಋತಿ ದಿಕ್ಕಿನಲ್ಲಿಯು,ಮಂಗಳವಾರಹಗಲು೩ಂರಾತ್ರಿ೨ಂಅಂತು೫ಂಘಳಿಗೆಪಶ್ಚಿಮದಲ್ಲೂ,ಆರಾತ್ರಿಉಳಿದ೧ಂಘಳಿಗೆಯ ಬುಧವಾರ ಹಗಳು೩ಂಘಳಿಗೆ, ಅಂತು೪ಂಘಳಿಗೆ ವಾಯುವ್ಯದಲ್ಲೂ ಬುಧವಾರರಾತ್ರಿ೩ಂಘಳಿಗೆ, ಬೃಹಸ್ಪತಿವಾರದಲ್ಲಿ೫ಂಅಂತು೮ಂಘಳಿಗೆ ವರಿಗೂಉತ್ತರದಲ್ಲೂ, ಆರಾತ್ರಿಯಲ್ಲಿ ಉಳಿದ೧ಂಘಳಿಗೆಯು ಶುಕ್ರವಾರ೬ಂಘಳಿಗೆಯು ಅಂತು೭ಂಘಳಿಗೆ ಈಶಾನ್ಯದಲ್ಲೂ,ಸೂರ್ಯನುಮೊದಲು ರಾಹುವರಿಗೆ೮ಗ್ರಹಗಳು ವಾಸಮಾಡುತ್ತಾರೆ. ನರಿಕೂಗು ಶೀನು,ದನಗಳಸೀನುಇವುಗಳು ಈ ವಾರಗಳಲ್ಲಿ ರಾಜವಿರುವ ದಿಕ್ಕಿನಲ್ಲಿ ಯಾದರೆ ಹಾನಿಕರವು. ಅದಕ್ಕೆಫಲವು, ೨ನೇದಿಕ್ಕಿನಲ್ಲಿ ವಿಶ್ವಾಸವು, ೩ನೇ ದಿಕ್ಕಿನಲ್ಲಿ ಕೆಟ್ಟಮಾತು,೪ನೇದಿಕ್ಕಿನಲ್ಲಿ ಬಂದುಲಾಭವು ೫ನೇ ದಿಕ್ಕಿನಲ್ಲಿ ಸ್ವರ್ಣಲಾಭವು, ೬ನೇದಿಕ್ಕಿನಲ್ಲಿ ಭೋಜನ ಸೌಖ್ಯವು_೭ನೇದಿಕ್ಕಿನಲ್ಲಿ ವ್ಯಸನವು ೮ನೇದಿಲ್ಲಿ ಪೀಡೆಯು,ಈಮೇರೆಕ್ರಮವಾಗಿಫಲಗಳನ್ನು ತಿಳಿಯತಕ್ಕದ್ದು

ಮುಹೂರ್ತದೀಪಿಕೆಯು ಸಂಪೂರ್ಣಮಾದದು





ಶ್ರೀರಸ್ತು.

# ಮು ಹೂ ರ್ತ ದ ರ್ಪ ಣ ವು .



ಶ್ಲೋ॥ ಯಶ್ಶೈಷಸ್ಸತತಂಸಹಸ್ರಫಣಾನೇಕೇನಮೂರ್ಧ್ನಾರ್ಹ
ಬ್ರಹ್ಮಾಂಡಾನಿಬಹೂನಿಪಂಕಜದಳೆಪ್ರಾಯೇಣನಿಭ್ರಾಜತೆ।
ತಂಶೇಷಂದಧತಂಸ್ವವಾಮಚರಣೆಸಂನೂಪುರಾಭಂಮುದಾ
ತಾರ್ಕ್ಷ್ಯಾಗ್ರೋಪರಿಸಂಸ್ಥಿತಂಸುರಯುತಂಶ್ರೀವೆಂಕಟೇಶಂಭಜೆ
ಮೂ॥ತ್ರಿಮೂರ್ತಿರೂಪಿಣಂದೇವಂತ್ರಯೀವೇದ್ಯಂಶುಭಾವಹಂ।
ತ್ರಿಗುಣಾತೀತಮವ್ಯಕ್ತಂ ವಂದೇಸೂರ್ಯಂಸದಾವಿಭುಂ।
ನಾರದೇನಕೃತಂಯಚ್ಚ ಮುಹೂರ್ತಾಹ್ವಯದರ್ಪಣಂ।
ತಟ್ಟೀಕಾಂಪ್ರರಭೆಬಾಲ ಬೋಧಾಯಸುಮನೋಹರಾಂ॥

ಟೀ॥ತ್ರಿಮೂರ್ತಿಸ್ವರೂಪನಾಗಿಯೂ,ವೇದವೇದ್ಯನಾಗಿಯೂ,ಶು ಭಪ್ರದರಾಗಿಯೂ,ಸತ್ವ,ರಜಸ್ಸು,ತಪಸು, ಎಂಬಮೂರು ಗುಣಗಳ ನ್ನು ಮೀರಿದವನಾಗಿಯೂ, ಸೂಕ್ಷ್ಮರೂಪನಾಗಿಯೂ ಇರುವಸೂರ್ಯ ದೇವರನ್ನು ಯಾವಾಗ್ಯೂ ವಂದಿಸುತ್ತೇನೆಂಬದಾಗಿ ಈಕವಿಯು ಗ್ರಂಥಾದಿಯಲ್ಲಿ ಇಷ್ಟದೇವತಾನಮಸ್ಕಾರರೂಪ ವಾದಮಂಗಳ ವನ್ನು ರಚಿಸಿದನು ಪೂರ್ವ ಕಾಲದಲ್ಲಿ ನಾರದರಿಂದಮಾಡಲ್ಪಟ್ಟ ಮೂಹೂರ್ತದರ್ಪಣವೆಂಬ ಗ್ರಂಥವನ್ನು ಬಾಲಕರು ಸುಲಭವಾ ಗಿ ತಿಳಿಯತಕ್ಕಬಗ್ಯೆ ಅದಕ್ಕೆಟೀಕೆಯನ್ನು ಮಾಡುತ್ತೇನೆ

## ನಾಮ ನಕ್ಷತ್ರಗಳ ಕ್ರಮವು.

ಮೂ॥ ಚೂಚೇಚೋಲಾಸ್ತುಚಾಶ್ವಿನ್ಯಾಃಲಿಲೂಲೆಲೋಭರಣ್ಯಪಿ । ಅಈ ಊಏಕೃತ್ತಿಕಾಚಓವಾವೀವೂಚರೋಹಿಣೀ । ವೇವೋಕಾಕೀಮೃಗಶಿ ರಃಕೂಘಂಙಛಾಚರೌದ್ರಕಂ । ಕೇಕೋಹಾಹೀಪುನರ್ವಸ್ವಃಹೂಹೇ ಹೋಡಾಚಪುಷ್ಯಭಂ। ಡೀಡೂಡೇಡೋಚಅಶ್ಲೇಷಾಮಾಮೀಮೂಮೆ ಮಖಾತಥಾ । ಮೋಟಟೀಟೂಪೂರ್ವಭಂಚಟೇಟೋಪಾಪೀತುಚಾರ್ಯ ಭಂ । ಪೂಷಣಾಠಾಚಹಸ್ತಶ್ಚಪೇಪೋರಾರೀಚಚಿತ್ತಭಂ । ರೂರೇರೊ ತಾವಾಯುಋಕ್ಷಂತೀತೂತೇತೋವಿಶಾಖಭಂ । ನಾನೀನೂನೇಚಮಿತ್ರರ್ಕ್ಷ ನೋಯಾಯೀಯೂತುಜ್ಯೈತ್ರಭಂ । ಯೇಯೋಭಾಭೀಚಮೂಲ

ಕ್ಷೆರ್ಬೊಧಾಬಾಢಾಚಿತ್ತೂರುಭಂ । ಬಿಬೊಜಾಜೀಚವಿಶ್ವೆಚೆಜೂಜಿ ಜೊಖಾಚವಿಷ್ಣುಭಂ । ಗಾಗೀಗೂಗೇವಾಸವೆಚಗೊಸಾಸೀಸೂಚ ವಾರುಣಂ । ಸೆಸೊದಾದೀಪ್ರೋಷ್ಟಭೆಚದುಶ್ಚಂಝಾದಾಹಿಬುಧ್ನಭೆ। ದೆದೊಚಾಚೀಚೆಪೌಷ್ಣಚಯಿತ್ಯೇತಾನಾಮತಾರಕಃ॥

ಟೀ॥ಮನುಷ್ಯರಿಗೆ ಜನ್ಮನಕ್ಷತ್ರಗಳು ತಿಳಿಯದೆ ಇದ್ದರೆ ಅವರು ಗಳ ಹೆಸರಿನ ಮೊದಲನೇ ಅಕ್ಷರದಿಂದ ಅವರನಕ್ಷತ್ರವನ್ನು ತಿಳದು ತೂಳ್ಳುವಕ್ರಮವಂತೆನೆ,-ಚೂಚೇಚೋಲಾ ಅಶ್ವಿನೀ ಅಂದರೆ ಈನಾ ಲ್ಕುಅಕ್ಷರಗಳಿಗೂ ಅಶ್ವಿನೀ ನಕ್ಷತ್ರ, ಹ್ಯಾಗಂದರೆ,-ಚುಕ್ಕಾ, ಚೂ ಡಾರ್ ಎಂಬ ಹೆಸರುಳ್ಳವನಿಗೆಅಶ್ವಿನೀ ೧ನೇ ಪಾದವಾಗುತ್ತದೆ, ಚೆ ನ್ನಾ ಯೆಂಬ ಹೆಸರುಳ್ಳವನಿಗೆಅಶ್ವಿನೀ ೨ನೇಪಾದ,ಚೊಕ್ಕಾ ಯೆಂ ಬಹೆಸರುಳ್ಳವನಿಗೆ ಅಶ್ವಿನೀ೩ನೇಪಾದ, ಲಕ್ಷ್ಮಣಾಯೆಂಬ ಹೆಸರು ಳ್ಳವನಿಗೆ ಅಶ್ವಿನೀ ೪ನೇಪಾದ,ಈಮೇರಿಗೆ೨೭ನಕ್ಷತ್ರಗಳಿಗೂ ನಕ್ಷ ತ್ರ೧ಕ್ಕೆನಾಲ್ಕು ಅಕ್ಷರಗಳ ಮೇರೆ ತಿಳಿಯತಕ್ಕದ್ದು. ಚೂಚೇಚೋ ಲಾ ಅಶ್ವಿನೀ, ಲೀಲೂಲೇಲೋ ಭರಣೀ, ಅ ಈ ಊ ಏ ಕೃತ್ತಿಕಾ, ಓ ವಾವೀವೂ ರೋಹಿಣೀ, ವೇವೋಕಾಕೀ ಮೃಗಶಿರ,ಕೂಖಂಙಚ್ಛಾ ಆ ರ್ದ್ರಾ,ಕೇಕೋಹಾಹೀ ಪುನರ್ವಸು,ಹೂಹೇಹೋಡಾಪುಷ್ಯಮಿ,ಡೀ ಡೂಡೆಡೋ ಆಶ್ಲೇಷ, ಮಾಮೀಮೂಮೆ ಮಖ ಮೋಟಾಟೀಟೂ ಪುಬ್ಬ,ಟೇಟೋಪಾಪೀ ಉತ್ತರ,ಪೂಷಣಾಢಾಹಸ್ತ, ಪೆಪೋರಾರೀ ಚಿತ್ತ,ರೂರೇರೋತಾ ಸ್ವಾತಿ,ತೀತೂತೇತೋ ವಿಶಾಖ, ನಾನೀನೂ ನೇ ಅನೂರಾಧ ನೋಯಾಯಿಯೂಜ್ಯೇಷ್ಠ, ಯೇಯೋಬಾಬೀ ಮೂಲ,ಬೂಧಾಬಾಢಾ ಪೂರ್ವಾಷಾಢ, ಬೇಪೋಜಾಜೀ ಉತ್ತರಾ ಷಾಢ, ಜೂಜೇಜೋಖಶ್ರವಣಂ, ಗಾಗೀಗೂಗೆ ಧನಿಷ್ಠ,ಗೋಸಾ ಸೀಸೂ ಶತಭಿಷಕ್,ಸೇಸೋದಾದೀ ಪೂರ್ವಭಾದ್ರ,ದುಶ್ಯಂ ಝಾ ಥಾ ಉತ್ತರಾಭಾದ್ರ,ದೇದೊಚಶಚೀ ರೇವತೀ, ಈ ಪ್ರಕಾರವಾಗಿತಿ ಳಿದು ಕೊಳ್ಳತಕ್ಕದ್ದು.

ಸಂಯುಕ್ತಾಕ್ಷರಗಳುಳ್ಳನಾಮಗಳಿಗೆನಕ್ಷತ್ರಗಳನ್ನು ತಿಳಿಸುವ ಗ್ರಂಥಾಂತರ ಉದಾಹರಣೆಗಳು.

ಮೂ॥ ಕೃಷ್ಣೋಹ್ಯಷ್ಣಶ್ರೀಧರಃಕ್ಷೆತ್ರಪಾಲೊಜ್ಞಾನೊಭೀಮೊ

ಭೈರವಶ್ಚೇತಿನಾಮ್ನಾಂ।ಇಂದುರ್ವಾಯುತ್ವಷ್ಟ್ರಹಸ್ತಾರ್ದ್ರ-
ಪುಷ್ಯಾಃಪೂರ್ವಾಷಾಢಾಚೇತಿಋಕ್ಷಾಣಿಸಪ್ತ॥

ಟೀ॥ಕೃಷ್ಣನೆಂಬ ಹೆಸರಿಗೆ ಮೃಗಶಿರಾನಕ್ಷತ್ರವು, ಅದರ೩ನೇಪಾದವು.ಹೃಷ್ಣನೆಂಬ ಹೆಸರಿಗೆ ಸ್ವಾತೀ ನಕ್ಷತ್ರವು,ಅದರ೧ನೇ ಪಾದವು. ಶ್ರೀಧರನೆಂಬ ಹೆಸರಿಗೆ ಹಸ್ತನಕ್ಷತ್ರವು,ಅದರ ೪ ನೇ ಪಾದವು. ಕ್ಷೇತ್ರಪಾಲಕನೆಂಬ ಹೆಸರಿಗೆ ಹಸ್ತನಕ್ಷತ್ರವು, ಅದರ೨ನೇಪಾದವು,ಜ್ಞಾನನೆಂಬ ಹೆಸರಿಗೆ ಆರ್ದ್ರಾನಕ್ಷತ್ರವು,ಅದರ ೩ನೇಪಾದವು, ಭೀಮನೆಂಬ ಹೆಸರಿಗೆ ಪುಷ್ಯನಕ್ಷತ್ರವು, ಅದರ ೩ನೇಪಾದವು. ಭೈರವನೆಂಬ ಹೆಸರಿಗೆ ಪೂರ್ವಾಷಾಢಾನಕ್ಷತ್ರವು, ಅದರ ೩ನೇ ಪಾದವೆಂಬದಾಗಿತಿಳಿದುಕೊಳ್ಳಬೇಕು. ಈಕ್ರಮವು ಅವಕಹಢಾದಿ ಚಕ್ರದಲ್ಲಿ ಹೇಳಲ್ಪಟ್ಟಿಧೆ.

ತರುವಾಯನಕ್ಷತ್ರಗಳಕ್ಷಿಪ್ರ,ದಾರುಣ,ಮೃದು,ಸ್ಥಿರ,ಉಗ್ರ,ಸಾಧಾರಣ,ಚರ ಯೆಂಬ ಸಂಜ್ಞೆಯನ್ನು ತಿಳಿಸುತ್ತಾನೆ.

ಮೂ॥ಕ್ಷಿಪ್ರಂದಸ್ರರವಿಜ್ಯಮಾಸುರಶಿವಜ್ಯೇಷ್ಠೋರಗಂದಾರುಣಂ
ಚಿತ್ರಾಂತ್ಯೇಂದುಭಮೈತ್ರಭಂಮೃದುಭವೇದ್ಬ್ರಹ್ಮೋತ್ತರಾ
ಭಂಸ್ಥಿರಮ್॥ಉಗ್ರಂಕಾಲಮಖಿತ್ರಿಪೂರ್ವ ಮ.ನಲೆಂದಾಗ್ನೀ
ತುಸಾಧಾರಣಂ। ಸ್ವಾತ್ಯಾದಿತ್ಯಹರಿತ್ರಯಂಚರಮಿದಂದದ್ಯಾ
ತ್ಸ್ವಸಂಜ್ಞಾಫಲಮ್॥

ಟೀ॥ಅಶ್ವಿ, ಹಸ್ತ, ಪುಷ್ಯಈ೩ಕ್ಷಿಪ್ರನಕ್ಷತ್ರಗಳುಅಂದರೆ,ಶೀಘ್ರವಾದವುಗಳು.ಮೂಆರ್ದ್ರೇ,ಜ್ಯೇಷ್ಠ,ಆಶ್ರೇಷ,ಈ೪ದಾರುಣ ನಕ್ಷತ್ರಗಳು. ಅಂದರೆ. ಕ್ರೂರಗಳು,ಚಿತ್ತ,ರೇ,ಮೃ,ಅನೂ,ಈ ೪ ಮೃದುನಕ್ಷತ್ರಗಳು.ರೋ,ಉತ್ತ,ಉಷಾ,ಉಭಾ,ಈ೪ಸ್ಥಿರನಕ್ಷತ್ರಗಳು. ಭರಮಖ,ಹುಬ್ಬೆ.ಪೂಷಾ, ಪೂಭಾ,ಈ೫ಉಗ್ರನಕ್ಷತ್ರಗಳು ಕೃ,ವಿ ಈ ೨ ಸಾಧಾರಣ ನಕ್ಷತ್ರಗಳು,ಸ್ವಾ,ಪುನ,ಶ್ರ,ಧಶತಈ೫ಚರನಕ್ಷತ್ರಗಳು ಇಲ್ಲಿ ಹೇಳಲ್ಪಟ್ಟ ಸಂಜ್ಞೆಗಳ ಮೇರೆ ನಕ್ಷತ್ರಗಳು ಫಲವನ್ನೂ ಕೊಡುತ್ತವೆ ಅಂದರೆ,ಕ್ಷಿಪ್ರನಕ್ಷತ್ರಗಳು ಶೀಘ್ರಫಲವನ್ನೂ, ದಾರುಣಕ್ಷತ್ರಗಳುಕ್ರೂರಫಲವನ್ನೂ,ಮೃದುನಕ್ಷತ್ರಗಳು ಮೃದುಫಲವನ್ನೂ ಸ್ಥಿರನಕ್ಷತ್ರಗಳುಸ್ಥಿರಫಲವನ್ನೂ,ಉಗ್ರನಕ್ಷತ್ರಗಳುಗ್ರಫಲವನ್ನು

ಸಾಧಾರಣ ನಕ್ಷತ್ರಗಳು ಸಾಮಾನ್ಯಫಲವನ್ನೂ, ಚರ ನಕ್ಷತ್ರಗಳು ಚಂಚಲ ಫಲವನ್ನು ಕೊಡುತ್ತವೆಂದು ತಾತ್ಪರ್ಯವು.

ತರುವಾಯ ನಕ್ಷತ್ರಗಳ ಅಧಿಪತಿಗಳನ್ನು ಹೇಳುತ್ತಾನೆ.

ಮೂ॥ ಋಕ್ಷೇಶಾಅಧದಸ್ರಕಾಲಹುತಭುಗ್ಬ್ರಹ್ಮೇಂದುರುದ್ರಾದಿತಿ।
ಜ್ಯಾನಾಗಾಃ ಪಿತರೋಭಗಾರ್ಯಮರವಿತ್ವಷ್ಟ್ರಶುಗಾಖ್ಯಾಃ ಕ್ರ
ಮಾತ್। ಇಂದ್ರಾಗ್ನೀಅಪಿಮಿತ್ರಶಕ್ರದನುಜಾಸ್ತೋಯಾಖ್ಯ
ವಿಶ್ವಾತ್ಮಭೂ। ಶ್ರೀಶಾಖ್ಯಾವಸುತೋಯಪಾಜಚರಣಾಹಿರ್ಬು
ಧ್ನ್ಯಪೂಷಾಹ್ವಯಾಃ॥

ಟೀ॥ ಅಶ್ವಿನಿಗೆ ಅಶ್ವಿನೀದೇವತೆಗಳು, ಭರಣಿಗೆ ಯಮಧರ್ಮರಾಯನು ಕೃತ್ತಿಕೆಗೆ ಅಗ್ನಿಯು, ರೋಹಿಣಿಗೆ ಬ್ರಹ್ಮದೇವನು, ಮೃಗಶಿರಕ್ಕೆ ಚಂದ್ರನು ಅರ್ದ್ರೆಗೆ ಶಿವನು, ಪುನರ್ವಸುವಿಗೆ ಅದಿತಿದೇವೀಯು, ಪುಷ್ಯಕ್ಕೆ ಬೃಹಸ್ಪತಿಯು ಅಶ್ಲೇಷಕ್ಕೆ ಆದಿಶೇಷನು, ಮಖೆಗೆ ಪಿತೃದೇವತೆಗಳು, ಹುಬ್ಬೆಗೆ ಭಗನೆಂಬ ಸೂರ್ಯಮೂರ್ತಿಯು, ಉತ್ತರೆಗೆ ಅರ್ಯಮನೆಂಬ ಒಂದು ಸೂರ್ಯಮೂರ್ತಿಯು, ಹಸ್ತಕ್ಕೆ ಸೂರ್ಯನು, ಚಿತ್ತೆಗೆ ಇಂದ್ರನು, ಸ್ವಾತಿಗೆ ವಾಯುವು, ವಿಶಾಖೆಗೆ ಇಂದ್ರಾಗ್ನಿಗಳು, ಅನೂರಾಧೆಗೆ ಮಿತ್ರನೆಂಬ ಸೂರ್ಯಮೂರ್ತಿಯು ಜ್ಯೇಷ್ಠೆಗೆ ದೇವೇಂದ್ರನು, ಮೂಲಕ್ಕೆ ನಿಋುಋುತಿಯು, ಪೂರ್ವಾಷಾಢೆಗೆ ಉದಕವು ಉತ್ತರಾಢೆಗೆ ವಿಶ್ವೇದೇವರು, ಅಭಿಜಿತ್ತಿಗೆ ಬ್ರಹ್ಮನು, ಶ್ರವಣಕ್ಕೆ ವಿಷ್ಣುವು, ಧನಿಷ್ಠೆಗೆ ಅಷ್ಟವಸುಗಳು, ಶತಭಿಷಕ್ಕಿಗೆ ವರುಣನು ಪೂರ್ವಾಭಾದ್ರೆಗೆ ಅಜೈಕಚರಣನು, ಉತ್ತರಾಭಾದ್ರೆಗೆ ಅಹಿರ್ಬುಧ್ನ್ಯನು, ರೇವತಿಗೆ ಪೂಷನೆಂಬ ಸೂರ್ಯಮೂರ್ತಿಯು, ಎಂಬದಾಗಿ ಈ ಮೇರೆ ಕ್ರಮದಿಂದ ೨೮ ನಕ್ಷತ್ರಗಳಿಗೆ ೨೮ ದೇವತೆಗಳೆಂದು ತಿಳಿಯುವದು. ಇಲ್ಲಿ ಹೇಳಲ್ಪಟ್ಟ ಸೂರ್ಯನ ಮೂರ್ತಿಗಳು ದ್ವಾದಶಾದಿತ್ಯರಲ್ಲಿ ಶೇರಿದವರೆಂದು ತಿಳಿಯಬೇಕು.

ಅಂಧಕಾದಿ ನಕ್ಷತ್ರಗಳು.

ಮೂ॥ ಅರ್ಕಸ್ಥಿತರ್ಕ್ಷಾದಿಚದುರ್ಭಿರಂಧಾಃಷಡ್ಭಿರ್ದ್ವಿನೇತ್ರಂನ
ವವೈಕನೇತ್ರಂ ನೇತ್ರಾಣಿಯುಗ್ಮಾನಿತ ಥೈವಸಂಚತ್ರೀಣ್ಯಾ
ಹರಂಧಾಃ ಕ್ರಮಶಃಫಲಾನಿ॥

ಟೀ॥ ಸೂರ್ಯನಿರುವನಕ್ಷತ್ರಮೊದಲು ೪ ನಕ್ಷತ್ರಗಳು ಕುರುಡು ನಕ್ಷತ್ರಗಳು, ತರುವಾಯ ೬ನಕ್ಷತ್ರಗಳು ಯೆರಡು ಗಣ್ಣಳುಳ್ಳವು, ತರುವಾಯ ೯ ನಕ್ಷತ್ರಗಳು ಒಂದು ಕಣ್ಣುಳ್ಳವು, ತರುವಾಯ೩ ನಕ್ಷತ್ರಗಳು ಹಾಗೆಯೇಯೆರಡು ಕಣ್ಣಳುಳ್ಳವು, ತರುವಾಯ ೨ನಕ್ಷತ್ರಗಳು ಕುರುಡು ನಕ್ಷತ್ರಗಳು, ಈ ನಕ್ಷತ್ರಗಳು, ತಮ್ಮ ತಮ್ಮ ಸ್ವಭಾವ ಪಲಗಳನ್ನು ಕೊಡುವವು.

## ಜೀವನಿರ್ಜೀವ ನಕ್ಷತ್ರಗಳು.

ಮೂ॥ ಅರ್ಕರ್ಕ್ಷಮುಕ್ತಸ್ಥಿತಗಮ್ಯತಾ ರಾಸ್ತಿಸ್ರೋಮೃತಾಸ್ಸ
ಪ್ತತುಚಾರ್ಧಜೀವಾಃ । ಏಕೋಮೃತೋಷ್ಟೌಚಸುಪೂರ್ಣಜೀ
ವಾ ಏಕೋಮೃತಸ್ಸಪ್ತಮಪಾದಜೀವಾಃ ॥

ಟೀ॥ ಸೂರ್ಯನು ಯಾವನಕ್ಷತ್ರವನ್ನುಬಿಟ್ಟು ಯಾವನಕ್ಷತ್ರದಲ್ಲಿಯಿದ್ದುಕೊಂಡು, ಯಾವನಕ್ಷತ್ರಕ್ಕೆ ಹೋಗುವನಾಗಿ ಇದ್ದಾನೋ ಆ ೩ನಕ್ಷತ್ರಗಳುಮೃತ ನಕ್ಷತ್ರಗಳು, ಅದರಮೇಲೆ ೭ನಕ್ಷತ್ರ ಅರ್ಧಜೀವಗಳು ತರುವಾಯ ಒಂದುನಕ್ಷತ್ರನಿರ್ಜೀವನಕ್ಷತ್ರವು, ತರುವಾಯ ೮ನಕ್ಷತ್ರಗಳುಸಂಪೂರ್ಣಜೀವವುಳ್ಳವು. ತರುವಾಯ ಒಂದು ನಿರ್ಜೀವ ನಕ್ಷತ್ರವು, ತರುವಾಯ ೬ ನಕ್ಷತ್ರಗಳುಪಾದಜೀವನಕ್ಷತ್ರಗಳು, ಅಂದರೆ-ಸೂರ್ಯನು ಭರಣೀನಕ್ಷತ್ರದಲ್ಲಿ ಇರುವಾಗ ಅಶ್ವಿನೀ, ಭ, ಕೃ, ಈ ಮೂರುಮೃತನಕ್ಷತ್ರಗಳು,ತರುವಾಯರೋ ಮೃ, ಆರ್ದ್ರಾ, ಪುನ, ಪುಷ್ಯ, ಆಶ್ಲೇ, ಮಖ ಈ ೭ನಕ್ಷತ್ರಗಳುಅರ್ಧಜೀವನಕ್ಷತ್ರಗಳು, ಹುಬ್ಬೆನಕ್ಷತ್ರವು, ಮೃತನಿರ್ಜೀವನಕ್ಷತ್ರವು ಉತ್ತರ, ಹಸ್ತ, ಚಿ, ಸ್ವಾ, ವಿಶಾ, ಅನೂ, ಜ್ಯೇ, ಮೂ, ಈ ೮ನಕ್ಷತ್ರಗಳುಪೂರ್ಣ ಜೀವ ನಕ್ಷತ್ರಗಳು, ಪೂಷಾ ನಕ್ಷತ್ರವುನಿರ್ಜೀವನಕ್ಷತ್ರವು, ತರುವಾಯ, ಉಷಾ, ಶ್ರ, ಧ, ಶ, ತ, ಪೂಭಾ, ಉಭಾ ರೇಈ ೭ನಕ್ಷತ್ರಗಳುಪಾದಜೀವನಕ್ಷತ್ರಗಳೆಂದುತಿಳಿಯತಕ್ಕದ್ದು.

## ನಕ್ಷತ್ರತ್ಯಾಜ್ಯಾ ಘಟಿಕಾ ಪ್ರಮಾಣಗಳು.

ಮೂ॥ಖಾಷ್ಟಾಬ್ಧಿನಾಗ್ನ್ಯೋ ಮಗುಣಾಃಖ ವೇದಾಶ್ಚಕಾಂಕೇಂದುಸಾಗ್ರಂ
ಖಗುಣಾನಖಾಶ್ಚ । ದಂತಾಃಖರಾಮಾಶ್ಚನಖಾಃಪುರಾಣಾಭೂರ್
ಬಾಹವೋವ್ಯೋಮಕರಾಸ್ತ್ರಿಶಕ್ರಾಃ ॥ ಇಂದ್ರಾದಿಶೋಮಶ್ಚ್ಯವ

ನೊರಸಾಷ್ಠಾಜೀವಾನ ಖಾದಿಗ್ಧ ಶನಾಗಚಂದ್ರಾ । ನೃಪಾಶ್ಚಸಿದ್ಧಾಃಖಗುಣಾವಿಷಾಖ್ಯಾನಾದ್ಯಕ್ಷ್ಯತನ್ರಸ್ತದುಪರ್ಯಘಸ್ಸ್ಯಾತ್ ಟೀ॥ಅಶ್ವಿನಿಗೆ೫೧,ಭರಣಿಗೆ೨೦,ಕೃತ್ತಿಕೆಗೆ೩೦,ರೋಹಿಣಿಗೆ೪೦,ಮೃಗಶಿರಕ್ಕೆ೧೪,ಆರ್ದ್ರೆಗ ೨೦,ಪುನರ್ವಸುಗೆ ೩೦, ಪುಷ್ಯಕ್ಕೆ ೨೧, ಆಶ್ಲೇಷಕ್ಕೆ೩೨ದುಖಗೆ ೩೦,ಹುಬ್ಬೆಗೆ೨೦,ಉತ್ತರಕ್ಕೆ೧೮,ಹಸ್ತಕ್ಕೆ ೨೧,ಚಿತ್ತೆ ಗೆ೨೦, ಸ್ವಾತಿಗೆ೧೪ ವಿಶಾಖೆಗೆ೧೪, ಅನೂರಾಧೆಗೆ೧೦, ಜೇಷ್ಟಕ್ಕೆ೧೪, ಮೂಲಕ್ಕೆ೫೬, ಪೂರ್ವ್ವಾಷಾ, ಢಗೆ೨೪, ಉತ್ತರಾಷಾಡಗೆ೨೦, ಶ್ರವಣಕ್ಕೆ೧೦, ಧನಿಷ್ಟಗೆ೧೦, ಶತಭಿಷಕ್ಕೆಗೆ೧೮, ಪೂರ್ವಾಭಾದ್ರೆಗೆ೧೬, ಉತ್ತರಾಭಾದ್ರೆಗೆ೨೪, ರೇವತಿಗೆ೩೦, ಈ ಮೇರೆ ನಕ್ಷತ್ರತ್ಯಾಜಗಳನ್ನು ಈ ನಕ್ಷತ್ರಗಳಿಗೆ ಇಲ್ಲಿ ಹೇಳಲ್ಪಟ್ಟ ಅಂಕೆಗಳಮೇಲೆ ೩॥ ಕ್ಕಾಲುಗಳಿಗೆ ವಿಷಗಳಿಗೆಯೆಂದುತಿಳಿಯತಕ್ಕದ್ದು. ಮೂಲನಕ್ಷತ್ರಕ್ಕೆ ಮಾತ್ರ ೨೦ಗಳಿಗೆಮೇಲೆಯೂ ೧ ತ್ಯಾಜ್ಯವಿಧೆಯೆಂದುಗ್ರಂಧಾಂತರದಲ್ಲಿ ಹೇಳಲ್ಪಟ್ಟಿದೆ.

## ನಕ್ಷತ್ರಾಂಶ ರಾಶಿಗಳು.

ಶ್ಲೋ॥ ಸಪ್ತವಿಂಶತಿಭಂಜ್ಯೋತಿಶ್ಚ ಕಂತಿಮಿರವಾಯುಜ ತದುಷ್ಣಾಂಶೋರ್ಭವೇದ್ರಾಶಿರ್ನವರ್ಕ್ಷಚರಣಾಂಕಿತಃ॥

ಟೀ ಅಂಧಕಾರ ವಾಯುಗಳ ಸಂಯೋಗದಿಂದುಂಟಾದ ಜ್ಯೋತಿಶ್ಚಕ್ರವು ೨೭ ನಕ್ಷತ್ರರೂಪವಾಗುತ್ತೆ, ಅ ನಕ್ಷತ್ರಗಳ ಪಾದಗಳು ೯ ಶೇರಿಯೊಂದೊಂದು ರಾಶಿಯಾಗಿ ಸೂರ್ಯನಗ್ರಹಳಾಗುತ್ತವೆ. ಹ್ಯಾಗಂದರೆ ಅಶ್ವಿನಿಯ ಪದ ೪, ಭರಣಿಯಪಾದ ೪, ಕೃತ್ತಿಕೆಯಪಾದ ೧ಅಂತು ೯ ಪಾದಮೇಷರಾಶಿ, ಕೃತ್ತಿಕೆಯಲ್ಲಿ ಉಳಿದಪಾದ, ೩ ರೋಹಿನಿಯ ಪಾದ ೪, ಮೃಗಶಿರದಪಾದ೨, ಅಂತು ೯ ಪಾದ ವೃಷಭರಾಶಿ, ಮೃಗಶಿರದಲ್ಲಿ ಉಳಿದಪಾದ೨, ಆದ್ರಾ೪, ಪುನ೩, ಅಂತು ೯ ಪಾದಳು ಮಿಥುನರಾಶಿಯು ಪುನ ೧, ಪುಷ್ಯ೪, ಆಶ್ಲೇ ೪, ಅಂತು ೯ ಪಾದಗಳು ಕಟಕರಾಶಿಯು, ಮಖೆ ೪ ಹುಬ್ಬೆ೪, ವುತ್ತ೧, ಅಂತು ೯ ಪಾದಗಳು ಸಿಂಹರಾಶಿಯು ಉತ್ತರೆ೩, ಹಸ್ತ೪, ಚಿತ್ರ೨, ಅಂತು ೯ ಪಾದಗಳು ಕನ್ಯಾರಾಶಿಯು ಚಿತ್ತ೨, ಸ್ವಾತೀ೪. ವಿಶಾಖೆ೩. ಅಂತು ೯ ಪಾದಗಳು ತುಲೆಯು,

ವಿಶಾಖ ೧ ಅನೂ೪, ಜ್ಯೇ೪, ಅಂತು ೯ ಪಾದಗಳುವೃಶ್ಚಿಕವು,ಮೂ
ಲ೪, ಪೂಷಾ೪, ಉತ್ತರಾ೧ ಅಂತು ೯ ಪಾದಗಳು ಧನುಸ್ಸು,ಉ
ತ್ತರಾ ೩ ಶ್ರ೪, ಧನಿ೨, ಅಂತು ೯ ಪಾದಗಳು ಮಕರವು,ಧನಿಷ್ಠ
೨ ಶತ೪ ಪೂಭಾ೩, ಅಂತು ೯ ಪಾದಗಳು ಕುಂಭವು, ಪೂಭಾ೧
ಉತ್ತಭಾ೪, ರೇ೪, ಅಂತು ೯ ಪಾದಗಳುಮೀನಾರಾಶಿಯೆಂದು ತಿ
ಳಿಯತಕ್ಕದ್ದು. ಮತ್ತು ೨೭ ನಕ್ಷತ್ರಗಳನ್ನು ೯ ಆವರ್ತಿತಿರಿಗಿ
ಸಿದರೆ ೩ ನಕ್ಷತ್ರಕ್ಕೆ ೧೨ ರಾಸಿಗಳಮೇರೆ ಅಂಶರಾಶಿಗಲಾಗುತ್ತವೆ
ಹ್ಯಾಗಂದರೆ ಅಶ್ವಿನೀ ೧ನೇ ಪಾದಕ್ಕೆ ಮೇಷಾಂಶವು, ೨ನೇದಕ್ಕೆ
ವೃಷಭಾಂಶವು ೩ನೇ ದಕ್ಕೆ ಮಿಥೇನಾಂಶವು ೪ನೇ ದಕ್ಕ ಕಟಕಾ
ಶವು ಭರನಿ ೧ನೇದಕ್ಕೆ ಸಿಂಹಾಂಶವು, ೨ನೇದಕ್ಕೇ ಕನ್ಯಾಂಶವು
೩ನೇದಕ್ಕೆ ತುಲಾಂಶವು, ೪ನೇದಕ್ಕೆ ವೃಶ್ಚಿಕಾಂಶವು, ಕೃತ್ತಿಕ ೧
ನೇಪಾದಕ್ಕೆ ಧನುರಾಂಶವು ೨ನೇದಕ್ಕೆ ಮಕರಾಂಶವು ೩ನೇದಿಕೆ
ಕುಂಭಾಂಶವು ೪ನೇದಕ್ಕೆ ಮೀನಾಂಶವು ಈ ಮೇರೆ ೨೭ ನಕ್ಷತ್ರ
ಗಳಿಗೂ ೩ ನಕ್ಷತ್ರಕ್ಕೆ ೧೨ ರಾಶ್ಯಾಂಗಗಳಮೇರೆ ತಿಳಿದುಕೊಳ್ಳ
ತಕ್ಕದ್ದು. ... ... ... *

## ಮೇಷಾದಿ ರಾಶಿಗಳು.

ಮೂ॥ ಮೆಷೋಗೌರ್ಥಿಧುನಂ ಕರ್ಕೀಹರಿಃ ಕನ್ಯಾವಣಿಕ್ತತಃ
ಕೌರ್ಪಿಚಾಪೌನಕ್ರಕುಂಭೌ ಮೀನೋಮೇಷಾದಿತೋಭವೇತ್॥

ಟೀ॥ ಮೇಷ, ವೃಷಭ, ಮಿಥುನ, ಕಟಕ ಸಿಂಹ, ಕನ್ಯ, ತುಲಾ
ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ ಯೆಂಬದಾಗಿ ತಿಳಿ
ಯುವದು.

## ರಾಶ್ಯಾದಿಪತಿಗಳು.

ಮೂ॥ ಸಿಂಹಸಶಧಪತಿಸೂರ್ಯಃ ಕರ್ಕಟಸ್ಯನಿಶಾಕರಃ। ಮೆ
ಷವೃಶ್ಚಿಕಯೋರ್ಭೌಮಃ ಕನ್ಯಾಮಿಥುನಯೊಬುಧಃ। ಕೊದಂ
ಡಮೀನಯೊರ್ಮಂತ್ರೀ ತುಲಾವೃಷಭಯೋರ್ಭೃಗುಃ। ನಕ್ರ
ಸ್ಯಕುಂಭ ರಾಶಶ್ಚನಾಯುಕಃಸೂರ್ಯನಂದನಃ॥

ಟೀ॥ ಸಿಂಹಕ್ಕೆ ಸೂರ್ಯನು, ಕಟಕಕ್ಕೆ ಚಂದ್ರನು, ಮೇಶವೃಶ್ಚಿ
ಕಕ್ಕೆ ಅಂಗಾರಕನು, ಮಿಥುನ ಕನ್ಯಗಳಿಗೆ ಬುಧನು, ದನಸ್ಸು

ಮಿನಗಳಿಗೆ ಗುರುವು, ವೃಷಭ. ತುಲೆಗಳಿಗೆ ಶುಕ್ರನು, ಮಕರ ಕುಂಭಗಳಿಗೆ ಶನಿಯೂ ಅಧಿಪತಿಗಳೆಂದು ತಿಳಿಯಬೇಕು.

ಮೇಷಾದಿರಾಶಿ ಘಟಿಕಾ ಪ್ರಮಾಣಗಳು.

ಮೂ॥ ವಸ್ವಬ್ಧಿದಸ್ರಾಃಶರಶೈಲಪಕ್ಷಾಗುಣೇಂದುರಾಮಾಃಗುಣ ದೈವತಾನಿ। ಕೃಶಾನುದಂತಾಪಸುಖಾಗ್ನಯಸ್ತ್ಯೇವರ್ಮೇ ಷಾದಿಷಡ್ಭೃತ್ಕ್ರಮತಃಪರೇಸ್ಯುಃ॥

ಟೀ॥ ಮೇಷರಾಶಿಗೆ ೪-೮ ವೃಷಭರಾಶಿಗೆ ೪-೩೫ ಮಿಥುನರಾಶಿಗೆ ೫-೧೩, ಕಟಕರಾಶಿಗೆ ೫-೩೩, ಸಿಂಹರಾಶಿಗೆ ೫-೨೨, ಕನ್ಯಾರಾಸಿಜ ೫-೮, ತುಲಾರಾಶಿಗೆ ೫-೮, ವೃಶ್ಚಿಕರಾಶಿಗೆ ೫-೨೨ಧನೂರಾಸಿಗೆ ೫-೩೩ ಮಕರರಾಸಿಗೆ ೫-೧೩ ಕುಂಭರಾಶಿಗೆ ೪-೩೫ ಮೀನರಾಶಿಗೆ ೪-೮, ಈ ರೀತಿಯಾಗಿ ಮೇಷಾದಿರಾಶಿ ಘಟಿಕಾ ಪ್ರಮಾಣವನ್ನು ತಿಳಿಯುತಕ್ಕದ್ದು.

ಇವರೆಲ್ಲಿ ಕೆಲವರಮತ.

ಮೂ॥ ಮೀನಮೇಷೌಚತುರ್ದಂಡೀಗೋ ಕುಂಭೌಚತುರರ್ಧಕೇ। ಪಂಚಪಾದೋಯುಗ್ಮಮೃಗೌ ಪಂಚಾರ್ಧಂ ಚಾಪಕರ್ಕಿಣೌ॥ ಕೌರ್ಪಿಸಿಂಹೌಚಪಂಚಾರ್ಧಂಪಂಚಪಾದಸ್ತುಲಾಂಗನೆ। ಮೆಷಾದೀನಾಂತುಲಗ್ನಾನಾಂಮಾನಮೇವಂಪಿ ದುಬುಧಾಃ ॥

ಟೀ॥ ಮೀನ ಮೇಷಗಳು೪ ಘಳಿಗೆಗಳು,ವೃಷಭ ಕುಂಭಗಳು೪॥ ಮಿಥುನ ಮಕರಗಳು ೫।, ದನುಸ್ಸು ಕಟಕಗಳು೫॥ ವೃಶ್ಚಿಕ ಸಿಂಹಗಳು ೫,॥ ಕನ್ಯಾ ತುಲಾ ೫। ಘಳಿಗೆಗಳೆಂದು ತಿಳಿಯುವದು.

ಚರಸ್ಥಿರದ್ವಿಸ್ವಭಾವ ರಾಶಿಗಳು.

ಮೂ॥ ಚರಸ್ಥಿರದ್ವಿಸ್ವಭಾವೋ ಮೆಷಾದಿಃಕ್ರಮಶೋಭವೇತ್ ॥

ಟೀ॥ ಮೇಷಚರರಾಶಿ, ವೃಷಭಸ್ಥಿರರಾಸಿ, ಮಿಥುನ ದ್ವಿಸ್ವಭಾವ ರಾಸಿ, ಈ ಮೇರೆ ಕಟಕ ಮೊದಲು ೩-೩ ರಾಸಿಗಳು ಚರಸ್ಥಿರದ್ವಿಸ್ವಭಾವರಾಸಿಗಳೆಂದು ತಿಳಿಯುವದು.

ಲಗ್ನತ್ಯಾಜ್ಯ ಗಳು.

ಮೂ॥ ಅಜವೃಷಭಧನುಃ ಕನ್ಯೇಕಾದೌಭುಜಂಗಃ ಝಷಮಕರ

ಕುಳೀರೇ ವೃಶ್ಚಿಕಾಂತನರಾಹುಃ । ಮಿತುನಘಟತುಲನಾಂ ಸಿಂಹಮಧ್ಯೇತು ಗೃಧ್ರಸ್ಸಕಲಮುನಿಮತಂಸ್ಯಾತ್ಸರ್ವಕಾರ್ಯೇವವರ್ಜ್ಯಂ ॥

ಟೀ ॥ ಮೇಷ, ವೃಷಭ, ಧನುಸ್ಸು, ಕನ್ಯೆ, ಈ ೪ ರಾಶಿಗಳಿಗೂ ಮೊದಲು ಘಳಿಗೆ ತ್ಯಾಜ್ಯವು, ಸರ್ಪರೂಪವಾಗಿ ಇರುವದು. ಮೀನ, ಮಕರ, ಕರ್ಕಟ, ವೃಶ್ಚಿಕ, ಈ ರಾಶಿಗಳಲ್ಲಿಯೂ ಅಂತ್ಯದಲ್ಲಿ ॥ ಘಳಿಗೆ ತ್ಯಾಜ್ಯವು,ವರಾಹರೂಪವಾಗಿ ಇರುವದುಮಿಥುನ,ತುಲಾ, ಸಿಂಹ, ಕುಂಭ, ಇವುಗಳ ಮಧ್ಯದಲ್ಲಿ ॥ ಘಳಿಗೆ ತ್ಯಾಜ್ಯವು, ಗೃಧ್ರರೂಪವಾಗಿ ಇರುವದು.

ಉಚ್ಚನೀಚರಾಶಿಗಳು, ಪರಮೋಚ್ಚ ಪರಮನೀಚ ರಾಶಿಗಳು.

ಮೂ॥ ಅಜವೃಷಭ ಮೃಗಾಂಗನಾಕುಳೀರಾಃ ಝಷವಣಿಜೌ ದಿವಾಕರಾದಿತುಂಗಾಃ । ದಶಶಿಖಿಮನು ಯುಕ್ತಿಥೀಂದ್ರಿಯಾಂಶೈಃಸ್ತ್ರಿನವಕವಿಂಶತಿಭಿಶ್ಚ ದೆಸ್ತನೀಚಾಃ ॥

ಟೀ॥ ಸೂರ್ಯಾದಿ ೭ ಗ್ರಹಗಳಿಗೆ ಮೇಷಾದಿ ೭ ರಾಶಿಗಳು ಉಚ್ಚನೀಚಸ್ಥಾನಗಳು ಹ್ಯಾಗಂದರೆ- ಸೂರ್ಯನಿಗೆ ಮೇಷ ಉಚ್ಚಸ್ಥಾನ, ಅದಕ್ಕೆ ೭ನೇದುತುಲಾರಾಶಿ ನೀಚಸ್ಥಾನ, ಚಂದ್ರನಿಗೆವೃಷಭ ಉಚ್ಚಸ್ಥಾನ, ಅದಕ್ಕೆ ೭ನೇ ವೃಶ್ಚಿಕ ನೀಚಸ್ಥಾನ, ಅಂಗಾರಕನಿಗೆ ಮಕರ ಉಚ್ಚಸ್ಥಾನ, ಅದಕ್ಕೆ ೭ನೇ ಕಟಕ ನೀಚಸ್ಥಾನ, ಬುಧನಿಗೆ ಕನ್ಯರಾಶಿ ಉಚ್ಚಸ್ಥಾನ, ಅದಕ್ಕೆ ೭ನೇ ಮೀನ ನೀಚಸ್ಥಾನ, ಗುರುವಿಗೆ ಕಟಕ ಉಚ್ಚಸ್ಥಾನ, ಅದಕ್ಕೆ ೭ನೇಮಕರ ನೀಚಸ್ಥಾನ ಶುಕ್ರನಿಗೆ ಮೀನ ಉಚ್ಚಸ್ಥಾನ ಅದಕ್ಕೆ ೭ ನೇ ಕನ್ಯೆನೀಚಸ್ಥಾನ, ಶನಿಗೆ ತುಲೆ ಉಚ್ಚಸ್ಥಾನ, ಅದಕ್ಕೆ ೭ ನೇ ಮೇಷ ನೀಚಸ್ಥಾನ ಈ ಮೇರೆ ತಿಳಿಯತಕ್ಕದ್ದು.

ಮೂಲತ್ರಿಕೋಣರಾಶಿಗಳು.

ಮೂ॥ ಸಿಂಹಗೋಮೇಷಪಾಥೋನಧನುಸ್ತೌಲಿಘಟಿಷುಚರವ್ಯಾದೇರ್ಮುಖಮುಕ್ಷಂಚ ರವಿರ್ಬ್ಯಾಣೋದಿಶಸ್ತಥಾ । ತ್ರಿಪಂಚವಿಂಶತಿಸ್ಸಂಖ್ಯಾಭಾಗೋಮೂಲತ್ರಿಕೋಣಗಃ ॥

ಟೀ॥ ಸೂರ್ಯನಿಗೆ ಸಿಂಹದಲ್ಲಿ ೨೦ ಭಾಗಗಳುಮೂಲತ್ರಿಕೋಣ

೧೦ ಭಾಗಸ್ವಕ್ಷೇತ್ರ, ಚಂದ್ರನಿಗೆ ವೃಷಭದಲ್ಲಿ ೩ ಭಾಗವುಚ್ಛ ಮಿಕ್ಕ ೨೭ನೇ ಭಾಗಮೂಲತ್ರಿಕೋಣ, ಅಂಗಾರನಿಗೆಮೇಷದಲ್ಲಿ೧೨ ಭಾಗ ಮೂಲತ್ರಿಕೋಣ, ಮಿಕ್ಕ ಭಾಗಗಳು ಸ್ವಕ್ಷೇತ್ರಗಳು, ಬುಧನಿಗೆ ಕನ್ಯೆಯಲ್ಲಿ ೧೬-೧೭-೧೮-೧೯-೨೦ ಈ ೫ ಭಾಗಗಳು ಮೂಲತ್ರಿಕೋಣಗಳು ಬೃಹಸ್ಪತಿಗೆ ಧನೂರಾಶಿಯಲ್ಲಿ ೧೦ ಭಾಗಗಳು ಮೂಲತ್ರಿಕೋಣಗಳು, ಶುಕ್ರನಿಗೆ ತುಲೆಯಲ್ಲಿ ೧೫ ಭಾಗ ಮೂಲತ್ರಿಕೋಣ ಶನಿಗೆ ಕುಂಭರಾಶಿಯಲ್ಲಿ ೨೦ ಭಾಗ ಮೂಲತ್ರಿಕೋಣವೆಂದು ತಿಳಿಯತಕ್ಕದ್ದು.

## ಮಿತ್ರಶತ್ರು ಸಮಗ್ರಹಗಳು.

ಮೂ॥ ಶತ್ರೂಮಂದಸಿತೌಸಮಶ್ಶಶಿಸುತೋಮಿತ್ರಾಣಿಶೇಷಾರವೇಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚಸುಹೃದೌಶಷಾಸ್ಸಮಾಶೀತಗೋಃ ಜೀವೇಂದೂಷ್ಣಕರಾಃ ಕುಜಸ್ಯಸುಹೃದೋಜ್ಞೋರಿಸ್ಸಿತಾರ್ಕೀಸಮಾ। ಮಿತ್ರೇಸೂರ್ಯಸಿತೌಬುಧಸ್ಯಹಿಮಗುಶ್ಶತ್ರುಸ್ಸಮಾಶ್ಚಾಪರೇ॥

ಟೀ॥ ಸೂರ್ಯನಿಗೆ ಶನಿ ಶುಕ್ರರು ಶತ್ರುಗಳು, ಬುಧನು ಸಮನು, ಕುಜಚಂದ್ರಗುರು, ಇವರುಗಳು ಮಿತ್ರರು. ಚಂದ್ರನಿಗೆ ಸೂರ್ಯ ಬುಧರು ಮಿತ್ರರುಕುಜ ಗುರು ಶುಕ್ರಶನಿಗಳು ಸಮರು. ಕುಜನಿಗೆ ಬೃಹಸ್ಪತಿ ಚಂದ್ರ ಸೂರ್ಯ, ಯಿವರುಗಳು ಮಿತ್ರರು. ಬುಧನು ಶತ್ರುವು, ಶುಕ್ರ ಶನಿಗಳು ಸಮರು ಬುಧನಿಗೆ ಸೂರ್ಯ ಶುಕ್ರರು ಮಿತ್ರರು, ಚಂದ್ರನು ಶತ್ರುವು. ಮಿಕ್ಕ ಕುಜ ಗುರು ಶನಿಗಳು ಸಮರೆಂದುತಿಳಿಯತಕ್ಕದ್ದು.

ಮೂ॥ ಸೂರಸ್ಸೌಮ್ಯಸಿತಾವರೀವರಸುತೋಮಧ್ಯಃ ಪರೇತ್ವನ್ಯಥಾಸೌಮ್ಯಾರ್ಕೀಸುಹೃದೌಸಮಾಕುಜಗುರೂಶುಕ್ರಸ್ಯಶಷಾಪರೇ॥ ಶುಕ್ರಜ್ಞೌಸು ಹೃದೌಸಮಸ್ಸುರಗುರು ಸ್ಸೌರಸ್ಯಚಾನ್ಯೇರಯೋಃ ಯೇಪ್ರೋಕ್ತಾಸ್ಸುಹೃದಸ್ತ್ರಿಕೋಣಭವನಾತೇಮೀಮಯಾಕೀರ್ತಿತಾಃ ॥

ಟೀ॥ ಬೃಹಸ್ಪತಿಗೆ ಬುಧ ಶುಕ್ರರು ಶತ್ರುಗಳು, ಶನಿಸಮನು, ರವಿಚಂದ್ರ ಕುಜರು ಮಿತ್ರರು ಶುಕ್ರನಿಗೆ ಬುಧಶನಿಗಳು ಮಿತ್ರರು, ಕುಜ ಗುರುಗಳು ಸಮರು, ರವಿಚಂದ್ರರು ಶತ್ರುಗಳು ಶನಿಗೆ

ಶುಕ್ರಬುಧರು ಮಿತ್ರರು, ಬೃಹಸ್ಪತಿಯು ಸಮನು. ರವಿಚಂದ್ರ ಕುಜರು ಶತ್ರುಗಳೆಂಬದಾಗಿ ಗ್ರಹಗಳಮೂಲತ್ರಿಕೋಣ ರಾಶಿಗಳನ್ನು ಹಿಡಿದುಪೂರ್ವೀಕರು ಹೇಳಿದ ಶತ್ರುಮಿತ್ರಗ್ರಹಗಳು ಇಲ್ಲಿ ನನ್ನಿಂದ ಹೇಳಲ್ಪಟ್ಟಿತು.

ಅನಂತರ ನವಗ್ರಹಗಳ ಕ್ರೂರ, ಸೌಮ್ಯ, ಪುರುಷ, ಸ್ತ್ರೀನಪುಂಸಕಸಂಜ್ಞೆಗಳನ್ನು, ಜಾತಿ ನಿರ್ಣಯವನ್ನೂ ತಿಳಿಸುತ್ತಾನೆ.

ಮೂ॥ ಕ್ರೂರಾಭಾನುತಮಶ್ಶನಿಧ್ವಜ ಕುಜಾಶ್ಶುಕ್ರಾರ್ಯಸೌಮ್ಯೇಂದವಸ್ಸೌಮ್ಯಾಸ್ತೈಪುರುಷಾಃಕುಜಾರ್ಕಗುರವಃರಾಹ್ವಿಂದುಶುಕ್ರಾಃ ಸ್ತ್ರಿಯಃ॥ ತಚ್ಛೇಷಾಸ್ತುನಪುಂಸಕಾಗುರುಭೃಗೂವಿಪ್ರೌಕುಜಾರ್ಕೌ ನೃಪೌವೈಶ್ಯೌಚಂದ್ರಬುಧೌತದನ್ಯಕುಲಜೋಮಂದಸ್ತುವರ್ಣೇಶ್ವರಃ ॥ ಬುಧಃಪಾಪಯುತಃಪಾಪಃಕ್ಷೀಣಚಂದ್ರಸ್ತಥೈವಚ ॥

ಟೀ॥ ಸೂರ್ಯನು, ರಾಹು, ಶನಿ, ಕೇತು, ಕುಜನು ಈ ೫ ಗ್ರಹಗಳು ಕ್ರೂರಗಳು, ಅಂದರೆ ಪಾಪಗ್ರಹಗಳು, ಶುಕ್ರನು ಗುರು, ಬುಧನು, ಚಂದ್ರನು ಈ ೪ ಗ್ರಹಗಳು ಸೌಮ್ಯರು, ಅಂದರೆಶುಭಗ್ರಹಗಳು ಇಲ್ಲಿ ವಿಶೇಷವೆಂನೆಂದರೆ, ಶುಭಗ್ರಹಗಳಾಗಿಹೇಳಲ್ಪಟ್ಟಬುಧ ಚಂದ್ರರೊಳು ಪಾಪಗ್ರಹಗಳೊಂದಿಗೆ ಸೇರಿದ ಬುಧನು, ಕ್ಷೀಣನಾದ ಚಂದ್ರನು, ಇವರಿಬ್ಬರು ಪಾಪಗ್ರಹಗಳಾಗುತ್ತಾರೆಂದುತಿಳಿಯುವದು. ಕುಜನು, ಸೂರ್ಯನು, ಬೃಹಸ್ಪತಿಯು, ಈ ೩ ಪುರುಷಗ್ರಹಗಳು. ರಾಹುವು ಚಂದ್ರನು, ಶುಕ್ರನು ಈ ೩ ಸ್ತ್ರೀಗ್ರಹಗಳು ಬುಧನು। ಶನಿಯು, ಕೇತು, ಈ ೩ ನಪುಂಸಕಗ್ರಹಗಳು ಗುರು, ಶುಕ್ರನು ಈ ೨ ಬ್ರಾಹ್ಮಣಜಾತಿ ಗ್ರಹಗಳು, ಅಂಗಾರಕನುಸೂರ್ಯನು. ಈ ೨ ಕ್ಷತ್ರಿಯಜಾತಿ ಗ್ರಹಗಳು, ಬುಧನು, ಈ ೨ ವೈಶ್ಯಜಾತಿ ಗ್ರಹಗಳು, ಶನಿಯು ಶೂದ್ರಜಾತಿ ಗಹವು ಈ ಮೇರೆ ಗ್ರಹಗಳ ವರ್ಣಗಳನ್ನು ತಿಳಿಯತಕ್ಕದ್ದು.

## ನವಗ್ರಹಗಳ ಧಾತ್ವಾದಿ ವರ್ಣಗಳು.

ಶ್ಲೋ॥ ಬೃಹಜ್ಜಾತಕೇ॥ ರಕ್ತಶ್ಯಾಮೋಭಾಸ್ಕರೋಗೌರಇಂದುರ್ನಾತ್ಯುಚ್ಚಾಂಗೋರಕ್ತಗೌರಶ್ಚಶುಕ್ರಃ। ದೂರ್ವಾಶ್ಯಾಮೋ

ಜ್ಞೋಗುರುಗೌರಗಾತ್ರಃಶ್ವೇತಶ್ಶುಕ್ರೋಭಾಸ್ಕರಃಕೃಷ್ಣದೇಹಃ॥

ಟೀ॥ ಸೂರ್ಯನು ಕೆಂಪು ಕಪ್ಪು ಮಿಶ್ರವಾದ ಬಣ್ಣವುಳ್ಳವನು, ಚಂದ್ರನುಬಿಳೀ ಬಣ್ಣವುಳ್ಳವನು, ಅಂಗಾರಕನು ಬಹಳ ಉದ್ದವಲ್ಲದೆ ಬಿಳಪು ಕೆಂಪುಮಿಶ್ರವಾದ ಬಣ್ಣವುಳ್ಳವನು, ಬುಧನುಗರಿಗೆಯಂತೆ ಹಸರು ಬಣ್ಣವುಳ್ಳವನು, ಬೃಹಸ್ಪತಿ ಹಳದೀಬಣ್ಣವುಳ್ಳವನು, ಶುಕ್ರನು ಬಿಳೀ ಬಣ್ಣವುಳ್ಳವನು, ಶನಿಯು ಕಪ್ಪು ಬಣ್ಣವುಳ್ಳವನು.

ಮೂ॥ರಾಹುಸ್ತುಧೂಮ್ರವರ್ಣಶ್ಚ॥ಚಿತ್ರವರ್ಣೋಧ್ವಜಸ್ಮೃತಃ

ಟೀ॥ ರಾಹುವು ಧೂಮ್ರವರ್ಣವುಳ್ಳವನು, ಕೇತುವು ಚಿತ್ರವರ್ಣವುಳ್ಳವನೆಂದುತಿಳಿಯುವದು.

ಮೂ॥ ತ್ರಿದಶತ್ರಿಕೋಣಚತುರಶ್ರಸಪ್ತಗಾನ್ಯವ ಲೋಕಯಂ
ಚರಣಾಭಿವೃದ್ಧಿತಃ ॥ ರವಿಜಾಮರೇಡ್ಯರುಧಿರಾಃ ಪರೇಚಯೇಃಕ್ರ
ಮಶೋಭವಂತಿಸಕಲೇಕ್ಷಣಾಧಿಕಾಃ ॥

ಟೀ॥ ಶನಿಯು ತಾನಿರುವ ರಾಶಿ ೩-೧೦ನೇ ರಾಶಿಗಳಲ್ಲಿ ಗ್ರಹಗಳನ್ನು ಪಾದದೃಷ್ಟಿಯಿಂದ ನೋಡುವನು, ಗುರುವು ತಾನಿರುವರಾಶಿಗೆ ೫-೯ ರಾಶಿಗಳನ್ನು ಗ್ರಹಗಳನ್ನು ಅರ್ಧದೃಷ್ಟಿಯಿಂದ ನೋಡುವನು, ಅಂಗಾರಕನು ತಾನು ಯಿರುವ ರಾಶಿಗೆ ೪-೮ನೇ ರಾಶಿಗಳನ್ನು ತ್ರಿಪಾದದೃಷ್ಟಿಯಿಂದ ನೋಡುವನು, ಇವು ವಿಶೇಷದೃಷ್ಟಿಗಳು, ಆದರೆ ಸರ್ವಗ್ರಹಗಳುತಾವು ಯಿರುವರಾಶಿಗಳಿಗೆ ೭ನೇ ರಾಶಿಗಳನ್ನೇ ನೋಡುವರು.

ಕುರುಡು-ಕಿವುಡು-ಮೊಂಡಿ-ರಾಶಿಗಳು.

ಮೂ॥ ಮೇಷಾದಿಚಾಂಧಕಂಷಟ್ಕಂಚತ್ವಾರೋಬಧಿರಾಸ್ತಥಾ ।
ದ್ವೌಚಪಂಗೂಸವಿಜ್ಞೇಯಾತದ್ಭೇದಾಃಪರಿಕೀರ್ತಿತಾಃ ॥

ಟೀ॥ ಮೇಷಮೊದಲು ೬ರಾಶಿಗಳು ಕುರುಡು ರಾಶಿಗಳು, ಅದರ ತರುವಾಯ ೪ ರಾಶಿಗಳುಕಿವುಡು ರಾಶಿಗಳು, ಅದರ ತರುವಾಯ ೨ ಕುಂಟ ರಾಶಿಗಳೆಂದು ತಿಳಿಯತಕ್ಕದ್ದು. ಅಂದರೆ ಮೇಷ ಮೊದಲು ಕನ್ಯಾರಾಶಿವರಿಗೆ ಕುರುಡು ರಾಶಿಗಳು, ತುಲಾಹಿಡಿದು ಮಕರ ವರಿಗು ರಾಶಿಗಳು ಕಿವುಡು ರಾಸಿಗಳು, ಕುಂಭ ಮೀನ ಇವೆರ

ಟು ಕುಂಟ ರಾಶಿಗಳೆಂದು ತಿಳಿಯತಕ್ಕದ್ದು.

ಮೂ॥ ಅಜೋವೃಷೋ ಮೃಗೇಂದ್ರಶ್ಚ ಅರ್ಧರಾತ್ರೇ। ಮಹಾಂಧ
ಕಾಃ॥ ಯುಗ್ಮಾಂಗನಾಕುಳೀರಾಶ್ಚ ಮಧ್ಯಾಹ್ನೇಚಾಂಧಕಾಸ್ಮೃ
ತಾಃ॥ ಇತ್ಯೇವಂಕಾಲಭೇದೇನ ಶುಭದಾಶ್ಚ ಪ್ರಕೀರ್ತಿತಾಃ ॥

ಟೀ॥ ಮೇಷ, ವೃಷಭ, ಸಿಂಹ, ಈ ೩ ರಾಸಿಗಳು ಅರ್ಧ ರಾತ್ರಿ ಯಲ್ಲಿ ಕುರುಡು ರಾಶಿಗಳು. ಮಿಥುನ, ಕನ್ಯಾ, ಕರ್ಕಾಟಕ ಈ ೩ ರಾಶಿಗಳು ಮಧ್ಯಾಹ್ನ ಕಾಲದಲ್ಲಿಯೂ ಕುರುಡು ರಾಶಿಗಳು ಇವೆ ಲ್ಲವು ಕಾಲಭೇದದಿಂದ ಸುಖಕರಗಳೆಂದು ತಿಳಿಯತಕ್ಕದ್ದು.

ಮೂ॥ ತುಲಾಚವೃಶ್ಚಿಕಶ್ಚೈವ ಬಧಿರೌಚಾಪರಾಹ್ಣಕೈಃ। ರಾ
ತ್ರೌಚಬಧಿರೌಪ್ರೋಕ್ತೌಮಕರಶ್ಚ ಧನುರ್ಗ್ರಹಂ ॥ ಉಭಯೋ
ಸ್ಸಂಧ್ಯಯೋಃಪಂಗೂಕುಂಭಮೀನೌಪ್ರಕೀರ್ತಿತಾಃ ॥

ಟೀ॥ ತುಲಾವೃಶ್ಚಿಕಗಳು ಮಧ್ಯಾಹ್ನ ದಲ್ಲಿ ಕುರುಡು ರಾಶಿಗಳು ಮಕರಧನುಸ್ಸುಗಳು ರಾತ್ರಿಯಲ್ಲಿ ಕಿವುಡು, ಕುಂಭ ಮೀನರಾಶಿ ಗಳು ಬೆಳಿಗ್ಯೆ ಮತ್ತು ಸಾಯಂಕಾಲದಲ್ಲಿ ಕೂಡಾ ಕುಂಟ ರಾಶಿಗ ಗಳೆಂದು ತಿಳಿಯುವದು.

## ಷಡ್ವರ್ಗಲಕ್ಷಣಗಳು.

ಮೂ ॥ ತ್ರಿಂಶದ್ಭಾಗಾತ್ಮಕಂಲಗ್ನಂಹೋರಾತಸ್ಯಾರ್ಧಮುಚ್ಯ
ತೇ ॥ ರಾಶಿತ್ರಿಭಾಗೋದ್ರೇಕ್ಕಾಣಃ ನವಾಂಶೋನವಭಾಗಕಃ ॥
ದ್ವಾದಶಾಂಶೋದ್ವಾದಶಾಂಶ ಸ್ತ್ರಿಂಶಾಂಶಸ್ತ್ರಿಂಶದಂಶಕಃ॥ ಷ
ಡ್ವರ್ಗಲಕ್ಷಣಂಪ್ರೋಕ್ತಂಸರ್ವಲಗ್ನೇಷ್ವಯಂಕ್ರಮಃ ॥

ಟೀ॥ ಲಗ್ನವನ್ನು ೨ಭಾಗ ಮಾಡಿದರೆ ಹೋರೆಯೆನ್ನಿಸಿಕೊಳ್ಳು ತ್ತದೆ ೩ ಭಾಗ ಮಾಡಿದರೆ ದ್ರೇಕ್ಕಾಣವೆನ್ನಿಸಿಕೊಳ್ಳುತ್ತವೆ ೯ ಭಾ ಗಮಾಡಿದರೆನವಾಂಶವೆನ್ನಿಸಿಳ್ಳುತ್ತವೆ, ೧೨ ಭಾಗಮಾಡಿದರೆದ್ವಾ ದಶಾಂಶ ವೆನ್ನಿಸಿಕೊಳ್ಳುತ್ತವೆ ೩೦ ಭಾಗ ಮಾಡಿದರೆ ತ್ರಿಂಶಾಂ ಶವೆನ್ನಿಸಿಕೊಳ್ಳುತ್ತವೆ ಏವಂಚಲಗ್ನ, ಹೊರಾ,ದ್ರೇಕ್ಕಾಣ॥ನವಾಂ ಶ, ದ್ವಾದಶಾಂಶ, ತ್ರಿಂಶಾಂಶ, ಇವುಗಳು ಷಡ್ವರ್ಗಗಳಾಗುತ್ತವೆ.

## ಹೋರಾದ್ರೇಕ್ಕಾಣಗಳು.

ಮೂ॥ ಹೊರಾರ್ಕಚಂದ್ರಯೋರೋಜೆ ಯುಗ್ಮೆಭೆಚಂದ್ರಸೂರ್ಯ

ಯೊಃ॥ ಲಗ್ನ ಪಂಚನವಕ್ಷೇತ್ರನಾಥಾದ್ರೇಕ್ಕಾಣಪಾಃಕ್ರಮಾತ್॥

ಟೀ॥ ಓಜ ರಾಶಿಗೆ ಮೊದಲು ಅರ್ಧ ಸೂರ್ಯಹೊರೆ, ೨ನೇ ಅರ್ಧ ಚಂದ್ರರೆ, ಯುಗ್ಮರಾಶಿಗೆ ಮೊದಲು ಅರ್ಧ ಚಂದ್ರಹೋರೆ, ೨ನೇ ಅರ್ಧ ಸೂರ್ಯಹೋರ, ಈ ಮೇರೆಗ೨ ರಾಶಿಗಳಿಗೆತಿಳಿಯತಕ್ಕದ್ದು.

ಮೂ॥ ಚರೆಸ್ವಪುತ್ರನವಪಾಃಸ್ಥಿರೆಧರ್ಮಸ್ವಪುತ್ರಪಾಃ। ಪುತ್ರ
ಧರ್ಮಸ್ವಪಾದ್ವಿಸ್ವ। ದ್ರೇಕ್ಕಾಣಸ್ಯಪ್ರಕೀರ್ತಿತಾಃ ॥

ಟೀ॥ ನೆದ್ರೇಕ್ಕಾಡಲ್ಲಿಚರರಾಶಿಗೆ ಮೊದಲು ಭಾಗ ಲಗ್ನದ್ರೇಕ್ಕಣ. ೨ನೇಭಾಗ ಪಂಚಮರಾಶಿ ದ್ರೇಕ್ಕಾಣ, ೩ನೇ ಭಾಗ ನವಮರಾಸಿ ದ್ರೇಕ್ಕಾಣ, ಸ್ಥಿರಲಗ್ನಕ್ಕೆ ಮೊದಲು ಭಾಗ ನವಮರಾಶಿ ದ್ರೇಕ್ಕಾಣಿ, ೨ನೇಭಾಗ ಲಗ್ನದ್ರೇಕ್ಕಾಣ, ೩ನೇಭಾಗ ಪಂಚಮರಾಶಿ ದ್ರೇಕ್ಕಾಣ, ದ್ವಿಸ್ವಭಾವರಾಸಿಗೆ ಮೊದಲು ಭಾಗ, ಪಂಚಮರಾಶಿ ದ್ರೇಕ್ಕಾಣ, ೨ನೇ ಭಾಗ ನವಮರಾಸಿ ದ್ರೇಕಾಣ ಮೂರನೇ ಭಾಗ ಲಗ್ನ ದ್ರೇಕ್ಕಾಣವೆಂದು ತಿಳಿಯತಕ್ಕದ್ದು.

## ನವಾಂಶಕ್ರಮ.

ಮೂ॥ ಮೇಷಸಿಂಹಧನುಷಿತ್ವಜಾದಯ ಸ್ತೌಳಿಕುಂಭಮಿಥು
ನೆತುಲಾದಯಃ। ಕನ್ಯಕಾಮೃಗವೃಷೆಮೃಗಾದಯಃಮೀನ
ಕಕ್ಯಾಳಿಷುಕರ್ಕಟಾದಯಃ ॥

ಟೀ॥ ಮೇಷ. ಸಿಂಹ, ಧನುಸ್ಸು, ಈ ಮೂರು ರಾಸಿಗಳಲ್ಲಿ ಮೇಷರಾಸಿ ಮೊದಲಾಗಿ ನವಾಂಶಭಾಗಗಳನ್ನು ಯೆಣಿಸಬೇಕು. ವೃಷಭ, ಕನ್ಯಾ, ಮಕರ ರಾಸಿಗಳಲ್ಲಿ ಮಕರ ಮೊದಲಾಗಿ ಯೆಣಿಸತಕ್ಕದ್ದು, ಮಿಥುನ, ತುಲಾ, ಕುಂಭ, ಈ ರಾಸಿಗಳಲ್ಲಿ ತುಲಾ ಮೊದಲಾಗಿ ಯೆಣಿಸತಕ್ಕದ್ದು. ಕಟಕ, ವೃಶ್ಚಿಕಮೀನ ರಾಸಿಗಳಲ್ಲಿ ಕಟಕ ರಾಸಿ ಮೊದಲಾಗಿ ಯಣಿಸತಕ್ಕದ್ದು.

## ದ್ವಾದಶಾಂಶ ಕ್ರಮವು.

ಮೂ॥ ಲಗ್ನಾದಿಷುದ್ವಾದಶಾಂಶಭವನಾದ್ವಾ ಶಾಂಶಪಾಃ ॥

ಟೀ॥ ಲಗ್ನ ಮೊದಲು ೧೨ ರಾಸಿಗೂ೧೨ ಭಾಗಕೊಡತಕ್ಕದ್ದು ಅಂದರೆಲಗ್ನವನ್ನು ೧೨ ಭಾಗಮಾಡಿ ಲಗ್ನ ಮೊದಲು ೧-೧ ಭಾಗಕ್ಕೆ ೧-೧ ರಾಸಿಗಳಾಗಿನೋಡಿಕೊಳ್ಳತಕ್ಕದ್ದು.

## ತ್ರೀಶಾಂಶ ಕ್ರಮವು.

ಮೂ॥ ಕುಜರವಿಜಗುರುಜ್ಞಶುಕ್ರಭಾಗಾಃ ಪವನವಿಮಾರಣಕೌರ್ಪಿಜಾಕಲೆಯಾಃ। ಅಯುಜಿತುತೆವಿಪರ್ಯಯಸ್ಥಾಶ್ಯಶಿಭವನಾಳಿಝುಷಾಂತ್ಯಋಕ್ಷಸಂಧಿಃ॥

ಟೀ॥ ಲಗ್ನ ಓಜಾರಾಸಿಯಾಧರೆ ಅದರ ೩೦ ಭಾಗಗಳಲ್ಲಿ ಮೊದಲು ೫ ಭಾಗಕುಜನಿಗೂ, ತರುವಾಯು ೫ ಭಾಗ ಶನಿಗೂ, ತರುವಾಯು ೮ ಭಾಗ ಗುರುವಿಗೂ, ತರುವಾಯು ೭ ಭಾಗ ಬುಧನಿಗೂ, ತರುವಾಯು ೫ ಭಾಗ ಶುಕ್ರನಿಗೂಕೊಡಬೇಕುಯುಗ್ಮರಾಸಿಯಾದರುಮೊದಲು ೫ ಭಾಗ ಶುಕ್ರನಿಗೂ, ತರುವಾಯು ೫ ಭಾಗ ಶನಿಗೂ, ತರುವಾಯು ೫ ಭಾಗ ಅಂಗಾರಕನಿಗೂ ಕೊಡತಕ್ಕದ್ದು ಇದೇತ್ರಿಂಶಾಂಶವು.

## ಪಕ್ಷಚ್ಛಿದ್ರಗಳು.

ಮೂ॥ ಅಷ್ಟಮೀದ್ವಾದಶೀಷಷ್ಠೀಚತುರ್ಥೀಚಚತುರ್ದಶೀ। ಪಕ್ಷಚ್ಛಿದ್ರಾಶ್ಚತಿಥಯಃಶುಭಕಾರ್ಯೇಷುನಿಂದಿತಾಃ ॥

ಟೀ॥ ಅಷ್ಟಮೀ, ದ್ವಾದಶೀ, ಷಷ್ಟಿ, ಚತುರ್ಥಿ, ಚತುರ್ದಶೀ, ಈ ತಿಥಿಗಳು ಪಕ್ಷಛಿದ್ರಗಳಾದ್ದರಿಂದ ಶುಭಕಾರ್ಯಗಳಲ್ಲಿ ಇವುಗಳನ್ನು ಬಿಡತಕ್ಕದ್ದು.

## ಪಂಚ ಪರ್ವಗಳು.

ಮೂ॥ ಕೃಷ್ಣಾಷ್ಟಮೀಚತುರ್ದಶ್ಯಪ್ಯಮಾವಾಸ್ಯಾಚಪೂರ್ಣಿಮಾ। ಸಂಕ್ರಾಂತಿಃ ಪರ್ವತಿಥಯೊಮುನಿಭಿಃಪರಿಕೀರ್ತಿತಾಃ॥

ಟೀ॥ ಕೃಷ್ಣಾಷ್ಟಮೀ, ಚತುರ್ದಶೀ, ಅಮಾವಾಸ್ಯಾ, ಪೂರ್ಣಿಮಾ, ಸಾಕ್ರಾಂತಿಯು ಇವುಗಳು ಪರ್ವತಿಧಿಗಳೆಂದು ಮುನಿಗಳು ಹೇಳಿದರು.

## ಘಟಿಕಾ ಪ್ರಮಾಣವು.

ಮೂ॥ ಯಾಪತ್ಯಕ್ಷರಣ ಪ್ರಭಾಃಪ್ರತಿದಿನಂಮೆಷಾದಿಷಟ್ಸುಕ್ರಮಾ। ದೊಜ್ಯಾಶ್ಚೈವ ತುಲಾದಿಷಟ್ಸುಜಲಧೆತ್ರಿದ್ವ್ಯಕ್ಷೆರಾಮಾಬ್ಧಯಃ। ಅರ್ಥೀಕೃತ್ಯದಿನಪ್ರಮಾಣಘಟಿಕಾಸ್ಸಪ್ತಾಹತಾಃನಾಡಿಕಾಃ। ಸ್ತಾವತ್ಕಃಶರಪರ್ವಯೊಸ್ಥಿ ತಗತಾಯು

ತ್ಪೂರ್ವಸಂಖ್ಯಾಭಿದಾಃ ॥

ಟೀ॥ ಪ್ರತಿದಿನವು ಹಗಲಿನಲ್ಲಿ ಸೂರ್ಯನಿಗೆ ಎದುರಾಗಿ ನಿಂತುಕೊಂಡು ತಾನುನಿಂತ ಅಡಿಯೊಂದಿಗೆ ತನ್ನ ನೆರಳು ಯೆಷ್ಟಡಿ, ಯೆಾಗುತದೋ ಅದರಸಂಖ್ಯೆಯೊಂದಿಗೆ ಮೇಷಕ್ಕೆ೪, ವೃಷಭಕ್ಕೆ ೩, ಮಿಥುನಕ್ಕೆ ೨ಕಟಕಕ್ಕೆ ೨,ಸಿಂಹಕ್ಕೆ ೩,ಕನ್ಯೆಗೆ ೪,ತುಲೆಗೆ ೪ ವೃಶ್ಚಿಕಕ್ಕೆ ೩, ದನುಸ್ಸಿಗೆ ೨,ಮಕರಕ್ಕೆ ೨,ಕುಂಭಕ್ಕೆ ೩,ಮೀನಕ್ಕೆ ೪,ಈ ಮೇರೆ ಹೇಳಲ್ಪಟ್ಟಿರುವ ಧೃವಸಂಖ್ಯೆಗಳಲ್ಲಿಆಯಾ ತಿಂಗಳಿಗೆಆಗುವ ಧೃವವನ್ನು, ಸದರಿ ಪಾದಛಾಯೆಯೊಂದಿಗೆ ಶೇರಿಸಿ ಪ್ರತ್ಯೇಕ ವಂದುರಾಸಿಯಾಗಿ ಇಡಬೇಕು, ಮತ್ತುಆಯಾತಿಂಗಳಿಗೆ ಆಯುಃಪ್ರಮಾಣ ಘಟಿಕೆಗಳು ಎಷ್ಟು ಆಗುತ್ತವೋ ಅದರಲ್ಲಿ ಅರ್ಧವನ್ನು ೭ರಿಂದಗುಣಿಸಿ, ಅದರ ಸಂಖ್ಯೆಯನ್ನು ಪ್ರತ್ಯೇಕ ಇಟ್ಟಿಯಿರುವ ಧೃವರಾಸಿಯಿಂದ ಭಾಗಿಸುವಾಗ ಯೆಷ್ಟು ಮಿಗುಲುತ್ತದೋ ಅಷ್ಟು ಗಳಿಗೆಗಳು ದಿನದ ಪೂರ್ವಾರ್ಧ ಅಪರಾರ್ಧಗಳಲ್ಲಿ ಕಳೆದವಂಬದಾಗಿಯೂ ಉಳಿದವೆಂಬದಾಗಿಯೂ ತಿಳಿಯತಕ್ಕದ್ದು.

ಪಾದಛಾಯೆ ಅಡಿಗಳನ್ನು ನೋಡತಕ್ಕದ ಬಗ್ಯೆವರರುಚಿಸೂತ್ರ
ಇಲ್ಲಿಬರಿಯಲ್ಪಡುತ್ತದೆಹ್ಯಾಗಂದರೆ,

ಮೇಷೆ ಗಿರಿಪು, ವೃಷಭೇಟನಟ, ಮಿಥುನೆ ಕರಲಿ, ಕಟಕೆ ಕರುಬ ಸಿಂಹೆಕನಯ, ಕನ್ಯಾ ಕುರುಬ, ತುಲಾ ಲನಸ, ವೃಶ್ಚಕೆ ದೂತಾ ಧನುಷಿ ಸಿಲ, ಮಕರಂ ದಧಾಸಿ, ಕುಂಭೆ ಸಿತಶ, ಮೀನೆ ಶುಭಗ, ಈ ೧೨ವಾಕ್ಯಗಳಿಗೆತಾತ್ಪರ್ಯ ಮೇಷ ಮಾಸಕ್ಕೆ೧೦ ತೇದಿವರಿಗೆ ಒಂದು ಅಕ್ಷರಪ್ರಕಾರ ಕೆಳಗೆಸೂತ್ರದಲ್ಲಿ ಹೇಳಿದ ಮೂರಕ್ಷರಕ್ಕೆ ೧೦ ತೇದಿವರಿಗು-ಗಿ-ಎಂಬಅಕ್ಷರವು ೨ನೇ೧೦ ತೇದಿವರಿಗು-ರಿ-ಯೆಂಬ ಅಕ್ಷರವು, ೩ನೇ೧೦ತೇದಿವರಿಗು-ಪು-ಯೆಂಬ ಅಕ್ಷರ ವು,-ಗಿ-೩-ರಿ-೨, ಪು-೧, ಈ ಅಕ್ಷರ ಸಂಖ್ಯೆಯನ್ನು ನೋಡಿಕೊಳ್ಳತಕ್ಕದ್ದು. ಇಲ್ಲಿ ಹೇಳಲ್ಪಟ್ಟಿರುವ ಅಕ್ಷರಗಳ ಸಂಖ್ಯೆಗಳಿಗೆ ಅರ್ಥವು ಕ ೧,ಅಂದರೆ ಒಂದೇ ೭ ರ೨, ಅಂದರೆ- ಗ೩, ಅಂದರೆ ೭ ಈ ಮೇರೆಯಲ್ಲಾ ಸಂಖ್ಯೆಗಳನ್ನು ನೋಡಿಕೊಳ್ಳತಕ್ಕದ್ದು ಆದರೆ ಯಾವ ತಿಂಗಳ

ಲ್ಲಿ ಪಾದಚ್ಛಾಯೆ ನೋಡಬೇಕಾಗಿರುತ್ತದೆಯೋ ಆ ತಿಂಗಳನ್ನು ನೋಡಿಕೊಂಡು ಯಾವ ೧೦ ತೇದಿಗಳಿಗೆಯೂವ ಅಕ್ಷರಹೇಳಲ್ಪಟ್ಟಿವೆಯೋ ಆ ಅಕ್ಷರಕ್ಕೆ ಯೆಷ್ಟುಬೆಳೆಯಾಗುತ್ತವೊ ಅದರನ್ನು ಮೊತ್ತದಲ್ಲಿ ಅರ್ಧ ಅಡಿಯನ್ನು ಸಹಪಾದಚ್ಛಾಯೆ ಅಡಿಗಳಲ್ಲಿತೆಗದುಬಿಟ್ಟು ಉಳಿದ ಅಡಿಗಳನ್ನು ನೋಡಿಕ್ಕೊಳ್ಳತಕ್ಕದ್ದು.

ಪಾದಚ್ಛಾಯ ಅಡಿಗಳಿಗೆ ಘಳಿಗೆ ನೋಡುವಕ್ರಮವು.

ಶ್ಲೋ॥ ನವತ್ಯಷ್ಟಪದಾದೇಕಾನಾಡಿಕಾತತ್ರವುಚ್ಯತೆ। ಪಂಚಾರ್ಧಚ ತ್ವಾರಿಂಶದ್ವೆಅಷ್ಟಾವಿಂಶತ್ರಯಸ್ತಥಾ ॥ ಏಕೋನವಿಂಶಶ್ಚತ್ವಾರಿಚತುರ್ದಶ್ಯಾಂತುಪಂಚಕಂ। ದಶಾರ್ಧೇನಾಡಿಕಾಷಟ್ಕ ಅಷ್ಟಕೆಸಪ್ತನಾಡಿಕಾಃ । ಷಟ್ಪದೆಚಾಷ್ಟಕಂವಿಂದ್ಯಾಚ್ಛತುರರ್ಧೇನವಸಕ್ತಂ॥ ತ್ರಿಕಾರ್ಧೇದಶಕಂವಿಂದ್ಯಾದ್ದ್ಯಾವ್ಯರ್ಧಏಕಾದಶಸ್ತಥಾ। ಏಕತ್ರಿಪಾದೊದ್ವಾದಶಕಂ ಪಾದಮೆಕಂತ್ರಯೊದಶ। ಚತುರ್ದಶಾರ್ಧಪಾದೆವಶೂನ್ಯೆಪಂಚದಶಸ್ಮೃತಾಃ ॥

ಟೀ॥ ೯೮ ಅಡಿಗೆ ೧ ಘಳಿಗೆ, ೪೫॥ ಅಡಿಗೆ ೨ ಘಳಿಗೆ, ೨೮ ಅಡಿಗೆ ೩ಘಳಿಗೆ ೧೯ ಘಳಿಗೆ ೪ ಘಳಿಗೆ ೧೪ ಅಡಿಗೆ ೫ ಘಳಿಗೆ ೮ಅಡಿಗೆ ೭ ಘಳಿಗೆ ೬ ಅಡಿಗೆ ೮ ಘಳಿಗೆ ೪॥ ಅಡಿಗೆ೯ ಘಳಿಗೆ ೩॥ ಅಡಿಗೆ ೧೦ ಘಳಿಗೆ ೨॥ ಅಡಿಗೆ ೧೧ ಘಳಿಗೆ ೧॥ ಅಡಿಗೆ ೧೨ ಘಳಿಗೆ ೧೨ಘಳಿಗೆ ೧ಅಡಿಗೆ ೧೩ ಘಳಿಗೆ॥ ಅಡಿಗೆ ೧೪ ಘಳಿಗೆ, ಶೂನ್ಯವಾದರೆ ೧೫ ಘಳಿಗೆ. ಆದರೆ ವರರುಚಿಮತಕ್ಕೊ ಈಗ್ರಂಥಕರ್ತನು। ಮತಕ್ಕೂ ವಿಶೇಷ ವ್ಯತ್ಯಾಸವಿಲ್ಲ ವಾದ್ದರಿಂದಲೂ ಸುಲಭವಾಗಿರುವದ್ದರಿಂದ ಇಲ್ಲಿ ಬರೆಯಲ್ಪಟ್ಟಿತು.

ರಾತ್ರಿಕಾಲದಲ್ಲಿ ಘಟಿಕಾಪ್ರಮಾಣವನ್ನು ತಿಳಿದು ಕೊಳ್ಳುವದಕ್ಕೋಸ್ಕರನಕ್ಷತ್ರ ಸ್ವರೂಪಗಳನ್ನು ಹೇಳುತ್ತಾನೆ.

ವರರುಚಿವಾಕ್ಯಗಳು.

ತುರಗಮುಖಾಶ್ವಿನೀತ್ರೀಣಿ। ಭರಣಿಯೋನಿತ್ರೀಣಿ। ಕೃತ್ತಿಕಾಕ್ಷುರಾಷಟ್ಕಂ ಶಕಟಂಪಂಚರೋಹಿಣೀ।ಮೃಗಶಿರಾಶೀರ್ಷತ್ರಯಂ ಆರ್ದ್ರಾಪ್ರವಾಳಮೆಕಂ॥ ಪುನರ್ವಸುಕುಲಾಲಚಕ್ರಂಪಂಚ। ಸರಟಾಪುಷ್ಯಮಿತ್ರೀಣಿ। ಆಶ್ಲೇಷಾಸರ್ಪರುತು। ಮಖಾಂದೋ

ಳಿಕಾಪಂಚ। ಪುಬ್ಬ ಉತ್ತರನೆತ್ರದ್ವಯೋಃ। ಹಸ್ತಪಾಣಿನಾಪಂಚ ಚಿತ್ರಾಮೌಕ್ತಿಕಮೇಕಂ । ಸ್ವಾತಿಮಾಣಿಕ್ಯಮೆಕಂ ॥ ವಿಶಾಖಾಕುಲಾಲಚಕ್ರಪಂಚ।ಅನೂರಾಧಾಜೇಷ್ಠಾಂಗುಳಛತ್ರಾಕಾರತ್ರಯಂ ಮೂಲಾಕುಪ್ಪೆಕ್ಕೇಸರೀಪಂಚ। ಪೂರ್ವಾಷಾಢಉತ್ತರಾಷಾಢದ್ವೆದ್ವೆಚೌಕಂ । ಶ್ರವಣಾಮಚ್ಛಾಕಾರತ್ರಯಂ ॥ ಧನಿಷ್ಠಾಶೀರ್ಷತ್ರಯಂ ॥ ಶತಭಿಷಚ್ಛತತಾರಯೋಃ । ಪೂರ್ವಾಭಾದ್ರ ॥ ಉತ್ತರಾಭಾದ್ರದ್ವೆದ್ವೆಖಟ್ವಂ। ರೇವತೀಮತ್ಸ್ಯಾಕಾರತ್ರಯಂ। ಈ ೨೭ ನ್ನು ನಕ್ಷತ್ರಸ್ವರೂಪಗಳು ಹಾಗಂದರೆ,—

ಟೀ॥ ಅಶ್ವಿನಿ ಕುದುರೆ ಮುಖದಂತೆ ೩ ನಕ್ಷತ್ರಗಳು ಸೇರಿ ಇರುವದು, ಭರಣೀ ತ್ರಿಕೋಣಾಕಾರವಾಗಿ ೩ ನಕ್ಷತ್ರಗಳು, ಕೃತ್ತಿಕೆ ಹಜಾಮನ ಕತ್ತಿಯಂತೆ ೬ಸಂಣ ನಕ್ಷತ್ರಗಳು, ರೋಹಿಣೀಚಕ್ರಾಕಾರವಾಗಿ ೫ ನಕ್ಷತ್ರಗಳು, ಮೃಗಶಿರ ಮೃಗದ ತಲೆಯಂತೆ ೩ನಕ್ಷತ್ರಗಳು, ಅದ್ರಾ ದೊಡ್ಡಹವಳದಂತೆ ೧ ನಕ್ಷತ್ರ ಪುನರ್ವಸು ಕುಂಬಾರ ಚಕ್ರದಂತೆ ೪ ನಕ್ಷತ್ರಗಳು ಪುಷ್ಯ ತೊಣ್ಣೆಕೇತದಂತೆ ೩ ನಕ್ಷತ್ರಗಳು ಇದನ್ನೇ ಕೆರೇಕಟ್ಟೆಯಂತೆ ಕೆಲವರು ಹೇಳುವರು ಆಶ್ರೇಷಾ ಸರ್ಪದಂತೆ ೬ ನಕ್ಷತ್ರಗಳು, ಮಖಾಪಾಲಕಿ ದಂಡಿಯಂತೆ ೫ ನಕ್ಷತ್ರಗಳು, ಪೂಫ—ಕಣ್ಣಳಂತೆ ೨ ನಕ್ಷತ್ರಗಳೇಉಪ-ಹಾಗೆಯೇ ೨ ನಕ್ಷತ್ರಗಳು ಹಸ್ತ—ತ್ರಿ ಬೆರಳಂತೆ ೪ ನಕ್ಷತ್ರಗಳು ಚಿತ್ರಾಮುತ್ತಿನಂದ ೧ ನಕ್ಷತ್ರವು, ಸ್ವಾತೀಮಾಣಿಕ್ಯದಂತೆ ೧ ನಕ್ಷತ್ರವು, ವಿಶಾಖಾ ಕುಂಬಾರನ ಚಕ್ರಾಕಾರವಾಗಿ ೪ ನಕ್ಷತ್ರಗಳು, ಅನೂರಾಧಾ ಜ್ಯೇಷ್ಠಾ ಇವೆರಡೂ ಛತ್ರದಂತೆ೩—೩ ನಕ್ಷತ್ರಗಳು, ಮೂಲಾ ಸಿಂಹಾಕಾರವಾಗಿ ೫ ನಕ್ಷತ್ರಗಳು.ಪೂರ್ವಾಷಾಢಾ ೮ ನಕ್ಷತ್ರಗಳು, ಉತ್ತರಾಷಾಢಾ ೪ ನಕ್ಷತ್ರಗಳು ಶ್ರವಣ ಮತ್ಸ್ಯಾಕಾರವಾಗಿ ೩ ನಕ್ಷತ್ರಗಳು, ಧನಿಷ್ಠ ತಲೆಯಂತೆ ೩ ನಕ್ಷತ್ರಗಳು ಶತಭಿಷಕ್ ನೂರುನಕ್ಷತ್ರಗಳು ಶೇರಿ ಪುಷ್ಪದಂತಿರುವದು. ಪೂಭಾ ಉತ್ತರಾಭಾದ್ರಾ, ಇವೆರಡು ಮಂಚದಕೋಡುಗಳಂತೆ-೨-೨-ಆಗಿ ೮ ನಕ್ಷತ್ರಗಳು, ರೇವತೀ ಮತ್ಸ್ಯಾಕಾರವಾಗಿ ೩ ನಕ್ಷತ್ರಗಳು, ಈ ಮೇರೆನಕ್ಷತ್ರಸ್ವರೂಪವನ್ನು ತಿಳಿದು

ಅವುಗಳು ಉಚ್ಚವಾದಾಗ ರಾತ್ರಿಯಲ್ಲಿ ಘಟಿಕಾ ನಿರ್ಣಯ ಮಾಡತಕ್ಕದ್ದು.

ಟೀ॥ ಜ್ಯೇಷ್ಠಾದೀನತಿಕ್ರಮ್ಯಾಪೌಷ್ಣಾದೀನಾಮನಾಗಮೆ ॥
ಅದ್ರಾದೀನಾಂಸಮಂಕುರ್ಯಾನ್ನವಷಟ್ಕಾದ್ವ್ಯದಶಕ್ರಮಾತ್॥

ಟೀ॥ಜ್ಯೇಷ್ಠಾದಿನಕ್ಷತ್ರಗಳು ಉಚ್ಚವಾಗಿ ಸ್ವಲ್ಪಜರಿಗಿದ ತರುವಾಯ ಈ ರೇವತೀ ಮೊದಲು ೬ ನಕ್ಷತ್ರಗಳು ಉಚ್ಚಕ್ಕೆ ಬರುವದಕ್ಕೆಸ್ವಲ್ಪ ಮುಂದಾಗಿಯೂ, ಆದ್ರ್ರಮೊದಲು ೧೨ ನಕ್ಷತ್ರಗಳು ಸರಿಯಾಗಿ ಉಚ್ಚದಲ್ಲಿರುವಾಗಲೂ ಘಟಿಕಾನಿರ್ಣಯ ಮಾಡತಕ್ಕದ್ದು

ಉಚ್ಚವಾದ ನಕ್ಷತ್ರಗಳ ದೆಶೆಯಿಂದ ಮೇಷಾದಿರಾಸಿಗಳ ಘಟಿಕೆಗಳಲ್ಲಿಕಳೆದ ಘಳಿಗೆಗಳನ್ನು ತಿಳಿದುಕೊಳ್ಳುವಕ್ರಮ.

ಇಲ್ಲಿ-ಶ್ರೋಣಾಮೇಷೇರತಾಯೆಂಬ ವಾಕ್ಯಮೊದಲು ಉತ್ತರಾಷಾಢಾಮೀನೇ ಗಾಥಾ ಯೆಂಬ ವಾಕ್ಯದವರಿಗೆ ಪ್ರತಿವಾಕ್ಯದಲ್ಲಿಯೂ ಹೇಳಲ್ಪಟ್ಟ೨-೨-ಅಕ್ಷರಗಳಲ್ಲಿ ಮೊದಲು ಅಕ್ಷರಘಟಿಕೆಯ ಸಂಖ್ಯೆ ಯೆಂಬದಾಗಿಯೂ ೨ನೇ ಅಕ್ಷರ ಪೇಳೆ ಸಂಖ್ಯೆಯೆಂಬದಾಗಿಯೂ ತಿಳಿಯತಕ್ಕದ್ದು.

ವರರುಚಿವಾಕ್ಯಗಳು.

ಶ್ರೋಣಾಮೆಷೆರತಾ । ಶ್ರವಿಷ್ಠಾವೃಷಭೆನಭ । ಶತಭಿಷಗ್ವೃಷಭೆರಾಮಃ । ಪ್ರೋಷ್ಟಪಾನ್ಮಿಥುನೆಪರಃ । ಅಹಿರ್ಬುದ್ನ್ಯೇಮಿಥುನೆಭಾನುಃ । ರೇವತೀಕರ್ಕೀಯಜ್ಞಃ । ಅಶ್ವಿನೀಕರ್ಕೀರೂಪ । ಭರಣೀಕರ್ಕೀಶಾಬ । ರೋಹಿಣೀಸಿಂಹೆಗುರುಃ । ಕೃತ್ತಿಕಾಸಿಂಹೆಕಾಯ।ಮೃಗಶಿರಾಕನ್ಯಾನೆಯ । ಆದ್ರ್ರಾಕನ್ಯಾಯುತಾ । ಪುನರ್ವಸುತುಲಾನೀಲಾ । ಪುಷ್ಯಸ್ತುಲಾರಾಮಃ । ಅಶ್ಲೇಷಾತುಲಾಭೋಗಿ । ಮಖಾವೃಶ್ಚಿಕೇಕಲ । ಫಲ್ಗುನೀವೃಶ್ಚಿಕೆಲತಾ । ಉತ್ತರಾಧನುರ್ನಾಮ । ಹಸ್ತಾಧನುರ್ಬಲಾ । ಚಿತ್ತಾಧನುಶ್ಚರ್ಯಃ । ಸ್ವಾತೀಮಕರೆಕಾಮ। ವಿಶಾಖಾಮಕರೇವನಂ । ಅನೂರಾಧಾ ಕುಂಭೆನಾಭಿಃ । ಜ್ಯೇಷ್ಠಂ ಕುಂಭೆಕಥಾ । ಮೂಲಂಕುಂಭೆಗಚ್ಛ । ಪೂರ್ವಾಷಾಡಾಮೀನೇಕವಿಃ । ಉತ್ತರಾಷಾಢಾಮೀನೇಗಾಥಾ॥

ಟೀ॥ಶ್ರವಣನಕ್ಷತ್ರವುಚ್ಛವಾದರೆ ಮೇಷಲಗ್ನದಲ್ಲಿ ೨॥ಘಳಿಗೆ ಕಳಿಯತೆಂಬದಾಗಿಯೂ, ಧನಿಷ್ಠಾನಕ್ಷತ್ರಕ್ಕೆ ವೃಷಭದಲ್ಲಿ ।। ಶತಭಿಷಕ್ ನಕ್ಷತ್ರಕ್ಕೆ ವೃಷಭದಲ್ಲಿ ೨॥=,ಪೂಭಾಗೆ ಮಿಥುನದಲ್ಲಿ ೧।,ಉಭಾಗೆ ಮಿಥುನದಲ್ಲಿ ೪,ರೇವತಿಗೆ೧॥=,ಅಶ್ವಿನಿಗೆ ಕಟಕದಲ್ಲಿ೨=,ಭರಣಿಗೆ ಕಟಕದಲ್ಲಿ೫।=,ಕೃತ್ತಿಕೆಗೆಸಿಂಹದಲ್ಲಿ೧=,ರೋಹಿಣಿಗೆಸಿಂಹದಲ್ಲಿ೩।, ಮೃಗಶಿರಕ್ಕೆ ಕನ್ಯೆಯಲ್ಲಿ=, ಆರ್ದ್ರೆಗೆ ಕನ್ಯೆಯಲ್ಲಿ೧॥,ಪುನರ್ವಸುವಿಗೆ ತುಲೆಯಲ್ಲಿ।=,ಪುಷ್ಯಕ್ಕೆ೨॥= ಆಶ್ರೇಷಕ್ಕೆತುಲೆಯಲ್ಲಿ೪।=,ಮಖೆಗೆ ವೃಶ್ಚಿಕದಲ್ಲಿ೧॥-,ಪೂರ್ವಫಲ್ಗುನಿಗೆ ವೃಶ್ಚಿಕದಲ್ಲಿ೩॥,ಉತ್ತರಫಲ್ಗುನಿಗೆ ಧನುಸ್ಸಿನಲ್ಲಿ॥-, ಹಸ್ತಕ್ಕೆ ಧನುಸ್ಸಿನಲ್ಲಿ೩।-,ಚಿತ್ರೆಗೆಧನುಸ್ಸಿನಲ್ಲಿ೫।,ಸ್ವಾತಿಗೆ ಮಕರದಲ್ಲಿ೧॥=, ವಿಶಾಖೆಗೆ ಮಕರದಲ್ಲಿ೪,ಅನೂರಾಧೆಗೆ ಕುಂಭದಲ್ಲಿ॥, ಜ್ಯೇಷ್ಠೆಗೆ ಕುಂಭದಲ್ಲಿ೧॥-,ಮೂಲಕ್ಕೆಕುಂಭದಲ್ಲಿ೩॥-, ಪೂರ್ವಾಷಾಢಕ್ಕೆ ಮೀನದಲ್ಲಿ೧॥, ವುತ್ತರಾಷಾಢಕ್ಕೆ ಮೀನದಲ್ಲಿ೩॥-,ಈಮೇರೀತಿಯೂ ನಕ್ಷತ್ರಗಳುಚ್ಛವಾದರೆ ಆಯಾರಾಶಿಗಳಲ್ಲಿ ಅಷ್ಟಷ್ಟುಗಳಿಗೆಗಳು ಕೆಳದವೆಂದು ತಿಳಿಯತಕ್ಕದ್ದು.

ಸಂಜ್ಞಾಪ್ರಕರಣವು ಸಂಪೂರ್ಣವಾದುದು.

ಶ್ರೀರಸ್ತು.

## ಜಾತಕರ್ಮಾದಿಮುಹೂರ್ತಪ್ರಕರಣವು.

### ಇದರಲ್ಲಿ ಜಾತಕರ್ಮ ಪ್ರಕರಣವು.

ಮೂ॥ಮುಖಾವಲೋಕನೆ ಸುತಸ್ಯಜೀವತಃ ಪಿತಾವಿಮುಂಚ್ಯೇತಯತ
ಸ್ತದೃಣಾತ್ । ತತಃಕ್ಷಣಾದೀನ್ವಿಗಣಯ್ಯತತ್‌ಕ್ಷಣಂವಿಧೀಯ
ತೆಜನ್ಮನಿಧಿಸ್ಸುತೋದಯೆ॥

ಟೀ॥ ಮಗುಹುಟ್ಟಿ ಬದಿಕಿರುವಾಗ ತಂದೆಯು ಅದರ ಮುಖವನ್ನುನೋಡಿದ ಮಾತ್ರದಿಂದಲೇಪಿತೃಗಳ ಋಣದಿಂದಮುಕ್ತನಾಗುತ್ತಾನೆ.ಆದ್ದರಿಂದ ಪುತ್ರನು ಹುಟ್ಟಿದಮಾತ್ರದಿಂದ ಲೇತಂದೆಯು ಅವನಿಗೆ ಜಾತಕರ್ಮವನ್ನುಮಾಡಬೇಕು.

ಮೂ॥ಪುತ್ರಜನ್ಮನಿಯಜ್ಞೇಚತಥಾಸಂಕ್ರಮಣೇರವೇ।
ರಾಹೋಃಪ್ರದರ್ಶನೇಸ್ನಾನಂ ಪ್ರಶಸ್ತಂನಾನ್ಯಥಾನಿಶಿ॥

ಟೀ॥ಮಗನು ಹುಟ್ಟಿದಾಗಲೂ, ಯಜ್ಞದಲ್ಲಿಯೂ,ಸೂರ್ಯಸಂಕ್ರಮಣದಲ್ಲಿಯೂ, ಗ್ರಹಣದಲ್ಲಿಯೂ,ರಾತ್ರಿಕಾಲದಲ್ಲಿ ಸ್ನಾನ ಮಾಡತಕ್ಕದ್ದೇಹೊರ್ತು ಇತರಕಾಲದಲ್ಲಿ ಸ್ನಾನ ಮಾಡಕೂಡದು.

ಮೂ॥ ಗ್ರಹಣೋದ್ವಾಹಸಂಕ್ರಾಂತಿಯಾತ್ರಾಸುಗ್ರಸವೇಷುಚ।
ದಾನಂ ನೈಮಿತ್ತಿಕಂಜ್ಞೇಯಂ ರಾತ್ರಾವಪಿನದೂಷ್ಯತಿ॥

ಟೀ॥ ಗಹಣ, ವಿವಾಹ ಸಂಕ್ರಾಂತಿ ಪ್ರಯಾಣ. ಪುತ್ರೋತ್ಪತ್ತಿ. ಇವುಗಳ ಈ ಕಾಲಗಳಲ್ಲಿ ರಾತ್ರೀಕಾಲದಲ್ಲಿಯೂ ದಾನ ಮಾಡತಕ್ಕದ್ದು.

ಮೂ॥ಯಾವನ್ನಚ್ಛಿದ್ಯತೇನಾಳಂ ತಾವನ್ನಾಪ್ನೋತಿಸೂತಕಂ।
ಛಿನ್ನೇನಾಳೇತತಃಪಶ್ಚಾತ್ಸೂತಕಂತುವಿಧೀಯತೇ ॥

ಟೀ॥ಯೆಷ್ಟರವರಿಗೂ ನಾಳವು ಕೊಯ್ಯಲ್ಪಡುವ ದಿಲ್ಲವೋ ಅಷ್ಟರವರಿಗೂ ಸೂತಕವಿಲ್ಲವು.

ಮೂ॥ದೃಷ್ಟ್ವಾತತಃಸಚೇಲಸ್ನಾನಮಾಚರೇತ್।
ದತ್ವಾಗೋಭೂಹಿರಣ್ಯಾದಿಪಶ್ಚಾಲ್ಲಗ್ನಂನಿರೀಕ್ಷಯೇತ್॥

ಟೀ॥ ನಾಳವು ಕೊಯ್ಯಲ್ಪಟ್ಟ ತರುವಾಯ ಶಿಶುವಿನಮುಖನೋಡಿ ಉಟ್ಟಿದ್ದವಸ್ತ್ರದೊಂದಿಗೆ ಸ್ನಾನಮಾಡಿ ಗೋದಾನ ಭೂದಾನ ಧಾನ್ಯದಾನಇವುಗಳನ್ನು ಮಾಡಿತರುವಾಯ ಲಗ್ನವನ್ನು ನೋಡಬೇಕು.

ಮೂ॥ತಸ್ಮಿನ್ಜನ್ಮಮುಹೂರ್ತೇಪಿಸೂತಕಾಂತೇಥವಾಶಿಶೋಃ॥
ಜಾತಕರ್ಮಚಕರ್ತವ್ಯಂಪಿತೃಪೂಜನತತ್ಪರೈಃ॥

ಟೀ॥ಮಗು ಹುಟ್ಟಿದಕಾಲದಲ್ಲಾದರೂ ಸೂತಕ ತೀರಿದ ತರುವಾಯ೧೧ನೇ ದಿವಸದಲ್ಲಾದರೂ ಮಗುವಿಗೆ ಜಾತಕರ್ಮ ಮಾಡಬೇಕು.

## ನಾಮಕರಣವು.

ಮೂ ॥ ನಾಮಕರ್ಮದಶಮೇಥವಾಹನಿದ್ವಾದಶೇಶುಭಿಷುವಾವಿಧೀ

ಯುತೆ। ಸ್ವೋಚ್ಚ ಮಿತ್ರ ಭವನೇಷುಸದ್ಗ್ರಹಾಸ್ಸ್ಯುದೃಶ್ಯೈರ್ಯದಿವಿ ಲೋಕಿತಾಶ್ಯುಭಾಃ॥

ಟೀ॥ಮಗುಹುಟ್ಟಿದ ೧೦ನೇ ದಿವಸದಲ್ಲಾದರೂ ೧೨ನೇ ದಿವಸದಲ್ಲಾದರೂ ಶುಭಗ್ರಹಗಳು ಸ್ವಕ್ಷೇತ್ರ ವುಚ್ಚಸ್ಥಾನ ಮಿತ್ರಕ್ಷೇತ್ರಗಳಲ್ಲಿರುವಾಗಲುಅಥವಾ ಶುಭಗ್ರಹಗಳಿಂದನೋಡಲ್ಪಟ್ಟಿದ್ದರೂ ಶುಭದಿನದಲ್ಲಿ ಶಿಶುವಿಗೆನಾಮಕರಣವನ್ನು ಮಾಡತಕ್ಕದ್ದು.

ತರುವಾಯ ನಾಮಕರಣ ಕಾಲವನ್ನು ಹೇಳುತ್ತಾನೆ.

ಮೂ॥ ಜಾತಾನಂತರಮೇವನಾಮಕರಣಂತ್ವೇಕಾದಶಾಹೇಸ್ಫುಟಂ। ಪುತ್ರಸ್ಯೈವಸಮಾಕ್ಷರಂತುಯುವತೇಃಕಾರ್ಯಂತತೋದ್ಯತ್ಕ್ಮಯಂ ಶುದ್ಧಿರ್ಜಾತಕವಚ್ಚನಾಮ್ನಿಸಕಲೈಸ್ತದ್ದ್ವಾದಶೇಷೋಡಶೇ। ದ್ವಾವಿಂಶೇಪ್ಯಥವಿಂಶಕೇಪ್ಯವಿಹಿತಂಜಾತಿವ್ಯವಸ್ಥಾಂವಿನಾ॥

ಟೀ॥ಮಗನು ಹುಟ್ಟಿದ ಕ್ಷಣದಲ್ಲೇಅವನು ಯಾವನಕ್ಷತ್ರದಲ್ಲಿ ಹುಟ್ಟುತ್ತಾನೋ. ಆನಕ್ಷತ್ರದ ಹೆಸರಿನಿಂದ ಶಿಶುವಿಗೆ ರಹಸ್ಯವಾಗಿ ನಾಮಧೇಯವನ್ನಿಟ್ಟು ತರುವಾಯ ೧೧ನೇ ದಿನದಲ್ಲಿ ಬಹಿರಂಗವಾಗಿ ನಾಮಕರಣವನ್ನು ಮಾಡತಕ್ಕದ್ದು ಹ್ಯಾಗಂದರೆ-ಅಶ್ವಿನಿಯಲ್ಲಿ ಹುಟ್ಟಿದ ಶಿಶುವಿಗೆ ಅಶ್ವಿನನು ಕೃತ್ತಿಕೆಯಲ್ಲಿ ಹುಟ್ಟಿದ್ದಕ್ಕೆ ಕಾರ್ತೀಕನು ರೋಹಿಣಿಯಲ್ಲಿ ಹುಟ್ಟಿದಕ್ಕೆರೌಹಿಣನು ಮೃಗಶೀರ್ಷದಲ್ಲಿ ಹುಟ್ಟಿದ್ದಕ್ಕೆ ಮಾರ್ಗಶಿರ್ಷನು ಮಖೆಯಲ್ಲಿ ಹುಟ್ಟಿದ್ದಕ್ಕೆ ಮಾಘನು ಈ ಮೇರೆ ೨೭ನಕ್ಷತ್ರಗಳಿಗೂ ತಕ್ಕನಾಮಗಳನ್ನಿಡತಕ್ಕದ್ದು ಮತ್ತು ಹುಟ್ಟಿದುಗಂಡುಶಿಶುವಾದರೆ ಹೆಸರು ಸಮಾಕ್ಷರವಾಗಿ ಶಿವ ರಾಮ ಕೃಷ್ಣ ಲಿಂಗ ನೀಲಕಂಠ ರಾಮಚಂದ್ರ ಮಹಾದೇವ ಎಂಬದಾಗಿಯೂ ಹೆಣ್ಣುಮಗುವಾದರೆ ಕಮಲಾ ಪಾರ್ವತೀ ಸುಂದರೀ ಜಾನಕೀ ಕನಕವಲ್ಲಿ ನೀಲಾಯತಾಕ್ಷಿಯೆಂದು ವಿಷಮಾಕ್ಷರವಾಗಿಯೂ ನಾಮಕರಣವ ಮಾಡಬೇಕು. ಈನಾಮಕರಣಕ್ಕೆ ಲಗ್ನಶುದ್ಧಿ ಮೊದಲಾದವುಗಳು ಜಾತನು ಕರ್ಮದಂತೆಯೆ ತಿಳಿಯಬೇಕು ೧೧ನೇ ದಿನದಲ್ಲಿನಾಮಕರಣ ಮಾಡದೇಹೋದ ಪಕ್ಷದಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೂವೃದ್ಧಿಯ ಆಶೌಚವು ೧೦ದಿನಗಳದರಿಗೂ ಯೆಂಬದಾಗಿ ಶಾಸ್ತ್ರವಿರು

ವದರಿಂದ ಜಾತಿಭೇದವಿಲ್ಲದೆ ವರ್ಣದವರೂ ಪ್ರಸವವಾದ ೧೨-೧೬-೨೦-೨೨ಈ ದಿನಗಳಲ್ಲಿ ನಾಮಕರಣವನ್ನು ಮಾಡತಕ್ಕದೆಂದು ಭಾವವು.

ಮೂ॥ ಮಿತ್ರಾದಿತ್ಯಮಖೋತ್ತರಾಶತಭಿಷಕ್ಸ್ವಾತೀಧನಿಷ್ಠಾ ಚ್ಯುತ ಪ್ರಾಜೇಶಾಶ್ವಿಶಶಾಂಕಪೌಷ್ಣದಿನ ಕೃತ್ಪುಷ್ಯೇಮರಾಶೌ ಸ್ಥಿರೇ॥ ಚಿದಾನ್ತ್ವಂ ಚದಶೀಂವಿಹಾಯನವಮೀಂಶುದ್ಧೇಷ್ಟಮೇ ಭಾರ್ಗವಜ್ಞಾಚಾರ್ಯಾಮೃತಪಾರವಾರದಿವಸೆ ನಾಮಾನಿಕುರ್ಯಾಚ್ಛಿಶೋಃ॥

ಟೀ॥ಅನೂರಾಧಾ,ಪುನರ್ವಸು,ಮಘಾ,ಉತ್ತರಾ, ಉಷಾ, ಉಭ ಶತಭಿಷಕ್, ಸ್ವಾತಿ, ಧನಿಷ್ಠಾ, ಶ್ರವಣ, ರೋಹಿಣಿ, ಅಶ್ವಿನೀ, ಮೃಗಶಿರ್ಷಾ, ರೇವತೀ, ಹಸ್ತ, ಪುಷ್ಯ ಈ ನಕ್ಷತ್ರಗಳಲ್ಲಿಯೂ, ಸ್ಥಿರ ರಾಶಿಯಲ್ಲುತ್ತಮ, ಪಕ್ಷಚ್ಛಿದ್ರವನ್ನೂ ಪೌರ್ಣಮಾವಾಸ್ಯೆಯನ್ನು ನವಮಿಯನ್ನೂ ಬಿಟ್ಟುಅಷ್ಟಮಶುದ್ಧಿ ಇರುವಾಗಲು ಶುಕ್ರ ಬುಧ ಗುರು ಸೋಮ ಕುಜ ವಾರಗಳಲ್ಲಿಯೂ ಶಿಶುವಿಗೆ ನಾಮಕರಣನನ್ನು ಮಾಡತಕ್ಕದ್ದು.

ಮೂ॥ ದೈವಪೂರ್ವಂಕರಾಖ್ಯಂಹಿಶರ್ಮವರ್ಮಾನುಭವತಃ। ಸುಶ್ರೀಯುತಂವಾಮಪೂರ್ವಂರಖಾಂತಂಸುಮನೋಕ್ಷರೈಃ॥

ಟೀ॥ ಮಗುವಿಗೆದೈವವಾಚಕ ಶಬ್ದ ಮೊದಲಾಗಿ ಶ್ರೀಕಾರಸಹಿತವಾಗಿಸಂಸ್ಕೃತಾಕ್ಷರಗಳಿಂದ ಬ್ರಾಹ್ಮಣಾದಿ ವರ್ಣಗಳಿಗೆ ಹೆಸರುಗಳನ್ನು ಶರ್ಮವರ್ಮ, ಗುಪ್ತಯೆಂಬ ಅಕ್ಷರಗಳ ಕೊನೇವರಿಗೆ ಕೈಯಿಂದಬರಿಯತಕ್ಕದ್ದು.

ಮೂ॥ ಕೃಷ್ಣೋನಂತೋಚ್ಯುತಶ್ಚಕ್ರೀವೈಕುಂಠೋಥಜನಾರ್ದನಃ। ಉಪೇಂದ್ರಯಜ್ಞಪುರುಷೋವಾಸುದೇವಸ್ತಥಾಹರಿಃ॥ ಗೋವಿಂದಃಪುಂಡರೀಕಾಕ್ಷೋವಾಸನಾಮಾನ್ಯನುಕ್ರಮಾತ್ ಕೆಚಿನ್ನಕ್ಷತ್ರನಾಮಾನಿಕುರ್ವಂತಿವಿದಿತಾಗಮಾ॥

ಟೀ॥ ಹುಟ್ಟಿದ ಮಗುವಿಗ ಚೈತ್ರಮೊದಲು ವಿಾನ ಮಾಸದವರಿಗೆಕ್ರಮವಾಗಿ ಕೃಷ್ಣನು, ಅನಂತನು ಅಚ್ಯುತನು, ಚಕ್ರಿಯು, ವೈಕುಂಠನು, ಜನಾರ್ದನನು, ಉಪೇಂದ್ರನು, ಯಜ್ಞಪುರುಷ

ನು,ವಾಸುದೇವನು,ಹರಿಗೋವಿಂದನು, ಪುಂಡರೀಕಾಕ್ಷನು, ಈ ೧೨ ಹೆಸರನ್ನು ಇಡತಕ್ಕದ್ದು ಇದು ಮಾಸನಾಮುಗಳು, ಕೆಲವರು ನಕ್ಷತ್ರನಾಮುಗಳನ್ನು ಇಡುತ್ತಾರೆ, ಅಂದರೆ ಇಲ್ಲಿ ಹೇಳಲ್ಪಟ್ಟಕೃಷ್ಣಾದಿ ನಾಮುಗಳಲ್ಲಿ ಒಂದನ್ನು ಶಿಶುವಿಗೆ ಇಟ್ಟು ಆ ಶಿಶುವು ಯಾವ ತಿಂಗಳಲ್ಲಿಯೂ ಯಾವ ನಕ್ಷತ್ರದಲ್ಲಿಯೂ ಹುಟ್ಟಿತೋಅವುಗಳ ನಾಮುವನ್ನು ಕೊನೆಯಲ್ಲಿ ಶೇರಿಸತಕ್ಕದ್ದು.

ಹೆಂಣು ಮಕ್ಕಳಿಗೆ ಹ್ಯಾಗಂದರೆ.

ಮೂ॥ ಮಾರ್ಗಶೀರ್ಷೆಚವಾಗ್ದೇವೀಪುಷ್ಯೇಪದ್ಮಾವತೀಭವೇತ್ ಶ್ರೀದೇವೀಚೈವಸಾವಿತ್ರೀಭೂವಿಶಾಕಲ್ಯಾಣಿಕಾಸ್ಮೃತಾ । ಸತ್ಯಭಾಮಾಪುಣ್ಯವತೀರಳಿಪಿಣೀಚೆಂದುಮತ್ಯಪಿ ಚಂದ್ರಾವತೀಚ ಲಕ್ಷ್ಮೀಚಸ್ತ್ರೀನಾಮಕರಣೆವಿದುಃ ॥

ಟೀ॥ ಹೆಂಣುಮಕ್ಕಳಿಗೆ ಮಾರ್ಗಶಿರ ಮಾಸದಲ್ಲಿ ವಾಗ್ದೇವಿ,ಪುಷ್ಯಮಾಸದಲ್ಲಿ ಪದ್ಮಾವತೀ, ಮಾಘಮಾಸದಲ್ಲಿ ಶ್ರೀದೇವೀ, ಫಾಲ್ಗುಣ ಮಾಸದಲ್ಲಿ ಸಾವಿತ್ರೀ, ಚೈತ್ರಮಾಸದಲ್ಲಿ ಭೂದೇವಿ,ವೈಶಾಖಮಾಸದಲ್ಲಿ ಕಲ್ಯಾಣಿ, ಜ್ಯೇಷ್ಠಮಾಸದಲ್ಲಿ ಸತ್ಯಭಾಮಾ, ಆಷಾಢ ಮಾಸದಲ್ಲಿ ಪುಣ್ಯವತೀ, ಶ್ರಾವಣಮಾಸದಲ್ಲಿರೂಪಿಣೀ, ಭಾದ್ರಪದ ಮಾಸದಲ್ಲಿ ಇಂದುಮತೀ, ಆಶ್ವಿಯುಜಮಾಸದಲ್ಲಿ ಚಂದ್ರಾವತೀ, ಕಾರ್ತಿಕ ಮಾಸದಲ್ಲಿ ಲಕ್ಷ್ಮೀ ಈ ಹೆಸರುಗಳಂನುಸ್ತ್ರೀಗಳ ನಾಮಕರಣದಲ್ಲಿ ಮಾಸನಾಮುಗಳೆಂದು ಹೇಳುತ್ತಾರೆ

ಮೂ॥ ಕುಮಾರಸ್ಯಾಭಿವೃದ್ಧ್ಯರ್ಥಂಕುರ್ಯಾದ್ಬ್ರಾಹ್ಮಣಭೋಜನಂ ॥

ಟೀ॥ ಶಿಶುವಿಗೆ ಅಭಿವೃದ್ಧಿಯುಂಟಾಗುವ ಬಗ್ಯೆ ತಂದೆಯು ನಾಮಕರಣದಲ್ಲಿಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಬೇಕು.

ಮೂ॥ ದ್ವಿಕಾಕ್ಷರಂ ವಾಚತುರಕ್ಷರಂವಾವಿವರ್ಜಿತೋಪಾಂತ್ಯಲಕಾರವೇಫಂ। ತನ್ನಾಮಸನಾಮಾದಿಕಮೇಕಚಿತ್ತ ಸ್ಸ್ಫುಟಂವದೆದ್ದಕ್ಷಿಣಕರ್ಣರಂಧ್ರೇ ॥

ಟೀ॥ ಹೆಸರಿನಕೊನೆ ಅಕ್ಷರದಮುಂದೆಲ-ರ-ಈ೨ಅಕ್ಷರಗಳಿಲ್ಲದ್ದಾಗಿಯೂಮಾಸನಾಮಧೇಯವಾಗಿಯೂ-೪-ಅಕ್ಷರವಾಗಿಯೂಇರು

ವಹೆಸರನ್ನು ಶಿಶುವಿನ ಬಲಕಡೇ ಕಿವಿಯಲ್ಲಿಸ್ಪಷ್ಟವಾಗಿ ಹೇಳಬೇಕು.

ಮೂ॥ ಅಷ್ಟಮಸ್ಥಾಗ್ರಹಾಸ್ಸರ್ವೇನಷ್ಟಾಸ್ತೈನಾಮಕರ್ಮಣೀ ಧನಪುತ್ರಸುಹೃದ್ಭಾತೃನವಮೆನಶುಭಶ್ಶಶೀ । ಪಾಪಾಸ್ತ್ರಿಷಷ್ಟಲಾಭಸ್ಥಾಃನಾಮಕರ್ಮಣಿಪೂಜಿತಾಃ । ದ್ವಾದಶೇಹನಿಕರ್ತವ್ಯಂಶಿಶೋರ್ನಿಷ್ಕ್ರಮಣಂಗೃಹಾತ್ ॥

ಟೀ॥ ನಾಮಕರಣಲಗ್ನಕ್ಕೆ ಅಷ್ಟಮಶುದ್ಧಿ ಇರಬೇಕು. ದ್ವಿತೀಯ, ಪಂಚಮ, ಚತುರ್ಥ, ತೃತೀಯಾ, ನವಮ, ಈ ಸ್ಥಾನಗಳಲ್ಲಿ ಶುಭಗ್ರಹ ಯುಕ್ತನಾದ ಚಂದ್ರನು, ತೃತೀಯ ಷಷ್ಠಲಾಭಸ್ಥಾನಗಳಲ್ಲಿರುವ ಪಾಪಗ್ರಹಗಳು ಸಹ ಶುಭಫಲಗಳನ್ನು ಕೊಡುವರು. ಶಿಶುಹುಟ್ಟಿದ ೧೨ನೇ ದಿವಸದಲ್ಲಿ ಸೂತಿಕಾಗೃಹದಿಂದ ಮಗುವಂನು ಹೊರಗೆ ತರಬೇಕು.

## ಚೊಗೆ ತೊಡುಗುವದು.

ಮೂ॥ ಅಶ್ವಿನೀತ್ವಷ್ಟ್ರಪೌಷ್ಣೇಜ್ಯಮಿತ್ರೋತ್ತರಕರಾನಿಲೆ। ಸಿತಸೌಮ್ಯೇಜ್ಯವಾರೇಷುಚಂದ್ರತಾರಾಬಲಾನ್ವಿತೆ। ಶುಭೆಮುಹೂರ್ತಪೂರ್ವಾಹ್ಣೆಜಯೆಪೂರ್ಣದಿನೆತಥಾ।ಕೇಂದ್ರತ್ರಿಕೋಣಗಾಸೌಮ್ಯಾಃಪಾಪಾಸ್ತ್ರ್ಯಾಯಾರಿರಾಶಿಗಾಃ । ಶಿಶೂನಾಂಧಾರಯೆತ್ತತ್ರಕಂಚುಕಂಚಿತ್ರವರ್ಣಕಂ ॥

ಟೀ॥ ಅಶ್ವಿನೀ, ಚಿತ್ರಾ, ರೇವತೀ, ಪುಷ್ಯೇ ಅನೂ, ಉತ್ತ, ಉಷಾ, ಉಭಾ, ಹಸ್ತ, ಸ್ವಾತಿ, ಈ ನಕ್ಷತ್ರಗಳಲ್ಲಿಯೂ, ಬುಧ, ಗುರುವಾರಗಳಲ್ಲಿಯೂ, ಚಂದ್ರತಾರಾಬಲವುಳ್ಳ ಶುಭ ಮುಹೂರ್ತದಲ್ಲಿಯೂ, ಪೂರ್ವಾಹ್ಣದಲ್ಲಿಯೂ, ಜಯತಿಥಿಗಳಲ್ಲಿಯೂ-ಪೂರ್ಣದಿವಸದಲ್ಲಿಯೂ, ಶುಭಗ್ರಹಗಳು ಕೇಂದ್ರತ್ರಿಕೋಣಗಳಲ್ಲಿರುವಾಗಲೂ, ಪಾಪಗ್ರಹಗಳು ೩-೧೧-೬ನೇ ಸಾನಗಳಲ್ಲಿರುವಾಗಲೂ ಶಿಶುವಿಗೆ ನಾನಾ ಬಂಣವುಳ್ಳ ಚೊಗೆಯನ್ನು ತೊಡಗಿಸತಕ್ಕದ್ದು.

## ಮಗುವಿಗೆ ತೊಟ್ಲು ತೂಗಿಸುವದು.

ಮೂ॥ ತೃತೀಯೇಪಂಚಮೆಮಾಸಿತನ್ಮಾಸೆವಾಶುಭೆದಿನೆ। ಧಾತೃಮೂಲೋತ್ತರತ್ರೀಣಿತಿರಗ್ವೈಷುದ್ವಿದೈವಭೆ॥ ಚಂದ್ರತಾರಾಬಲಯುತೆಚಾಷ್ಟಮೆಶುದ್ಧಿ ಸಂಯುತೆ । ಡೋಲಾಮಾರೋಹ

ಯೆದ್ಬಾಲಂದ್ವಿಜಪುಣ್ಯಾಂಗನಾದಿಭಿಃ ॥

ಟೀ॥ ೩ನೇ ಮಾಸದಲ್ಲಿಯಾದರೂ, ೫ನೇ ಮಾಸದಲ್ಲಿಯಾದರೂ ಮಗು ಹುಟ್ಟಿದ ಮಾಸದಲ್ಲಿಯಾದರೂ, ಯಾವದಾದರುವಂದು ಶುಭದಿನದಲ್ಲಿ ರೋಹಿಣೀ, ಮೂಲ, ಉತ್ತ್ತರ, ಉಷಾ, ಉಭಾ,ಇವುಗಳಲ್ಲಿಯೂ, ತಿರ್ಯಙ್ಮುಖನಕ್ಷತ್ರದಲ್ಲಿಯೂ ಅಂದರೆ,—ರೇವ,ಪುನ, ಹಸ್ತ, ಚಿತ್ತ, ಸ್ವಾ, ಅಶ್ವಿ, ಮೃಗ ಅನೂ, ಜ್ಯೇಷ್ಠ, ವಿಶಾ, ಈ ನಕ್ಷತ್ರಗಳಲ್ಲಿಯೂ, ಚಂದ್ರತಾರಾಬಲವುಳ್ಳ ನಕ್ಷತ್ರದಲ್ಲಿಯೂ, ಅಷ್ಟಮಶುದ್ಧಿ ಇರುವಾಗಲೂ, ಬ್ರಾಹ್ಮಣರು ಮುತ್ತೈದೆಯರೊಂದಿಗೆ ಮಗುವನ್ನು ತೊಟ್ಟಿಲನಲ್ಲಿ ಇಡಬೇಕು.

## ಅನ್ನ ಪ್ರಾಶನವು.

ಮೂ ॥ ಷಷ್ಟೇಷ್ಟಮೇವಾದಶಮೇಚ ಮಾಸಿಸಂವತ್ಸರೇವಾದಿವಸೆ ಪ್ರವೃದ್ಧೇ। ಪಕ್ಷಸಿತೇವ್ಯೋಮ್ನಿವಿಶುದ್ಧಿಬಾಜಿಬಾಲಾನ್ನಭುಕ್ತಿರ್ವಿಹಿತಾಮುನೀಂದ್ರೈಃ ॥

ಟೀ ॥ ೬-೮-೧೦ನೇ ತಿಂಗಳಲ್ಲಿಯಾದರೂ, ವರ್ಷಾಂತದಲ್ಲಿಯಾದರು, ಹಗಲಿನಲ್ಲಿ, ಶುಕ್ಲಪಕ್ಷದಲ್ಲ, ಶುಕ್ರನಿಗೆ ಅಸ್ತಾದಿದೋಷಗಳಿಲ್ಲದಿರುವಾಗಲೂಬಾಲಕರಿಗೆಅಂನಪ್ರಾಶನೂಮಾಡತಕ್ಕದ್ದು

ಮೂ॥ ದೇವತಾಪುರತಸ್ತಸ್ಯಮಾತೃತ್ಸಂಗಗತಸ್ಯಚ। ಅಲಂಕೃತಸ್ಯಭೂಷಾಭಿರನ್ನಪಾತ್ರೆಚವಾಂಛಿತೆ। ಮಧ್ವಾಜ್ಯಕನಕೋಪೇತೆಪ್ರಾಶಯತ್ಪಾಯಸಂಶುಭಂ ॥

ಟೀ॥ ದೇವರ ಸಮುಖದಲ್ಲಿತಾಯಿ ತೊಡೆಯಮೇಲೆ ಆಭರಣಗಳಿಂದ ಅಲಂಕೃತನಾಗಿರುವ ಶಿಶುವಿಗೆ ಸುವರ್ಣಾದಿ ಪಾತ್ರದಲ್ಲಿ ಪಾಯಸವಂನಿಟ್ಟುಅದರಲ್ಲಿತುಪ್ಪ ಜೇನುತುಪ್ಪಮಿಶ್ರಮಾಡಿ ಆಪಾಯಸವನ್ನು ಕುಡಿಸುವದು.

ಮೂ॥ ಆದಿತ್ಯಸೌಮ್ಯವಸುತಿಷ್ಯಕರಾನಿಲಾಶ್ವಿ। ಮಿತ್ರಾಖ್ಯವಿಷ್ಣುವರುಣೋತ್ತರಭಾನಿಚಿತ್ರಾ। ಬಾಲಾನ್ನಭೋಜನವಿಧೌದಶಮೇಚಶುದ್ಧೇ।ಛಿದ್ರಾನ್ವಿಹಾಯನವಮಾಂತಿಥಯಃಶುಭಾಸ್ಯುಃ॥

ಟೀ॥ ಪುನರ್ವಸು, ಮೃಗಶಿರ, ಧನಿಷ್ಠಾ, ಪುಷ್ಯ, ಹಸ್ತಾ, ಸ್ವಾತೀ, ಅಶ್ವಿನೀ, ಅನೂ, ಶ್ರವಣ, ಶತ, ಉತ್ತ್ತರ, ಉಷಾ, ಉಭಾ, ಚಿ

ತ್ರಾ, ಈ ನಕ್ಷತ್ರಗಳಲ್ಲಿಯೂ, ದಶಮಶುದ್ಧ ಇರುವಾಗಲು ಪಳ್ಳೇತು ಪಕ್ಷಚ್ಛಿದ್ರಗಳನ್ನು ನವಮಿಯನ್ನು ಬಿಟ್ಟು ಮಿಕ್ಕತಿಥಿಗಳಲ್ಲಿ ಬಾಲಕರಿಗೆ ಅನ್ನಪ್ರಾಶನವು ಶುಭಕರವಹುದು.

ಮೂ॥ ವಾರಾಶ್ಚಭಾಶ್ಚಗುರುಚಂದ್ರಸಿತೇಂದುಜಾನಾಂ । ಮೆಷಾದಿಮೀನರಹಿತಾ ಹಿತಾಸಿಭಾನಿ। ಭುಕ್ತೌಶಿಶೋಃಶುಭಕರಾಂ ಪರಿಹೃತ್ಯಸೌಮ್ಯಂಭೌಮಂಸಿತಂನವಮನೈಧನಸಪ್ತಮೆಷು

ಟೀ॥ ಮತ್ತುಗುರು, ಶುಕ್ರಸೋಮ, ಬುಧವಾರಗಳೂ, ಮೇಷ, ವೃಶ್ಚಿಕ, ಮೀನರಾಶಿಗಳನ್ನುಬಿಟ್ಟು ಮಿಕ್ಕರಾಶಿಗಳು, ೭-೮-೯ನೇ ರಾಶಿಗಳಲ್ಲಿಬುಧ, ಅಂಗಾರಕ, ಶುಕ್ರರು ಇರುವಿಕೆಯೂ,ಮಗುವಿನ ಅನ್ನಪ್ರಾಶನದಲ್ಲಿಶುಭಕರವು.

ಅನ್ನಪ್ರಾಶನಲಗ್ನದಲ್ಲಿರುವಗ್ರಹಗಳಫಲವನ್ನು ಹೇಳುತ್ತಾನೆ.

ಶ್ಲೋ॥ ಕುಷ್ಠೀಲಗ್ನಗತೇರವೌತನುಕಳಚಂದ್ರೆಸದಾಭಿಕ್ಷುಕಃ। ಪೂರ್ಣೆಂದೌಬಹುಸತ್ವದೋವನಿಸುತೆ ಪಿತ್ತಾರ್ದಿತೋಜ್ಞಾನವಾ । ಜ್ಞೇಜೀವೆಬಹುಭೋಗವಾ ಭೃಗುಸುತೆದೀರ್ಘಾಯುರರ್ಕಾತ್ಮಜೆ । ವಾತಾಂಗೀತಯುತಿಧ್ವಜೆಪ್ಯನಶನೀಬಾಲಾನ್ನಭೋಕ್ತಾಭವೇತ್ ॥

ಟೀ॥ ಅನ್ನಪ್ರಾಶನ ಲಗ್ನದಲ್ಲಿ ಸೂರ್ಯನಿದ್ದರೆ ಶಿಶುವಿಗೆ ಕುಷ್ಠರೋಗವುಂಟಾಗುತ್ತದೆ, ಕ್ಷೀಣಚಂದ್ರನಿದ್ದರಶಿಶುವು ಯಾವಾಗ್ಲೂ ಭಿಕ್ಷುಕನಾಗುತ್ತಾದೆ. ಪೂರ್ಣಚಂದನಿದ್ದರೆ ಬಹಳ ಅನ್ನದಾನ ಮಾಡುವನು. ಅಂಗಾರಕನಿದ್ದರೆ ಬಾಲಕನು ಪಿತ್ತವ್ಯಾಧಿಯುಳ್ಳವನಾಗುತಾದೆ ಬುಧನಿದ್ದರೆ ಜ್ಞಾನವಂತನಾಗುತಾನೆ. ಗುರುವಿದರೆ ಬಹು ಭೋಗಉಳ್ಳವನಾಗುತ್ತಾನೆ. ಶುಕ್ರನಿದ್ದರೆ ದೀರ್ಘಾಯುಷ್ಮಂತನಾಗುತಾದೆ ಶನಿ ಯಿದ್ದರೆ ವಾಯುರೋಗ ಶರೀರವುಳ್ಳವನಾಗುತ್ತಾನೆ, ರಾಹು ಕೇತುಗಳಿದ್ದರೆ ಯಾವಾಗ್ಯಾತಿನ್ನುವದಕ್ಕಿಲ್ಲದೆ ಕಷ್ಟಪಡುವನು ಇದರಿಂದ ಬಾಲಕನ ಅನ್ನಪ್ರಾಶನಕ್ಕಾಗಿ ನಿರ್ಣಯಿಸತಕ್ಕ ಶುಭಲಗ್ನದಲ್ಲ ಪೂರ್ಣಚಂದ್ರ, ಬುಧ॥ ಗುರು, ಶುಕ್ರ, ಈ ನಾಲ್ಕರಲ್ಲ ಒಂದು ಗ್ರಹವಿರಬೇಕೆಂದು ಭಾವವು.

ನೂತನವಸ್ತ್ರಧಾರಣವು.

ಮೂ॥ಹಸ್ತೋತ್ತರಾನಿಲಪುನರ್ವಸುತಿಷ್ಯಮಿತ್ರತ್ವಾಷ್ಟ್ರದ್ವಿದೈವ
ವಿಧಿವಾರುಣಪೌಷ್ಣಭೇಷು । ರಿಕ್ತಾಃಕ್ರಿಯಾಳಿಹರಿಚಾಪಝು
ಷಾರ್ಕಭೌಮವಾರಾನ್ವಿಹಾಯನವ ವಸ್ತ್ರಮುಶಂತಿಧಾರ್ಯಂ॥

ಟೀ॥ಹಸ್ತ,ಉತ್ತರ,ಉಷಾ,ಉಭಾ,ಸ್ವಾತೀ,ಪುನರ್ವಸು,ಪುಷ್ಯ,ಅನೂ,ಚಿತ್ರಾ,ವಿಶಾಖಾ,ರೋಹಿಣೀ, ಶತಭಿಷಕ್,ರೇವತೀ,ಈನಕ್ಷತ್ರಗಳಲ್ಲುತ್ತಮ, ರಿಕ್ತತಿಥಿಗಳನ್ನು ಮೇಷ, ವೃಶ್ಚಿಕ, ಸಿಂಹ,ಧನುಸ್ಸು, ಮೀನ ರಾಶಿಗಳನ್ನೂ, ಆದಿತ್ಯಾಂಗಾರಕ ವಾರಗಳನ್ನೂ ಬಿಟ್ಟು ಕಡಮೆ ತಿಥಿರಾಶಿಗಳಲ್ಲಿ ನೂತನವಸ್ತ್ರವನ್ನು ಧರಿಸತಕ್ಕದ್ದು.

## ಕೇಶ ಖಂಡನವು.

ಮೂ॥ ಅಶ್ವೀಪುಷ್ಯಪುನರ್ವಸೂಮೃಗಶಿರಸ್ಸ್ವ್ಯತಂತವಿಷ್ಣುತ್ರ
ಯಂ । ಚಂದ್ರಜ್ಞಾಮರಪೂಜ್ಯಶುಕ್ರ ಸಹಿಕಾಃಪೂರ್ಣಾಜ
ಯಾಖ್ಯಾಶ್ಚಭಾಃ॥ಪೂರ್ವಾಹ್ಣೆಶುಭಲಗ್ನ ಹೋರದಿವಸೇಯುಗ್ಮೇ
ಚಮಾಗೆಶಿಶೋಃ। ಕೇಶಚ್ಛೇದನೆ ಮಿಷದಂಮುನಿವರ್ಯೈರ್ಯುಕ್ತಂವರಾ
ಹಾದಿಭಿಃ॥

ಟೀ॥ಅಶ್ವಿ,ಪುಷ್ಯ,ಪುನ, ಮೃಗಶಿರ,ಸ್ವಾತೀ,ರೇವತಿ, ಶ್ರವಣ, ಧನಿಷ್ಠಾ, ಶತಭಿಷಕ್ ಈ ನಕ್ಷತ್ರಗಳೂ ಸೋಮ, ಬುಧ, ಗುರು, ಶುಕ್ರ ವಾರಗಳೊಂದಿಗೆ ಶೇರಿದ ಪೂರ್ಣತಿಥಿಗಳೂ ಕೇಶಖಂಡನದಲ್ಲಿಶುಭಕರಗಳು. ಮತ್ತುಪೂರ್ವಾಹ್ಣದಲ್ಲೂ ಶುಭಲಗ್ನ ಶುಭಹೋರೆ ಶುಭ ದಿವಸಗಳತಯೂ ೨-೪-೬-೮-೧೦ಇಂಥಾಸಮಮಾಸಗ ಳಲ್ಲಿಯು ಮಗುವಿಗೆ ಕೇಳಖಂಡನವನ್ನು ಮಾಡತಕ್ಕದ್ದು.

## ಕರ್ಣ ವೇಧನವು.

ಮೂ॥ಮಾಸೇಷಷ್ಟೇಸಪ್ತಮೇವಾಷ್ಟಮೇವಾವೇಧೌಕರ್ಣಾದ್ವಾದಶೇ
ಷೋಡಶೇಹ್ನಿ । ಮಧ್ಯಾಹ್ನಃಪೂರ್ವಭಾಗೇನರಾತ್ರೌನಕ್ಷತ್ರೇದ್ವೈ
ದ್ವೈತಿಥಿರ್ವರ್ಜಯಿತ್ವಾ॥

ಟೀ॥ ೬-೭-೮ನೇ ಮಾಸಗಳಲ್ಲಿ ಮಗುಹುಟ್ಟಿದ೧೨-೧೬ನೇ ದಿವಸಗಳಲ್ಲಿಯಾದರೂ, ಮಧ್ಯಾಹ್ನ ಕಾಲದಲ್ಲಿಯಾದರೂ, ಅದರ ಪೂರ್ವಭಾಗದಲ್ಲಿಯಾದರೂ ಒಳ್ಳೇದು. ೨ನಕ್ಷತ್ರಗಳು ೨ತಿಥಿಗಳು ಶೇರಿದ ದಿನಗಳನುಬಿಟ್ಟುಪೂರ್ಣತಿಥಿ ನಕ್ಷತ್ರಗಳಲ್ಲಿ ಶಿಶುವಿಗೆ ಕಿವಿ

ಚುಚ್ಚತಕ್ಕದು. ರಾತ್ರಿಕಾಲದಲ್ಲಿ ಕರ್ಣವೇಧನವು ಕೂಡದೆಂದು ಭಾವವು.

ಮೂ॥ಹರಿಹರಕರಚಿತ್ರಾಸೌಮ್ಯಪೌಷ್ಣೋತ್ತರಾರ್ದ್ರಾ । ದಿತಿವಸುಷುಘಟಾಳೀಸಿಂಹಲಗ್ನೈರ್ವಿವರ್ಜೆ । ಶಶಿಬುಧಗುರುಕಾವ್ಯವಾಸರೇಸರ್ವರಿಕ್ತಾ । ರಹಿತತಿಥಿಷುಶುದ್ಧೇನೈಧನೇಕರ್ಣವೇಧಃ॥

ಟೀ॥ಶ್ರವಣ,ಆರ್ದ್ರಾ ಹಸ್ತ ಚಿತ್ರಾ ಮೃಗ ರೇವತೀ ಉತ್ತರ, ಉಷಾ, ಉಭಾ ಪುಷ್ಯ ಪುನ ಧನಿಷ್ಟಾ ಈನಕ್ಷತ್ರಗಳಲ್ಲಿ ಉತ್ತಮ ಕುಂಭ ವೃಶ್ಚಿಕ ಸಿಂಹಲಗ್ನಗಳನ್ನು ಪಂಚಪರ್ವಗಳನ್ನು ರಿಕ್ತತಿಥಿಗಳನ್ನು ಬಿಟ್ಟು ಇತರ ಲಗ್ನತಿಥಿಗಳಲ್ಲಿಯೂ ಸೋಮ ಬುಧ ಗುರು ಶುಕ್ರವಾರಗಳಲ್ಲಿಯೂ ಅಷ್ಟಮಶುದ್ಧಿ ಇರುವಾಗಲು ಕರ್ಣವೇಧನವು ಮಾಡತಕ್ಕದ್ದು.

ಮೂ॥ಕರ್ಣವೇಧನಲಗ್ನಸ್ಯನೇಷ್ಟಾಸರ್ವೇಷ್ಟಮೇಸ್ಥಿತಾಃ । ಉಕ್ತೈವವಿಧಾನೇನಕುರ್ಯಾತ್ಕರ್ಣಸ್ಯವೇಧನಂ । ಅನುಕ್ತೇಮಪಿತುರ್ಯಾಚ್ಚೇತ್ಕರ್ಣಚ್ಛೇದೋಭವಿಷ್ಯತಿ॥

ಟೀ ॥ ಕರ್ಣವೇಧನಲಗ್ನಕ್ಕೆ ಅಷ್ಟಮಸ್ಥಾನದಲ್ಲಿ ಯಾವಗ್ರಹವು ಇರಕೂಡದು. ಹಿಂದೆ ಹೇಳಲ್ಪಟ್ಟಕ್ರಮದಂತೆ ಕರ್ಣವೇಧನ ಮಾಚದೆ ಮನಸ್ಸಿಗೆ ಬಂದಂತೆ ಮಾಡಿದರೆ ಚುಚ್ಚಿದಕಿವಿಯು ಕಿತ್ತುಹೋಗುವದು.

## ಚೌಲವಿಧಿಯು

ಮೂ॥ ತೃತೀಯುವರ್ಷೇಸ್ಯಥ ಪಂಚಮೇಬ್ದೇಗತತ್ರಿಭಾಗೇ ಪ್ರವದಂತಿಚೌಲಂ । ಉದಗ್ನತರ್ಕೇಗುರುಶುಕ್ರತೇಜಃ । ಪ್ರಕಾಶಿತಂವ್ಯೋಮ್ನಿಚಶುಕ್ಲಪಕ್ಷೇ॥

ಟೀ॥ಮಗ ಹುಟ್ಟಿದ ೩ ವರ್ಷದಲ್ಲಾದರೂ ಅಥವಾ ೫ನೇ ವರ್ಷರೂ ಆ ವರ್ಷದಲ್ಲಿ ಮೂರು ಪಾಲು ಕಳೆದು ಹೋದ ಮೇರ ಉತ್ತರಾಯಣದಲ್ಲಿ ಗು, ಶುಕ್ರರು ಆಕಾಶಲ್ಲಿ ಪ್ರದಕಾಶಿಸುತ್ತಿರುವಾಗ ಶುಕ್ಲ ಪಕ್ಷದಚೌಲವಮಾತಕ್ಕದ್ದು.

ಮೂ ॥ ಆದಿತ್ಯಸೌಮ್ಯವಸುವೈಷ್ಣವಪೌಷ್ಯತಿಷ್ಯತ್ವಷ್ಟ್ರಶ್ವಿಚಂಡಕಿರಣೇಷುದಿವಾಪ್ರಶಸ್ತಂ । ಸ್ವಾತೀವಿಧಾತೃವರುಣೋತ್ತ

ರಭಾನವಮಧ್ಯಾ। ನ್ಯಾಹುರ್ನಿಶಾಸ್ವಪಿನಚಕ್ಷುರಕರ್ಮಕಾರ್ಯಂ॥

ಟೀ॥ಪುನರ್ವಸೂ ಮೃಗಶಿರಾ, ಧನಿಷ್ಠಾ, ಶ್ರವಣ, ರೇವತೀ ಪುಷ್ಯ ಚಿತ್ರಾ, ಅಶ್ವಿನಿ, ಹಸ್ತ ಈನಕ್ಷತ್ರಗಳಲ್ಲಿ ವುತ್ತಮವು,ಸ್ವಾತೀ,ರೋಹಿಣಿ, ಶತಭಿಷಕ್, ವುತ್ತರ, ವುತ್ತರಾಭಾದ್ರ, ವುತ್ತರಾಷಾಢಾ, ಈ ನಕ್ಷತ್ರಗಳು ಮಧ್ಯಮಗಳು ಏವಂಚ ಚೌಲ ಮಧ್ಯಾಹ್ನ ಕಾಲದಲ್ಲೇ ಮಾಡತಕ್ಕದ್ದೇಹೊರ್ತು ರಾತ್ರಿಕಾಲದಲ್ಲಿ ಮಾಡಕೊಡದು

ಮೂ ॥ ಷಷ್ಟ್ಯಷ್ಟಮೀಪ್ರತಿಪದಸ್ತಿಥಯಶ್ಚ ರಿಕ್ತಾವರ್ಜ್ಯಾಃಶಶಾಂಕಗುರುಸೌಮಜಭಾರ್ಗವಾಣಾಂ । ವಾರಾಂಶಕೋದಯವಿಲೋಕನಮಿಷ್ಟಮಾಹುಃ ಕ್ಷೌರೆತುಕರ್ಮಣಿಶುಭಂನದಿಶಂತಿಚಾನ್ಯ॥

ಟೀ॥ ಕ್ಷುರಕರ್ಮದಲ್ಲಿ ಷಷ್ಠಿ, ಅಷ್ಟಮಿ, ಪ್ರತಿಪತ್, ರಿಕ್ತತಿಥಿಗಳು, ಇವುಗಳನ್ನು ಬಿಡತಕ್ಕದ್ದು. ಮತ್ತು ಚಂದ್ರ, ಗುರು,ಬುಧ, ಶುಕ್ರಇವರುಗಳ ವಾರಗಳು, ಅಂಶಗಳು, ಲಗ್ನಗಳು, ವೀಕ್ಷಣಗಳು, ಇವುಗಳು ಶುಭಪ್ರದಗಳು, ಇತರಗ್ರಹಗಳ ವಾರಅಂಶ, ಲಗ್ನವೀಕ್ಷಣಗಳು, ಅಶುಭಗಳು.

ಮೂ॥ಕರ್ಕ್ಯಂಗನಾಮಿಥುನಮೀನತುಲೋಕ್ಷನಕ್ರಾಃಪೂಜ್ಯಾಕ್ರಿಯಾಳಿಹರಿಚಾಪಘಟಾಜಘನ್ಯಾಃ।ತೆಪಿಸ್ವವೀರ್ಯಶುಭಖೇಟಯುತಾವಿಧೇಯಾಚೌಲೆಘಟೋಶುಭಯುತೋಪಿನಿಷಿದ್ಧಏವ॥

ಟೀ॥ಕ್ಷುರಕರ್ಮದಲ್ಲಿ ಕಟಕ, ಕನ್ಯಾ, ಮಿಥುನ, ಮೀನ, ತುಲಾ ವೃಷಭ, ಮಕರ, ಈ ರಾಸಿಗಳು, ವುತ್ತಮಗಳು, ಮೇಷ, ವೃಶ್ಚಿಕ, ಸಿಂಹ, ಧನುಸ್ಸು, ಕುಂಭರಾಶಿಗಳು ಅಧಮಗಳು, ಅಂಥಾ ಅಧಮ ರಾಶಿಗಳು ತಮ್ಮಬಲದೊಂದಿಗೂ, ಶುಭಗ್ರಹಗಳೊಂದಿಗೂ ಕೂಡಿಕೊಂಡು ಇದ್ದರೆ ಆರಾಶಿಗಳಲ್ಲೂ, ಮಾಡಬಹುದು. ಆದರೆ ಕುಂಭರಾಶಿ ಮಾತ್ರಯೆಷ್ಟು ಬಲವಿದ್ದರೂ ಬಿಡತಕ್ಕದ್ದಾಗಿ ಇದೆ.

ಮೂ ॥ ತ್ರಿಕೋಣಕೇಂದ್ರಾಯಗತೇಷುಸೌಮ್ಯೇಷ್ವಾಯಾರಿದುಶ್ಚಿಕ್ಯಭವಮಾಶ್ರಿತೇಷು । ಪಾಪೇಷುಶುದ್ಧೆಷ್ಟಮಕೇಶಿಶೂನಾಂಚೌಲಂಪ್ರಶಸ್ತಮುನಿಭಿಃಪ್ರದಿಷ್ಟಂ॥

ಟೀ॥ ಶುಭಗ್ರಹಗಳು ಲಗ್ನ ೪-೫-೭-೯-೧೦-೧೧ ಈ ಸ್ಥಾನಗ

ಳಲ್ಲಿ ಇರುವಾಗಲೂ,೩-೯-೧೦-ಈಸ್ಥಾನಗಳಲ್ಲಿ ಪಾಪ ಗ್ರಹಗಳಿರುವಾಗಲೂ ಅಷ್ಟಮಶುದ್ಧಿ ಇರುವಾಗಲೂ ಮಗುವಿಗೆ ಚೌಲಕರ್ಮವನ್ನು ಮಾಡುವದುತ್ತಮ.

ಮೂ॥ಸೂನೋರ್ಮಾತರಿಗರ್ಭಿಣ್ಯಾಂಚೂಡಾಕರ್ಮನಕಾರಯೇತ್॥
ಯದಿಕುರ್ಯಾದ್ವಿಪತ್ತಿಸ್ಯಾದ್ದಂಪತ್ಯೋಶ್ಚ ಶಿಶೋಶ್ಚ ವಾ॥

ಟೀ॥ಮಗುವಿನ ತಾಯಿ ಗರ್ಭವತಿಯಾಗಿರುವಾಗ ಮಗುವಿಗೆ ಚೌಲಕರ್ಮವನ್ನು ಮಾಡಕೂಡದು, ಹಾಗೆ ಮಾಡಿದರೆ ತಾಯಿ ತಂದೆಗಳಿಗಾದರುಅಥವಾ ಮಗುವಿಗಾದರೂ ಅನಿಷ್ಟ ಸಂಭವಿಸುವದು

## ಅಕ್ಷರಾಭ್ಯಾಸ.

ಮೂ॥ ವುದಗರ್ಕೇಪಂಚಮೆಬ್ದೆ ಪಚಮೆಮಾಸಿಪಂಚಮೆದಿವಸಪಿ
ಚಬಾಲಾನಾಮಕ್ಷರಗ್ರಹಣಂಸ್ಮೃತಂ॥

ಟೀ॥ಬಾಲಕರಿಗೆ ೫ನೇ ವರ್ಷ, ೫ನೇಮಾಸ, ೫ನೇ ದಿವಸದಲ್ಲಿ ವಿದ್ಯಾಭ್ಯಾಸ ಮಾಡಿಸತಕ್ಕದ್ದು, ಆಕಾಲ ವುತ್ತರಾಣವಾಗಿದ್ದರೆ ಉತ್ತಮ.

ಮೂ॥ಉದಗ್ಗತೆಭಾಸ್ವತಿಪಂಚಮೆಬ್ದೆಪ್ರಾಪ್ಯೇಕ್ಷರಸ್ವೀಕರಣಂಶಿ
ಶೂನಾ। ಸರಸ್ವತೀಂವಿಘ್ನವಿನಾಯಕಂಚಗುಡೌದನಾದ್ಯೈರಭಿ
ಪೂಜ್ಯಕುರ್ಯಾತ್॥

ಟೀ॥ಸೂರ್ಯನು ವುತ್ತರಾಯನದಲ್ಲಿರುವಾಗ ಮಗುವಿಗೆ ೫ನೇವರುಷದಲ್ಲಿಸರಸ್ವತೀ ವಿಘ್ನೇಶ್ವರರಿಗೆ ಮಧುರವಾದ ಭಕ್ಷ್ಯಭೋಜ್ಯಾದಿಗಳಿಂದ ಪೂಜೆಯುಂಮಾಡಿ ವಿದ್ಯಾಭ್ಯಾಸವಂ ಮಾಡಿಸತಕ್ಕದ್ದು

ಶ್ಲೋ ॥ ಹಸ್ತಾದಿತ್ಯಸಮೀರ ಮಿತ್ರಪುರಜಿತ್ಪೌಷ್ಣಾಶ್ವಿಚಿತ್ರಾ
ಚ್ಯುತೆ । ಷ್ವಾರಾರ್ಕ್ಕರ್ಜವಾಸರಾದಿರಹಿತೇರಾಶೌಚರೇಚೋಭ
ಯೆ। ಪಕ್ಷಪೂರ್ಣ್ಣನಿಶಾಕರೆಪತಿಪದಂರಿಕ್ತಾಂವಿಹಾಯಾಷ್ಟಮೀಂ
ಷಷ್ಟೀಮಷ್ಟಮಶುದ್ಧಿಭಾಜಿಭವನೆಪ್ರೋಕ್ತಾಕ್ಷರಸ್ವೀಕೃತಿಃ॥

ಟೀ॥ ಹಸ್ತ, ಪುನ, ಸ್ವಾತೀ, ಅನೂ, ಆದ್ರಾ, ರೇವತೀ, ಅಶ್ವಿನಿ, ಚಿತ್ರಾ, ಶ್ರವಣ, ಈ ನಕ್ಷತ್ರಗಳಲ್ಲಿ ವುತ್ತಮ, ಆದಿತ್ಯ, ಅಂಗಾರಕ, ಶನಿವಾರಗಳನ್ನು, ಬಿಟ್ಟು ಮಿಕ್ಕ ವಾರಗಳ್ಲಿಯೂ ಚರ ದ್ವಿಸ್ವಭಾವ ರಾಶಿಗಳಲ್ಲಿಯೂ, ಶುಕ್ಲ ಕೃಷ್ಣ ಪಕ್ಷಗಳಲಿ ಚಂದ್ರನು

ಪೂರ್ಣನಾಗಿರುವಾಗಲು ವುತ್ತವು ಪಾಡ್ಯಮಿಗಳನ್ನೂ ರಿಕ್ತತಿಥಿಗಳನ್ನು ಅಷ್ಟಮಿಗಳನ್ನು, ಅಷಪಿಂಗಳನ್ನು, ಬಿಟ್ಟು ಅಷ್ಟಮಶುದ್ಧಿ ಇರುವ ಶುಭ ಲಗ್ನದಲ್ಲಿ ಅಕ್ಷರಸ್ವೀಕಾರವಮಾಡಿಸತಕ್ಕದ್ದು.

ಉಪನಯನಪ್ರಕರಣವು.

ಮೂ॥ ಉಕ್ತೇತ್ಗೌಗರ್ಭಾಷ್ಟವಾದ್ಯೇಕ್ತವರ್ಷೇವಿಪ್ರಾದೀನಾಮುಚ್ಯತೇವಕಾಂಜಿಬಂಧ। ಅದ್ರಾಯಸ್ತ್ರೀಧರ್ಮಪುತ್ರಾಖ್ಯಸಂಸ್ಥೇಚೆದ್ವಾಗೀಶೆಸ್ಯಾಚ್ಛೆಶೆರ್ಮೌಂಜಿಬಂಧಃ॥

ಟೀ॥ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಸೂತ್ರಕಾರರಿಂದ ಹೇಳಲ್ಪಟ್ಟಿರುವವಸಂತ ಗ್ರೀಷ್ಮ ಶರದೃತುಗಳಲ್ಲಯೂ, ಹುಟಿದ್ದುವೊದಲು ಬ್ರಾಹ್ಮರಿಗೆ ೮ನೇ ವರ್ಷಾ, ಕ್ಷತ್ರಿಯರಿಗೆ ೧೧ನೇಷರ್ಷವೈಶ್ಯರಿಗೆ ೧೨ನೇ ವರ್ಷಗಳಲ್ಲಯೂ ೨-೧೧-೭-೯-೫ ಈ ರಾಶಿಗಳಲ್ಲ ಬೃಹಸ್ಪತಿ ಇರುವಾಗ ಬ್ರಾಹ್ಮಣಾದಿ ಮೂರು ವರ್ಣದವರಿಗೆ ಉಪನಯನವಂ ಮಾಡತಕ್ಕದ್ದು.

ಮೂ॥ ಋಗ್ವೇದಾಧಿಪದಿರ್ಜೀವೋಯಜುರ್ವೆದಾಧಿಪಸ್ಸಿತಃ। ಸಾಮವೇದಾತಿಪೋಭೌಮಶ್ಶಶಿಜೋಥರ್ವನಾಯಕಃ॥

ಟೀ॥ ಋಗ್ವೇದಕ್ಕೆ ಬೃಹಸ್ಪತಿಯು, ಎಜುರ್ವೇದಕ್ಕೆ ಶುಕ್ರನು, ಸಾಮವೇದಕ್ಕೆ ಅಂಗಾರಕನು, ಅಧರ್ವಣ ವೇದಕ್ಕೆ ಬುಧನು, ಅಧಿಪತಿಗಳೆಂದುತಿಳಿಯತಕ್ಕದ್ದು.

ಮೂ॥ ಚಂದ್ರಾದಿತ್ಯೋತ್ತರಾಖ್ಯೆಶ್ರವಣವಸುವರುತ್ಯವಷ್ಟ್ರಪೌಷ್ಣಾರ್ಕಮಿತ್ರ। ಪ್ರಾಜೇಶಾರ್ಯೇಷುಸೌಮ್ಯಾಮರಗುರುಶಭೃಗ್ವಾರರಾಶ್ಯಂಶಕೇಷ್ವತ್ಯಕ್ತ್ವಾನಧ್ಯಾಯರಿಕ್ತಾ ಪಿತೃತಿಥಿಷುಯಮಾರಾರ್ಕಯುಕ್ತ್ವಾನ್ಯರಾಶೌ। ಗೋಜೋಪಾಂತ್ಯಾಜ ನಾಕರ್ಕಿತುಲಮಿಥುನಭೆಷ್ವಷ್ಟಮೆಧಾಮ್ನಿಶುದ್ಧೆ॥

ಟೀ॥ ಮೃ, ಪುನ, ಉತ್ತರ, ಉಷಾ, ಉಭಾ, ಅಶ್ವಿನೀ, ಶ್ರವಣ, ಧನಿಷ್ಠಾ, ಸ್ವಾತಿ, ಚಿತ್ರಾ, ರೇವ ಹಸ್ತಾ, ಅನೂ ರೋ, ಪುಷ್ಯ, ಈ ನಕ್ಷತ್ರಗಳಲ್ಲಯೂ ಬುಧನು ಗುರು, ಸೋಮ, ಶುಕ್ರ, ಅಂಗಾರಕ, ಇವರುಗಳ ರಾಶಿಗಳಲ್ಲಯೂ ಅಂಶಗಳಲ್ಲಿಯೂ ಉತ್ತಮ,ಅನಧ್ಯಾಯ ದಿನಗಳನ್ನು ರಿಕ್ತತಿಥಿಗಳನ್ನು, ಶ್ರಾದ್ಧ ದಿನಗಳನು, ಶನಿ,

ಅಂಗಾರಕ, ಸೂರ್‍ಯ, ಇವರುಗಳಿರುವರಾಶಿಗಳನ್ನೂ ಬಿಟ್ಟುವೃಷಭ ಮೇಷ, ಕುಂಭ, ಕನ್ಯಾ, ಕಟಕ, ತುಲಾ, ಮಿಥುನ ರಾಶಿಗಳಲ್ಲಿಯೂ ಉಪನಯನ ಲಗ್ನಕ್ಕೆ ಅಷ್ಟಮಶುದ್ಧಿಯಿರುವಾಗಲೂ ಉಪನಯನವನ್ನು ಮಾಡಿಸತಕ್ಕದ್ದು.

ಮೂ॥ ನೈರೃತ್ರ್ಯಹಸ್ತತ್ರಯೆ ವಿಷ್ಣುತ್ರಯೆಪೌಷ್ಣೋತ್ತರಾತ್ರಯೆ । ಧಾತ್ರ್ಯದ್ವಯೆತಿದಿಜ್ಯೇಜೆದಸ್ರಭೆಹ್ಯುತ್ತಮಂವ್ರತಂ॥

ಟೀ॥ ಅನೂರಾಧಾ, ಜ್ಯೇಷ್ಠಾ, ಮೂಲ, ಹಸ್ತ, ಚಿತ್ರಾ, ಸ್ವಾತಿ, ಶ್ರವಣಧನಿಷ್ಠಾ ಶತಭಿಷಕ್, ರೇವತೀ, ಉತ್ತ, ಉಷಾ, ಉಭಾ, ರೋಹಿಣೀ, ಮೃಗಶೀರ್ಷ, ಪುನ, ಪುಷ್ಯ, ಅಶ್ವಿನೀ, ಈ ನಕ್ಷತ್ರಗಳಲ್ಲಿ ವುಪನಯನ ವ್ರತಮಾಡುವದುತ್ತಮ.

ಮೂ॥ ಚಂದ್ರೊಮಾತಾಪಿತಾ ಸೂರ್‍ಯಃ ಪ್ರಾಣಾಶ್ಚೈವಬೃಹಸ್ಪತಿಃ ॥ ತಸ್ಮಾದ್ಬಲತ್ರಯಮ್ಬ್ರಾಹ್ಯಂಲಗ್ನವಾಗೊಚರೆಪಿವಾ ॥

ಟೀ॥ ಚಂದ್ರನು ತಾಯಿ, ಸೂರ್‍ಯನುತಂದೆಯು,ಬೃಹಸ್ಪತಿಯೆ ಪ್ರಾಣವು ಆದ್ದರಿಂದ ಈ ಮೂರು ಗ್ರಹಗಳು ಜಾತಕದಲ್ಲಿಯಾದರು ಗೋಚಾರದಲ್ಲಿಯಾದರೂ ಬಲಿಷ್ಟರಾಗಿರತಕ್ಕದ್ದು.

ಮೂ॥ ಶಾಖೆಶರವಿವರ್ಣೆಶಗುರೂಣಾಮ್ಬಲಪೂರ್ವಕಂ । ತಥಾಪ್ಯೇಷಾಂಗುರುಬಲಂಮುಖ್ಯಮಾಚಾರ್‍ಯಶಿಷ್ಯಯೋಃ ॥

ಟೀ॥ ಶಾಖಾಧಿಪತಿಯು, ಸೂರ್‍ಯನು, ವರ್ಣಾಧಿಪತಿಯು, ಗುರುವು, ಇವರುಗಳು ಬಲಿಷ್ಟರಾಗಿರಬೇಕು, ಆದರೂ ಆಚಾರ್‍ಯಶಿಷ್ಯರಿಬ್ಬರಿಗೂ ಮುಖ್ಯವಾಗಿ ಗುರುಬಲವಿರತಕ್ಕದ್ದು.

ಶ್ಲೋ॥ಉಕ್ತೆಪಿವರ್ಷೆನಭಲೀಗುರುಶ್ಚೆಚ್ಛಾಂತ್ಯಾಪ್ರಶಸ್ತಂ ವ್ರತಬಂಧಕರ್ಮ। ಅನುಕ್ತವರ್ಷೆಸಬಲಪ್ರದೊಪಿನೈವೈತಯೊರಬ್ಧಬಲಂಬಲೀಯಃ ॥

ಟೀ॥ ಬ್ರಾಹ್ಮಣಾದಿ ಮೂರು ವರ್ಣಗಳಿಗ ಹೇಳಲ್ಪಟ್ಟ ವರ್ಷಗಳಲ್ಲಿ ಒಂದುವೇಳೆ ಗುರುಬಲವಿಲ್ಲದಿದ್ದರು ಶಾಂತಿ ಮೊದಲಾದ ಕರ್ಮಗಳಿಂದ ಉಪನಯನವನ್ನು ಮಾಡಬಹುದು. ಹೇಳಲ್ಪಡದ ವರ್ಷಗಳಲ್ಲಿ ಬಲಿಷ್ಟನಾಗಿದ್ದರೂ ಉಪನಯನವನ್ನುಮಾಡಕೂಡದು, ಯಾತಕ್ಕಂದರೆ ಗುರುಬಲ, ವರ್ಷಬಲ, ಇವುಗಳೊಳಗೆ ವ

ರ್ಷಬಲವೇ ಶ್ರೇಷ್ಟವು.

ಮೂ॥ ಜನ್ಮಾಂತನಿಧನಸ್ಥೋಪಿಪೂಜಯಾಶುಭದೋಗುರುಃ ಉಕ್ತಾಬ್ದೇಚೇತನುಕ್ತೇತುನಶುಭೋಬಲವಾನಪಿ ।

ಟೀ॥ ಗುರುವು ಹೇಳಲ್ಪಟ್ಟವರ್ಷಗಳಲ್ಲಿ ಜನ್ಮ,.ದ್ವಾದಶ, ಅಷ್ಟಮಸ್ಥಾನಗಳಲ್ಲಿದ್ದರೂ ಗುರುಪ್ರೀತಿಕರವಾದ ಪೂಜಾದಿಶಾಂತಿಗಳಿಂದ ಶುಭಪ್ರದನಾಗುತ್ತಾನೆ. ಹೇಳಲ್ಪಡದ ವರ್ಷಗಳಲ್ಲಾದರೂ ಬಲಿಷ್ಠನಾಗಿ ಇದ್ದರೂಶುಭಪ್ರದನಲ್ಲ.

ಮೂ॥ ಕೋದಂಡಕರ್ಕಿಮೀನೇಷುಸ್ಥಿತೋಪಿ ಶುಭದೋಗುರುಃ
ತದಾಶಿಭಾಗಸಂಸ್ಥೋಪಿಶುಭದಃಪ್ರೋಚ್ಯತೇಸ್ವಯಂ॥

ಟೀ॥ ಗುರುವು ಕಟಕ, ಧನುಸ್ಸು, ಮೀನ ರಾಸಿಗಳಲ್ಲಿಯೂ ಅವುಗಳ ಅಂಶಗಳಲ್ಲಿಯೂ ಇದ್ದರೆ ಆ ರಾಶಿಗಳು ಹೇಳಲ್ಪಟ್ಟ ಜನ್ಮ, ಅಷ್ಟಮ, ದ್ವಾದಶರಾಶಿಗಳಾಗಿದ್ದರೂ ಶುಭಪ್ರದನಾಗುವನು.

ಮೂ ॥ ಸ್ವೋಚ್ಚಸ್ವಮಿತ್ರಸ್ವಗೃಹೇತ್ರಿಕೋಣೇಜೀವೋಗತೋಯ
ದ್ಯುಪನೀತಕಾಲೇ। ಶಿಶೋಶ್ಚತುರ್ಥೇನಿಧನೇತೃತೀಯೇಕರ್ಮಾಂತ್ಯ
ಸಂಸ್ಥೋಪಿಶುಭಪ್ರದಸ್ಯಾತ್ ॥

ಟೀ॥ ಉಪನಯನಕಾಲದಲ್ಲಿಗುರುವು ಉಚ್ಚ. ಸ್ವಕ್ಷೇತ್ರ, ಮೂಲತ್ರಿಕೋಣ, ಮಿತ್ರಕ್ಷೇತ್ರಗಳಲ್ಲಿದ್ದರೆ ಆ ರಾಶಿಗಳು ಜನ್ಮ, ಅಷ್ಟಮ, ದ್ವಾದಶ, ತೃತೀಯ ಚತುರ್ಥ, ದಶಮ,ಈ ಸ್ಥಾನಗಳಾಗಿದ್ದರೂ ಶುಭಪ್ರದನಾಗುತ್ತಾನೆ.

ಮೂ॥ದ್ವಿತೀಯಾಚತೃತೀಯಾಚಪಂಚಮೀಸಪ್ತಮೀತಥಾ।
ತ್ರಯೋದಶೀಚದಶಮೀಪ್ರಶಸ್ತಾಸ್ತಿಥಯೋವ್ರತೇ॥

ಟೀ॥ ಉಪನಯನದಲ್ಲಿ ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ತ್ರಯೋದಶೀ, ದಶಮೀ, ಈತಿಥಿಗಳು ಶ್ರೇಷ್ಠಗಳು.

ಮೂ॥ ಪೂರ್ವಪಕ್ಷಶ್ಶುಭಃಪ್ರೋಕ್ತಃ ಕೃಷ್ಣಶ್ಚಾಂತ್ಯತ್ರಿಕಂವಿನಾ । ಕೃಷ್ಣಪಕ್ಷೇಪಿತತ್ರ್ಯಂಶತ್ರಯೋದಶ್ಯಾಪಿಕೇಚನ॥

ಟೀ॥ ಉಪನಯನದಲ್ಲಿ ಶುಕ್ಲಪಕ್ಷವು ಶುಭಕರವು, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶಿ ಅಮಾವಾಸ್ಯೆ, ಈ ೫ ತಿಥಿಗಳನ್ನು ಬಿಟ್ಟು ಕಡಮೆ ಕೃಷ್ಣಪಕ್ಷದ ತಿಥಿಗಳು ಶುಭಕರಗಳು,ಇಲ್ಲಿ

ಕೆಲವರು ತ್ರಯೋದಶಿಯಲ್ಲಿಯೂ ಮಾಡಬಹುದೆಂದ,ಹೇಳುವರು.

ಮೂ॥ ಆಪಂಚಮ್ಯಾಸ್ತು ತಿಥಯಃಪರಾಸ್ಸ್ಯುರತಿನಿಂತಿತಾಃ ।
ನಿತ್ಯಾನಧ್ಯಾಯದಿವಸಾನ್ವರ್ಜಯೇದೌಪನಾಯನೇ॥

ಟೀ॥ ಕೃಷ್ಣಪಕ್ಷ ಪಂಚಮಿಯ ತರುವಾಯದ ತಿಥಿಗಳು ತ್ಯಾಜಗಳು, ಆದ್ದರಿಂದ ಆ ತಿಥಿಗಳನ್ನೂ, ಅನಧ್ಯಾಯಗಳನ್ನೂ ಬಿಟ್ಟು ಇತರ ತಿಥಿಗಳಲ್ಲಿಉಪನಯನ ಕರ್ಮವನ್ನುಮಾಡತಕ್ಕದ್ದೆಂದು ಭಾವವು.

ಅನಧ್ಯಾಯದಿನಗಳು.

ಮೂ॥ ನೈಮಿತ್ತಿಕಾಸ್ತ್ವನಧ್ಯಾಯಾಧೃತಿಪಾತಾರ್ಧಮಾರಿತಾಃ । ಅಷ್ಟಮ್ಯಾಂಚಚತುರ್ದಶ್ಯಾಂಪೂರ್ಣಿಮಾಯಾಂಕುಹೂತಿಥೌ । ಸಂಧ್ಯಯೋರ್ಗರ್ಜಿತೇನೈವಸ್ಯಾಧ್ಯಾಯಃಪ್ರತಿಗತ್ಸ್ಯಪಿ ಪೂರ್ಗರಾತ್ರೇಯಧಾ ಮೇಘಯತ್ರಗರ್ಜತಿವಾಸರ । ನವೇದಾಧ್ಯಯನಂಕಾರ್ಯಂಸರ್ವಧ್ಯೈವಮಹಾನಿಶಿ॥

ಟೀ॥ ವೈಧೃತಿ, ವ್ಯತೀಪಾತ, ಮಹಾಪಾತಈ ದಿವಸಗಳಅರ್ಧದಿನಗಳುಬಂಲರೂ, ಅಷ್ಟಮಿ, ಚತುರ್ದಶೀ ಪೂರ್ಣಿಮಾ ಅಮಾವಾಸ್ಯೆ ಪ್ರಾತಃಕಾಲ ಸಾಯಂಕಾಲಗಳಲ್ಲಿ ಮೇಘಗರ್ಜನೆ ಉಂಟಾದ ದಿನಗಳೂ ಪ್ರತಿಪತ್ತುಗಳು ಪೂರ್ವರಾತ್ರಿಯಲ್ಲ ಯಾವ ದಿವಸ ಮೇಘಗರ್ಜನೆಯಾಗುತ್ತದೋ ಆ ದಿನವೂ ಅರ್ಧರಾತ್ರಿಯೂ ಇವುಗಳಲ್ಲಿ ವೇದಾಧ್ಯಯನ ಮಾಡಕೂಡದು.

ಮೂ॥ ತ್ರಯೋದಶೀಸಪ್ತಮೀಚಚತುರ್ಥೀಕೆಲಯಾದಿ । ರಾತ್ರೌಸ್ಸೃಶತಿಮಾನೀಸ್ಯಾತ್ಪ್ರದೋಷೇತತ್ರಮಾನವಃ ॥

ಟೀ॥ ತ್ರಯೋದಶೀ ಸಪ್ತಮೀಚತುರ್ಥೀ॥ ಈ ಮೂರು ತಿಥಿಗಳೂ.ರಾತ್ರಿಯಲ್ಲಿಗಳಿಗೆವಾತ್ರಸಂಬಂಧಿಸಿದ್ದರೆಆದಿನಸಾಯಂಕಾಲ ಪ್ರದೋಷವು. ಆ ಕಾಲದಲ್ಲಿವೇದಾಧ್ಯಯನವಮಾಡಕೂಡದು

ಮೂ॥ ವಿನರ್ತುನಾವಸಂತೇನಕೃಷ್ಣಪಕ್ಷೆಗಳಗ್ರಹೇ । ಉಪನೀತಸ್ಯಾನಧ್ಯಾಯೇಪನಸ್ಸಂಸ್ಕಾರಮರ್ಹತಿ ॥

ಟೀ॥ ವಸಂತ ರುತುವನ್ನು ಬಿಟ್ಟು ಇತರ ರುತುವುಗಳಲ್ಲಿಯೂ ಕೃಷ್ಣಪಕ್ಷದಲ್ಲಿಯೂ, ಗಳಗ್ರಹ ತಿಥಿಯಲ್ಲಿಯೂ, ಅನಧ್ಯಾಯ

ತಿಥಿಗಳಲ್ಲಿಯೂ, ಉಪನಯನ ಮಾಡಲ್ಪಟ್ಟವನಿಗೆ ಪುನರುಪನ
ಯನ ಮಾಡತಕ್ಕದ್ದು.

ಮೂ॥ ವಿಚೈತ್ರವೈಶಾಖಸಿತತೃತೀಯೆಮಾಘೆಚಸಪ್ತಮ್ಯಥಫಾ
ಲ್ಗುಣೆಚನಾಂಜೀವ್ರತಂತಾಸುಶುಭಂವದಂತಿವಸಿಷ್ಟಗಾರ್ಗ್ಯಾದಿ
ಮುನೀಂದ್ರವರ್ಯಾಃ

ಟೀ॥ ಚೈತ್ರವೈಶಾಖಮಾಸಗಳಲ್ಲಿ ಶುಕ್ಲಪಕ್ಷದತೃತೀಯೆಗಳೂ
ಮಾಘಫಾಲ್ಗುಣಮಾಸದಲ್ಲಿ ಶುಕ್ಲಪಕ್ಷದ ಸಪ್ತಮೀ ಈ ತಿಥಿಗಳ
ಲ್ಲಿ ಉಪನಯನವಂಮಾಡುದುಶುಭಕರವೆಂದುವಶಿಷ್ಟಗಾರ್ಗ್ಯಾ
ದಿಮುನಿಗಳಿಂದ ಹೇಳಲ್ಪಟ್ಟಿದೆ.

ಮೂ ॥ ಆಚಾರ್ಯಕಾವ್ಯಸೌಮ್ಯಾನಾಂವಾರಾಶ್ಯಸ್ತಾಶುಭೋದ
ಯೆ । ವಾರೌತುಮಧ್ಯಫಲದಾವಿತರೌವ್ರತೇ॥

ಟೀ॥ ಶುಭಕಾರ್ಯದಲ್ಲಿ ಬೃಹಸ್ಪತಿ, ಶುಕ್ರ, ಬುಧವಾರಗಳು ಪ್ರ
ಶಸ್ತಗಳು, ಆದಿತ್ಯ ಸೋಮವಾರಗಳು ಮಧ್ಯಮಗಳು, ಅಂಗಾರ
ಕಶನಿವಾರಗಳು ಅಧಮಗಳು.

ಶ್ಲೋ॥ ಮಂದವಾರೆವಾಂಜಬಂಧಂಯಃ ಕುರ್ಯಾದ್ವಟುನಾಶ
ನಂ ॥ ಅಂಗಾರಕೆವಾಂಜಿಬಂಧಂಯಜಮಾನೊಮೃತೋಭವೇತ್॥

ಟೀ॥ ಶನಿವಾರದಲ್ಲಿಉಪನಯನವಮಾಡಿದರೆವಟುನಾಶವಾಗುತ್ತಾ
ನೆಮಂಗಳವಾರದಲ್ಲಿ ಮಾಡಿದರೆಯಜಮಾನನು ಸಾಯುತ್ತಾನೆ.

ಮೂ॥ ಸಹಸ್ರಗುಣಯುಕ್ತೇಪಿಮಂದವಾರೆಕೆ ಜೆತಥಾ । ಶುಭ
ಕರ್ಮನಕುರ್ವೀತಕುರ್ಯಾಚ್ಚೆನ್ಮರಣಂಧ್ರುವಂ ॥

ಟೀ॥ ಸಾವಿರಗುಣಗಳಿದ್ದರೂ ಶನ್ಯಂಗಾರಕವಾರಗಳಲ್ಲಿ ಶುಭ
ಕರ್ಮಗಳನ್ನು ಮಾಡಕೂಡದು ಹಾಗೆ ಮಾಡಿದರೆಮರಣ ಸಂಭ
ವಿಸುತ್ತದೆ.

ಮೂ॥ ವಿಭಜ್ಯಾಹ್ನಃಪ್ರಮಾಣಸ್ತುತತಾದ್ಯಂಶೆಪಿದೈವಿಕಂ
ದ್ವಿತೀಯೆಮಾನುಷಂಕಾರ್ಯಂತೃತೀಯಾಂಶೇಪಿಪೈತೃಕಂ॥

ಟೀ॥ ಹಗಲನ್ನು ಮೂರುಭಾಗಮಾಡಿ ೧ನೇ ಭಾಗದಲ್ಲಿ ದೈವ
ಕಾರ್ಯವನ್ನು ೨ನೇಭಾಗದಲ್ಲಿ ಮನುಷ್ಯನ ಕಾರ್ಯವನ್ನೂ ೩ನೇಭಾ
ಗದಲ್ಲಿ ಪಿತೃಕಾರ್ಯಗಳನ್ನು ಮಾಡತಕ್ಕದ್ದು.

ಮೂ॥ ಏಕಸ್ಮಿನ್ಕೇಂದ್ರಗೇಜೀವೇಶುಕ್ರೇವಾಪಾಪಕೇಂದ್ರಜಾಃ। ದೋಷಾವಿನಾಶಮಾಯಾಂತಿಪಾಪಂಭಾಗೀರಥೀಜಲಾತ್॥

ಟೀ॥ ಒಬ್ಬ ಬೃಹಸ್ಪತಿಯಾದರೂ, ಒಬ್ಬ ಶುಕ್ರನಾದರೂಕೇಂದ್ರಸ್ಥಾನಗಳಲ್ಲಿದ್ದರೆ ಗಂಗಾನದಿಯು ಪಾಪಂಗಳಂನು ಪರಿಹರಿಸುವಂತೆ ಪಾಪಗ್ರಹಗಳುಕೇಂದ್ರಸ್ಥಾನಗಳಲ್ಲಿಶೇರುವದರಿಂದುಂಟಾಗುವ ದೋಷಗಳಂನುಹೋಗಲಾಡಿಸುವನು.

ಮೂ॥ ಮಿತ್ರರಾಶಿಗತೆಜೀವೆಶುಕ್ರೇವಾಪಾಪಕೇಂದ್ರಜಾಃ । ಹರೇರ್ನಶ್ಯಂತಿದೋಷಾಶ್ಚಸ್ಮರಣಾದಘರಾಶಯಃ ॥

ಟೀ ॥ ಗುರುವಾದರೂ, ಶುಕ್ರನಾದರೂ, ಮಿತ್ರಕ್ಷೇತ್ರದಲ್ಲಿದ್ದರೆ ಪಾಪಗ್ರಹಗಳು ಕೇಂದ್ರಗಳಲ್ಲಿ ಇರುವ ದೋಷಗಳನ್ನು, ಹರಿಸ್ಮರಣೆಯು ಪಾಪಗಳನ್ನು ಹರಿಸುವಂದದಿ, ಹೋಗಲಾಡಿಸುತ್ತಾನೆ.

ಶ್ಲೋ॥ ಅತಿಮಿತ್ರನವಾಂಶಸ್ಥೆಶಾಖೆಶೆಸತ್ರಿಕೋಣಗೆ । ದೋಷೋವಿನಾಶಮಾಯಾಂತಿಗ್ರೀಷ್ಮೆಷುಸಲಿಲಂಯಥಾ ॥

ಟೀ॥ ಶಾಖಾಧಿಪತಿಯು ಅತಿಮಿತ್ರನವಾಂಶದಲ್ಲಿದ್ದರೂ ಪಂಚಮತ್ರಿ ಕೋಣಗಳಲ್ಲಿದ್ದರೂಗ್ರೀಷ್ಮಕಾಲದಲ್ಲಿ ನೀರುಗಳೊಣಗಿ ಹೋಗುವಂತೆ ಸಮಸ್ತದೋಷಗಳು ನಾಶವನ್ನುಹೊಂದುತ್ತಾವೆ.

ಮೂ॥ ಯತ್ರೈಕಾದಶಗಸ್ಸೂರ್ಯಶ್ಚಂದ್ರೋವಾಪೀತರಾಶಿಗಃ। ಹಂತಿಲಗ್ನೋದ್ಭವಂದೋಷಂಪೂತನಾಮಿವಕೇಶವಃ ॥

ಟೀ॥ ಲಗ್ನಕ್ಕೆ ೧೧ ರಲ್ಲಿ ಸೂರ್ಯನಿದ್ದರು ಚಂದ್ರನು ಅತಿಮಿತ್ರನವಾಂಶದಲ್ಲಿಇದ್ದರೂ, ಈ ಯೋಗವು ಬಾಲಕೃಷ್ಣನು ಪೂತನೆಯನ್ನು ಕೊಂದಂತೆ ಲಗ್ನದಿಂದ ಹುಟ್ಟಿದ ಸಮಸ್ತದೋಷಗಳನ್ನು ಹರಿಸುತ್ತದೆ.

ಮೂ ॥ ಅತಿಮಿತ್ರಗತಸ್ಸೂರ್ಯಶ್ಚಂದ್ರೋವಾಯದಿಲಾಭಗಃ । ಹಂತಿದೋಷಚಯಸ್ತದ್ವತ್ಪಾಪಸಂಘಂಹರೆಸ್ಮೃತಃ ॥

ಟೀ॥ ಅತಿಮಿತ್ರಕ್ಷೇತ್ರದಲ್ಲಿರುವ ರವಿಯು ೧೧ ರಲ್ಲಿರುವಚಂದ್ರನು ಸಹಹರಿಸ್ಮರಣವು ಪಾಪವನ್ನು ಹೋಗಲಾಡಿಸಿದಂತೆ ದೋಷಸಮೂಹವನ್ನು ಹರಿಸುತ್ತಾರೆ.

ಮೂ॥ ತ್ರಿಷಷ್ಠಲಾಭಗೋಭೌಮಃಶಶೀವಾಯದಿತುಂಗಗಃ । ಸ

ರ್ವದೋಷಚಯಂಹಂತಿಪಾಪಂಪಂಚಾಕ್ಷರೀಯಥಾ ॥

ಟೀ॥ ೩-೬-೧೧ಈ ಸ್ಥಾನಗಳಲ್ಲಿರುವ ಕುಜನು ಉಚ್ಚಕ್ಷೇತ್ರದಲ್ಲಿರುವಚಂದ್ರನುಸಹ ಪಂಚಾಕ್ಷರೀ ಮಂತ್ರವು ಪಾಪಗಳನ್ನು ಹರಿಸುವಂತೆ ಸರ್ವದೋಷಗಳನ್ನು ಹರಿಸುತ್ತಾರೆ.

ಮೂ॥ ಸ್ವಕಮಿತ್ರಗತೋಭೌಮಶ್ಶಶೀವಾಯದಿಲಾಭಗೇ। ಹಂತಿ ದೋಷಚಯಂಸರ್ವಂಪಿನಾಕೀತ್ರಿಪುರಂಯಥಾ ॥

ಟೀ॥ ಮಿತ್ರಕ್ಷೇತ್ರದಲ್ಲಿರುವ ಕುಜನು ಲಾಭದಲ್ಲಿರುವ ಚಂದ್ರನುಸಹ ತ್ರಿಪುರವನ್ನು ಈಶ್ವರನುಹೊಡದಂತೆ ಸರ್ವದೋಷಗಳನ್ನು ಪರಿಹರಿಸುತ್ತಾರೆ.

ಮೂ॥ ಲಗ್ನಾತ್ತ್ರಿಷಡ್ಗಸ್ಸೂರ್ಯಸ್ಸ್ವತುಂಗಸ್ಥೋಭವೇದ್ಯದಿ ನಾಶಯತ್ಯಖಿಲಾನ್ದೋಷಾಂಸ್ಸ್ವೋದಯಾತ್ತಿಮಿರಂಯಥಾ ॥

ಟೀ॥ ಉಪನಯನ ಲಗ್ನಕ್ಕೆ ೩-೬ ಈ ಸ್ಥಾನಗಳಲ್ಲಿ ಸೂರ್ಯನು ಉಚ್ಚಗತನಾಗಿದ್ದರೆ ಸೂರ್ಯೋದಯದಲ್ಲಿ ಅಂಧಕಾರದಂತೆ ಸರ್ವದೋಷಗಳು ನಾಶವನ್ನು ಹೊಂದುತ್ತವೆ.

ಮೂ॥ ಕೇಂದ್ರತ್ರಿಕೋಣಗಃಸೌಮ್ಯೋ ಮಿತ್ರರಾಶ್ಯಂಶಗೋಯದಿ। ಪಾಪಕೇಂದ್ರಕೃತಾನ್ದೋಷಾನ್ಹಂತಿಭಂಕೆಸರೀಯಥಾ॥

ಟೀ॥ ಬುಧನು ಲಗ್ನದ ಕೇಂದ್ರತ್ರಿಕೋಣಗಳಲ್ಲಾದರೂ ಮಿತ್ರರಾಶ್ಯಂಶಗಳಲ್ಲಿಯಾದರೂ ಇದ್ದರೆ ಈ ಯೋಗವು ಕೇಂದ್ರದಲ್ಲಿಪಾಪಗ್ರಹಗಳಿರುವದೋಷಗಳನ್ನು ಸಿಂಹವು ಆನೆಗಳನ್ನು ಹೊಡೆಯು ವಂತೆ ನಾಶ ಮಾಡುವದು.

ಮೂ॥ ಲಗ್ನಾದಿ ಪ್ರೊನಾಂಶಪತಿರ್ಬಲಿಷ್ಠಃಕೇಂದ್ರತ್ರಿಕೋಣೆ ತ್ರಿಭವೆಸ್ಥಿತೋಪಿ। ಲಗ್ನಸ್ಯಕೇಂದ್ರಷ್ವಶುಭಸ್ಥದೋಷಾನ್ನಿಹಂತಿಸೌಮ್ಯೈರ್ಯುತವೀಕ್ಷಿತೋವಾ ॥

ಟೀ॥ ಲಗ್ನಾಧಿಪತಿಯಾದರೂ ನವಾಂಶಾಧಿಪತಿಯಾದರೂ ಬಲಿಷ್ಠನಾಗಿ ೧-೩-೫-೯-೧೦ ಈ ಸ್ಥಾನಗಳಲ್ಲಿಶುಭಗ್ರಹಗಳಿಂದ ನೋಡಲ್ಪಟ್ಟವನಾಗಿಯೂ ಕೂಡಿದವನಾಗಿಯೂ ಇದ್ದರೆ ಲಗ್ನಕ್ಕಿಂತ ಅನ್ಯಕೇಂದ್ರಗಳಲ್ಲಿ ಪಾಪಗ್ರಹಗಳಿರುವ ದೋಷಗಳನ್ನು ಹರಿಸುತ್ತಾರೆ.

ಮೂ॥ ವಿದ್ಯಾಂವಟೋರ್ವಿನಶ್ಯೇತಾಂಮಿಂದ ಭೌವಾದ್ವಿತೀಯ
ಗೌ । ಅನ್ಯೋನ್ಯಮಥವಾಷ್ಟಸ್ಥೌದ್ವಾದಶಸ್ಥೌತುಬಂಧನಂ॥

ಟೀ॥ ಉಪನಯನಕ್ಕೆ ಅಂಗಾರಕ ಶನಿಗಳು ದ್ವಿತೀಯಸ್ಥಾನ ದಲ್ಲಿದ್ದರ ವಟುವಿಗೆ ವಿದ್ಯಾ ನಾಶವನ್ನು ಮಾಡುತ್ತಾರೆ, ಅವರುಗ ಳೊಬ್ಬರಿಗೊಬ್ಬರಿಗೊಬ್ಬರು ಅಷ್ಟಮದಲ್ಲಾದರೂದ್ವಾದಶದಲ್ಲಾ ದರೂ ಇದ್ದರೆ ಆ ವಟುವಿಗೆಬಂಧನವನ್ನುಂಟು ಮಾಡುತ್ತಾರೆ.

ಮೂ॥ ಕುಜಾರ್ಕಜೌ ಬಂಧನದೌವ್ಯಯಸ್ಥೌವಿದ್ಯಾಪ್ರದೌ
ಪಾಥನ ಬಂಧಸಂಸ್ಥೌ । ವ್ಯಯಸ್ಥಮರ್ಕಂಕ್ಷಿತಿಜೋವಿಪಶ್ಯ
ನ್ನಾ ಚಾರ್ಯಮಂಧಂಕುರುತೆಬಲಾಢ್ಯಃ ॥

ಟೀ॥ ಕುಜಶನಿಗಳು ೧೨ನೇ ಸ್ಥಾನದಲ್ಲಿದ್ದರೇ ವಟುವಿಗೆ ಬಂ ಧನ ಉಂಟಾಗುವದು, ಅವರುಗಳು ೨-೪ ಈ ಸ್ಥಾನಗಳಲ್ಲಿದ್ದರೇ ವಿ ದ್ಯೆಯನ್ನುಂಟು ಮಾಡುತ್ತಾರೆ. ಅವರಲ್ಲಿ ಬಲಿಷ್ಟನಾದಅಂಗಾರಕ ನು ೧೨ನೇ ರಾಶಿಯಲ್ಲಿ ಇರುವಸೂರ್ಯನನ್ನು ಬ್ರಹ್ಮೋಪದೇಶವಮಾ ಡುವ ಗುರುವನ್ನು ಕುರುಡನನ್ನಾಗಿ ಮಾಡುತ್ತಾನೆ.

ಮೂ॥ ವ್ಯಯಸ್ಥಂರವಿಮಾರ್ಕಿರ್ವಾಸ್ವದೃಷ್ಟ್ಯಾಯದಿಪಶ್ಯತಿ
ಶಿಷ್ಯವಿದ್ಯಾಂಬಲೀಹನ್ಯಾದ್ವಿಬಲೀರೋಗದಃಶಿಶೋಃ ॥

ಟೀ॥ ದ್ವಾದಶಸ್ಥಾನದಲ್ಲಿರುವ ಸೂರ್ಯನನ್ನು ಶನಿಬಲಿಷ್ಠನಾಗಿ ತನ್ನ ೩-೭೧೦ ಈ ದೃಷ್ಟಿಗಳಿಂದ ನೋಡಿದರೆ ಶಿಷ್ಯನಿಗೆ ವಿದ್ಯಾ ನಾಶವನ್ನು ಮಾಡುತ್ತಾನೆ ದುರ್ಬಲನಾಗಿ ನೋಡಿದರೆ ಶಿಶುವಿಗೆ ರೋಗವನ್ನುಂಟುಮಾಡುತ್ತಾನೆ.

ಲಗ್ನ ಚಂದ್ರ ಫಲವು—ಪಾಪಿಷ್ಠದಲ್ಲಿ.

ಮೂ॥ ಪ್ರಾಲೇಯರಶ್ಮಯದಿಲಗ್ನ ಸಂಸ್ಥೆವಲಕ್ಷಪಕ್ಷೇಪಿಭವೇ
ತ್ಸರೋಗೀ। ಮತೀಚಸೌಮ್ಯಗ್ರಹ ವರ್ಗಗೇಪಿಖಲೋಪಿನಿಸ್ವಶ್ರು
ತಿಕರ್ಮಹೀನಃ ॥

ಟೀ॥ ಶುಕ್ಲ ಪಕ್ಷದಲ್ಲಿಯೂ ಚಂದ್ರನುಲಗ್ನ ದಲ್ಲಿದ್ದರೂ ಶುಭಗ್ರ ಹಷಡ್ವರ್ಗದಲ್ಲಿದ್ದರೂಆ ಹುಡುಗನನ್ನು ರೋಗಿಷ್ಠನನ್ನಾಗಿಯೂ ದುಷ್ಟನನ್ನಾಗಿಯೂದರಿದ್ರನನ್ನಾಯೂ, ಕರ್ಮಹೀನನಾಗಿಯೂ ಮಾಡುತ್ತಾನೆ.

ಕಾಶ್ಯಪದಲ್ಲಿ.

ಮೂ॥ಸ್ವೋಚ್ಚೆ ಸಂಸ್ಥೋಪಿಶೀತಾಂಶುರ್ವ್ರತಿನಂಯದಿಲಗ್ನಗಃ ತಂಕರೊತಿಶಿಶುಂನಿಸ್ವಂಸತತಂಕ್ಷಯರೋಗಿಣಂ॥

ಟೀ॥ ಚಂದ್ರನು ಉಚ್ಚಸ್ಥಾನದಲ್ಲಿದ್ದರೂ ಲಗ್ನದಲ್ಲಿದ್ದರೂ ವಟುವನ್ನು ಆಲಾಗಾಯಿತು ದರಿದ್ರನನ್ನಾಗಿಯೂ, ಕ್ಷಯರೋಗಿಯನ್ನಾಗಿಯೂ ಮಾಡುತ್ತಾನೆ.

ಇಲ್ಲಿ ಗರ್ಗಮುನೀಶ್ವರನು ಮಾಡಿದ ವ್ಯವಸ್ಥೆ ಯೇನಂದರೆ

ಮೂ ॥ ಪ್ರಾಲೇಯರಶ್ಮಿರ್ಯದಿಲಗ್ನ ಸಂಸ್ಥೋ ವಲಕ್ಷಪಕ್ಷಶುಭಕೃನ್ನಿತಾಂತಂ । ಸೋಪೀಹಸೌಮ್ಯಗ್ರಹ ವರ್ಗಗಶ್ಚೆದ್ಬಹ್ವಾಯುರಾರೊಗ್ಯಸುಖಾನಿದದ್ಯಾತ್ ॥

ಟೀ॥ ಶುಕ್ಲಪಕ್ಷದ ಚಂದ್ರನು ಉಪನಯನ ಲಗ್ನದಲ್ಲಿದ್ದರೇ ಶುಭವನ್ನುಂಟು ಮಾಡುವನು, ಮತ್ತು ಶುಭಗ್ರಹಷಡ್ವರ್ಗದಲ್ಲಿದ್ದರೇ ವಟುವಿಗೆವಿಶೇಷವಾಗಿಆಯುಸ್ಸು, ಆರೋಗ್ಯಐಶ್ವರ್ಯ, ಸಾಖ್ಯ, ಇವುಗಳನ್ನು ಕೊಡುವನು.

ಲಗ್ನದೋಷಕ್ಕೆ ಭಂಗವುಗಾರ್ಗ್ಯ.

ಮೂ ॥ ಲಗ್ನಕುಳೀರಗುರುಚಂದ್ರಸಂಸ್ಥೆಮೆಷೆಸಿತಜ್ಞಾವೃಷಭೆಪತಂಗೆ।ಶನ್ಯೆಸ್ತ್ರಿಷಷ್ಠಾಯಗತೆಗ್ರಹೈಸ್ಯಾದ್ಯಸ್ಯೋಪನೀತಸ್ಸಮುಪ್ಯೈತಿ ಲಕ್ಷ್ಮೀ॥

ಟೀ॥ ಕಟಕವು ಲಗ್ನವಾಗಿದ್ದು ಅಲ್ಲಿ ಗುರುಚಂದ್ರರು ಕಲತಿರುವಾಗಲೂ, ಶುಕ್ರಬುಧರು ಮೇಷಲಗ್ನ ದಲ್ಲಿ ಇರುವಾಗಲೂ, ವೃಷಭಲಗ್ನದಲ್ಲಿ ಸೂರ್‍ಯನಿರುವಾಗಲೂ, ಮಿಕ್ಕ ಶನಿ ಅಂಗಾರಕ ಮೊದಲಾದವರು ೩-೬-೧೧ ಈ ಸ್ಥಾನದಲ್ಲಿರುವಾಗಲೂ,ಉಪನಯನ ಮಾಡಲ್ಪಟ್ಟ ಹುಡುಗನು ಐಶ್ವರ್‍ಯವನ್ನು,ಹೊಂದುವನು.

ಮೂ॥ ಕೆಂದ್ರೆಮರೆಜ್ಯೆಭವನೆಪತಂಗೆ ಚಂದ್ರೆಶುಭಾಂಶಭವತೀತೃತೀಯೆ । ವಾಗೀಶ್ವರೀತಸ್ಯಮುಖೆನ ಸಂತಿಪದ್ಮಾಯಥಾಪದ್ಮವನೆಸದಾಚ,

ಟೀ॥ ಗುರುವುಉಪನಯನ ಲಗ್ನಕ್ಕೆ ೧-೪-೭-೧೦ನೇ ಸ್ಥಾನಗಳಲ್ಲಿದ್ದರೂ ಸೂರ್‍ಯನು ಉಪನಯನ ಲಗ್ನದಲ್ಲಿದ್ದರೂ ಚಂದ್ರ

ನು, ಶುಭನವಾಂಶವನ್ನು ಪಡದು ೩ನೇ ಸ್ಥಾನದಲ್ಲಿದ್ದರೂ ಅವ ಟುವಿನ ಮುಖದಲ್ಲಿ ಸರಸ್ವತಿಯುಯಾವಾಗ್ಯೂ ಕಮಲವನದ ಲ್ಲಿ ಲಕ್ಷ್ಮಿಯಂತೆ ವಾಸಮಾಡುವಳು.

ಮೂ॥ ಲಗ್ನೇಸಿತಃಕರ್ಮಣಿದೇವಪೂಜ್ಯೋಭವೇದ್ರವಿಶ್ಚೇತ್ಶಶಶ್ಚ ಭಾಂಶೆ। ಹೃದಿಸ್ಥಶಾಸ್ತ್ರಾಣ್ಯಪಿವರ್ಧಯಂತಿಪ್ರಯಕ್ಷಣೆನೈವಯಥೆಂದಿರಯಾಣಿ॥

ಟೀ॥ ಉಪನಯನ ಲಗ್ನದಲ್ಲಿ ಶುಕ್ರನು, ಕರ್ಮಸ್ಥಾನದಲ್ಲಿ ಗುರುವು, ಶುಭನವಾಂಶದಲ್ಲಿಸೂರ್ಯನೂಚಂದ್ರನುಇವರುಗಳುಇದ್ದರೆ ವಟುವಿನಹೃದಯದಲ್ಲಿ ಸರ್ವಶಾಸ್ತ್ರವೂವೃದ್ಧಿಹೊದುವವು.

ಮೂ॥ ಭೃಗೌಮೀನೇವೃಷೇವಾಪಿಜೀವೇಕೇಂದ್ರತ್ರಿಕೋಣಗೆ। ಕರ್ಕಿಚಾಪಝಷೇತಸ್ಮಿನ್ಯೋಗಃಶುಭತರಾಹ್ವಯಃ॥

ಟೀ॥ಶುಕ್ರನು ಮೀನ, ವೃಷಭ ಈರಾಶಿಗಳಲ್ಲಿದ್ದರೂ ಬೃಹಸ್ಪತಿಯುಕೇಂದ್ರತ್ರಿಕೋಣದಲ್ಲಿದ್ದರೂ ಅಥವಾಕಟಕ ಧನುಸ್ಸು ಮೀನಗಳಲ್ಲಿದ್ದರೂವಟುವಿಗೆ ಅತ್ಯಂತ ಶುಭವೆಂಬಯೋಗಉಂಟಾಗುವದು.

ಮೂ॥ಜೀವಃಕಾವ್ಯೋಪಿವಾಯಸ್ಯಮೌಂಜೀಬಂಧನಲಗ್ನಗಃ। ತಸ್ಯವಿದ್ಯಾಪ್ರಭೂತಾಸ್ಯಾದ್ವಿವಾಹಶ್ಚಾಚಿರಾದ್ಭವೇತ್॥

ಟೀ॥ಗುರುವಾದರೂ ಶುಕ್ರವಾದರೂ ಉಪನಯನ ಲಗ್ನದಲ್ಲಿದ್ದರೆ ವಟುವಿಗೆ ಸಕಲ ವಿದ್ಯೆಗಳುಬರುವವು, ಶೀಘ್ರವಾಗಿ ಅವನಿಗೆ ಮದುವೆಯೂ ಆಗುವದು.

ಮೂ॥ ದೋಷೇಬಲವಿಹೀನೇಚಗುಣೆಬಹುಬಲೈರ್ಯುತೇ। ಅಪವಾದಬಲೈರ್ದೋಷಪ್ರಧ್ವಂಸಾಭಾವಕಶುಭಃ॥

ಟೀ॥ದೋಷಗಳು ಬಲಹೀನವಾಗಿಯೂ, ಗುಣಗಳು ಬಲಿಷ್ಠವಾಗಿಯೂಇದ್ದರೆ ವಿಶೇಷ ಶಾಸ್ತ್ರದಿಂದ ಉಪನಯನ ಮುಹೂರ್ತಕ್ಕೆ ವಿಶೇಷ ಶುಭವುಂಟಾಗುವದು.

ಮೂ ॥ ಕರ್ತುರ್ಭಾರ್ಯಾಗರ್ಭಿಣೀಚೇದ್ವ್ಯಾಸ್ತುಕರ್ಮೋಪನಾಯನಂ।ಷಣ್ಮಾಸಾತ್ಪರತಸ್ಸೋಪಿನಕುರ್ಯಾದಿತಿಶೌನಕಃ॥

ಟೀ॥ಪುರುಷನು ತನ್ನಹೆಂಡತಿಯು ಗರ್ಭವತಿಯಾದ ೬ತಿಂಗಳ

ಮೇಲೆಗ್ರಹನಿರ್ಮಾಣವನ್ನಾದರೂ, ಮಗನ ಉಪನಯನವಾದ ರೂಮಾಡಕೂಡದುಳಿತಿಂಗಳವರಿಗೆ ಮಾಡಬಹುದೆಂದುತಾತ್ಪರ್ಯ

ಮೂ॥ರಜಸ್ವಲಾಪಟೋರ್ಮಾತಾಇಡಾವಾಚನತಃಪುರಾ।
ನೈವೋಪನಯನಂಕಾರ್ಯಂಪರತಶ್ಚೇಚ್ಛಭಂಜಗುಃ॥

ಟೀ॥ನಾಂದಿ ಆವಾಹನಕ್ಕೆ ಮುಂದಾಗಿಯೇ, ಹುಡುಗನ ತಾಯಿ ರಜಸ್ವಲೆಯಾದರೆ ಉಪನಯನವಾಡಕೂಡದು, ನಾಂದಿಯಾದ ತರುವಾಯವಾದರೆ ಉಪನಯನ ಮಾಡಬಹುದು.

## ರಜಸ್ವಲಾದೋಷಭಂಗವು.

ಮೂ॥ಅಲಬ್ಧೇಸುಮುಹೂರ್ತಸ್ಯೆರಜೋದೋಷೇಚಮಾತರಂ।
ಸ್ತ್ರೀಯಂಸಂಪೂಜ್ಯತತ್ಕುರ್ಯಾನ್ಮೌಂಜೀಬಂಧನಮುತ್ತಮಂ॥

ಟೀ॥ ಉಪನಯನಮುಹೂರ್ತಕ್ಕೆರಜಸ್ವಲಾದೋಷವು ಪ್ರಾಪ್ತವಾಗಿದೆ ಇರುವಾಗ ತಾಯನ್ನು ಪೂಜಿಸಿಶುಭಕರ್ಮವನ್ನು ಮಾಡತಕ್ಕದ್ದು.

ಮೂ॥ಶಾಖಾಧಿಪತಿವಾರಶ್ಚ ಶಾಖಾಧಿಪಬಲಂಶಿಶೋಃ।
ಶಾಖಾಧಿಪತಿಲಗ್ನಂಚದುರ್ಲಭಂತ್ರಿತಯಂವ್ರತೇ॥

ಟೀ॥ಉಪನಯನದಲ್ಲಿ ಮಗುವಿನ ಶಾಖಾಧಿಪನ ವಾರವೂ, ಅವನ ಬಲವು, ಅವನಲಗ್ನವು, ಈಮೂರೂ ದುರ್ಲಭವಾಗಿರ್ಪುದು.

ಮೂ॥ ನನ್ಯೈದನಂನ್ಯೈಧನಶುದ್ಧಿಲಗ್ನಂನನ್ಯೈಧನರ್ಕ್ಷಂನಚತಂನವಾಂಶಂ ॥ ನನ್ಯೈಧನೆಶೋನಚವಾಂತ್ಯಕೆಶೋಲಗ್ನೆಪ್ರಶಸ್ತಂಬಲುರಾತ್ರಿರಾಧಃ॥

ಟೀ॥ಉಪನಯನಲಗ್ನವು ವಟುವಿನಜನ್ಮರಾಸಿಗೆ ಅಷ್ಟಮವಾಗಿರಕೂಡದು, ಅಷ್ಟಮಾಂಶವಾಗಿಯೂಇರಕೂಡದು ನೈಧನತಾರೆಯಾಗದು, ಉಪನಯನಲಗ್ನಕ್ಕೆ ಅಷ್ಟಮದಲ್ಲಿಯೂ ದ್ವಾದಶದಲ್ಲೂ ಚಂದ್ರನಿರಕೂಡದು ಏವಂಚಲಗ್ನವು ಅಷ್ಟಮಶುದ್ಧಿಯುಕ್ತದಾಗಿಯು ಶುಭಗ್ರಹಸಹಿತವಾಗಿಯೂ ಇರಬೇಕು.

## ಕೇಂದ್ರದಲ್ಲಿರುವಸೂರ್ಯಾದಿ ಪಾಪಗ್ರಹಗಳ ಫಲವು.

ಮೂ॥ಕುಜೆಚೆತ್ಕೇಜಿತೋದೋಷಶ್ಶಿಷ್ಯಾಚಾರ್ಯ ವಿನಾಶನಂ।
ಮದೆತ್ರುರುಧಿರೋದೋಷಃಕರೋತಿಮಹತೀಂಗದಾಂ।

ರಾಹೌರಂಧ್ರಾಖ್ಯಯೊದೋಷಶ್ಶಿಶೋರ್ಮಾತೃವಿನಾಶನಂ।
ಕೇತೌಕೇಂದ್ರೇತೂಗ್ರದೋಷೋವಿದ್ಯಾಯುರ್ಧನನಾಶನಂ॥
ಪಂಚದೋಷೇತರಂಲಗ್ನಶುಭದಂಚೋಪನಾಯನೆ।
ದ್ವಾದಶಸ್ಥಂರವಿಂಭೌಮಃಪಶ್ಯನ್ನಾಚಾರ್ಯನೇತ್ರಹೃತ್ ॥

ಟೀ ॥ ಉಪನಯನಲಗ್ನಕ್ಕೆ ಕೇಂದ್ರಗಳಲ್ಲಿ ಅಂಗಾರಕನಿದ್ದರೆ ಕೂಜಿತವೆಂಬದಾಗಿ ಒಂದುದೋಷ ಉಂಟಾಗುತ್ತದೆ. ಅದುಗುರು ಶಿಷ್ಯರಿಗೆ ನಾಶಕರವು, ಶನಿಇದ್ದರೆ ರುಧಿರವೆಂಬ ದೋಷವು. ಅದು ಹುಡುಗನಿಗೆ ಮಹಾರೋಗಕರವು, ರಾಹುವಿದ್ದರೆರಂಧ್ರವೆಂಬದೋಷವು, ಅದುಹುಡುಗನತಾಯಿಗೆ ನಾಶಕರವು, ಕೇತುವಿದ್ದರೆ ಉಗ್ರವೆಂಬ ದೋಷವು, ಅದು, ವಿದ್ಯೆ, ಧನ, ಇವುಗಳಿಗೆ ನಾಶಕರವು, ಇಂತಾ ೫ ದೋಷಗಳಿಲ್ಲದ ಲಗ್ನದಲ್ಲಿ ಮಾಡಿದಉಪನಯನವು ಶುಭಕರವು ಇದುಅಲ್ಲದೆ ಉಪನಯನ ಲಗ್ನಕ್ಕೆದ್ವಾದಶದಲ್ಲಿರುವ ಸೂರ್ಯನನ್ನು ಅಂಗಾರಕನು ನೋಡಿದರೆ ಆಚಾರ್ಯನ ಕಣ್ಣುಹೋಗುವದು.

ಮೂ॥ಸರ್ವತ್ರಶುಭದಶ್ಶುಕ್ರೋರಿಃಷಷ್ಠಾಷ್ಟಮಾನ್ವಿನಾ।
ಷಷ್ಠಾಷ್ಟಮ್ಯಾರ್ವಿನಾಜೀವಸ್ಸರ್ವತ್ರಶುಭಕೃತ್ಸದಾ॥

ಟೀ॥ಶುಕ್ರನು೬-೮-೧೧ಈಸ್ಥಾನಗಳನ್ನು ಬಿಟ್ಟು ಕಡಮೆ ಸ್ಥಾನಗಳಲ್ಲಾ ಶುಭಪ್ರದನು, ಗುರುವು ೬-೮ಸ್ಥಾನಗಳನ್ನು ಬಿಟ್ಟುಕಡಮೆ ಸ್ಥಾನಗಳಲ್ಲೆಲ್ಲಾ ಶುಭಕರವು.

ಮೂ॥ವಿಶೇಷಾನ್ನೈಧನಸ್ಥಾನೆನೇಷ್ಯಂತೆಸರ್ವದಾಗ್ರಹಾಃ।
ಆಚಾರ್ಯಂತಂಶುಭಾಘ್ನಂತಿಶಿಷ್ಯಂಘ್ನಂತಿಶುಭೇತರಾಃ॥

ಟೀ॥ಉಪನಯನಲಗ್ನಕ್ಕೆಅಷ್ಟಮಸ್ಥಾನದಲ್ಲಿ ಸರ್ವಗ್ರಹಗಳೂ ಅಶುಭಕರವು, ಅದರಲ್ಲಿ ಶುಭಗ್ರಹಗಳು ಆದ್ದರೆ ಗುರುವಿಗೆಹಾನಿಕರವು,ಪಾಪಗ್ರಹಗಳುಇದ್ದರೆಶಿಷ್ಯನಿಗೆನಾಶವನ್ನು ಮಾಡುತ್ತಾರೆ..

ಅನಂತರ ಒಂದೇದಿನದಲ್ಲಿ ವಿವಾಹೋಪನಯನವಿಷಯು

ಮೂ॥ವಿವಾಹೊಪನಯಚೌಯತ್ರತ್ವೇಕನ್ಮಿನ್ದಿವಸೆಯದಿ।
ಮೆಖಲಾಬಂಧನಮ್ಪೂರ್ವಪರಂವೈವಾಹಿಕಂಜಗುಃ॥

ಟೀ॥ಒಂದೇದಿನದಲ್ಲಿ ವಿವಾಹವನ್ನು ಉಪನಯನವನ್ನು ಮಾಡ

ಬೇಕಾಗಿದ್ದರೆ ಮೊದಲುಶಉಪನಯನವನ್ನು ಮಾಡಿ ತರುವಾಯ ವಿವಾಹವನ್ನು ಮಾಡತಕ್ಕದ್ದು

ಮೂ॥ಚೌಲೋಪನಯಸೀಮಂತಜಾತನಾಮಾನ್ನಪುಂಸವೆ।
ಚಾತುರ್ವ್ರತೆದ್ವ್ಯುಪಾಕರ್ಮಂಸೋದರಾಸ್ಯುಗಪತ್ತ್ಯಜೆತ್॥

ಟೀ॥ತಂದೆಯು ಏಕೋದರರಾದತನ್ನ ಮಕ್ಕಳಿಗೆಲ್ಲರಿಗೂ ಒಂದೇ ಸಾರಿಚೌಲ, ಉಪನಯನ, ಸೀಮಂತ ಜಾತ ಕರ್ಮ, ನಾಮಕರಣ ಅನ್ನ ಪ್ರಾಶನ, ಪುಂಸವನ, ವೇದವ್ರತ, ಪ್ರಥಮ ಶ್ರಾವಣ ಹೋಮ ಈ ಕರ್ಮಗಳನ್ನು ವ೦ದೇಸಾರಿ ಮಾಡಕೂಡದು ಒಬ್ಬೊಬ್ಬನಿಗೆ ಪ್ರತ್ಯೇಕಪ್ರತ್ಯೇಕವಾಡತಕ್ಕದ್ದು

## ವೇದಾರಂಭವು.

ಮೂ॥ಹಸ್ತಾಶ್ವಯುಕ್ಛ್ರವಣತಿಷ್ಯಸಮೀರಮಿತ್ರಚಿತ್ರಾದಿತಿ
ತ್ರಿಪುರಜಿತ್ಮಬಲಾಸುರೇಷು । ಹಸ್ತೋತ್ತರಾಕಮಲಸಮ್ಭವಪೌ
ಷ್ಣಭೆಷುಪ್ರೋಕ್ತಂನವಶ್ರುತಿಸಮಾಗಮನಂದ್ವಿಜಾನಾಂ॥

ಟೀ॥ಹಸ್ತ, ಅಶ್ವಿನೀ, ಶ್ರವಣ, ಪುಷ್ಯ, ಸ್ವಾತಿ, ಅನೂರಾಧಾ, ಚಿತ್ತಾ, ಪುನರ್ವಸು, ಆರ್ದ್ರಾ, ಪೂರ್ವಾಷಾಢಾ, ಮೂಲ ಉತ್ತರ ಉಷಾ, ಉಭಾ, ರೋಹಿಣೀ, ರೇವತೀ, ಈ ನಕ್ಷತ್ರಗಳಲ್ಲಿ ಬ್ರಾಹ್ಮಣರಿಗೆ ವೇದಾರಂಭ ಮಾಡತಕ್ಕದ್ದು.

ಮೂ॥ ರಿಕ್ತಾಷ್ಟಮೀಪಂಚದಶೀನಿಷಿದ್ಧಾಃತ್ರಯೋದಶೀಸಪ್ತಮಿ
ಕಾಚಮಧ್ಯೇ। ವಿದ್ಯಾಗಮೇಈಪ್ಸಿತಮಂತ್ರಿಣಾಂಸ್ಯಾವಾರೋದ
ಯಂಮಧ್ಯಮಮಿಂದುಭಾನ್ವೋಃ

ಟೀ॥ವೇದವನ್ನು ಸ್ವಲ್ಪಕಲಿತು ಬಿಟ್ಟು ಪುನಹ ಆರಂಭಿಸುವಂತಾವರಿಗೆರಿಕ್ತತಿಥಿಗಳು, ಅಷ್ಟಮೀ, ಪೂರ್ಣಿಮಾ, ಇವುಗಳು ನಿಷಿದ್ಧಗಳು ತ್ರಯೋದಶೀ ಸಪ್ತಮೀ ಇವುಗಳುಮಧ್ಯಮಗಳು, ಸೂರ್ಯ ಚಂದ್ರವಾರಗಳು ಇವರುಗಳ ಲಗ್ನಗಳು ಸಹಮಧ್ಯಮಗಳು.

ಮೂ ॥ ವೆದಾರಂಭೆದ್ವಿಸ್ವಭಾವಾವಶಿಷ್ಟಾಮಂಧ್ಯಾಃಪ್ರೋಕ್ತಾಯೆ
ಚರಾರಾಶಯಶ್ಚ । ಶುದ್ಧೆರಾಶ್ಯನ್ಯೆಧನೆಚಾದ್ಯವಾರೆ ಕುರ್ಯಾ
ದ್ರಾಜಸ್ಸರ್ವವಿದ್ಯಾಸಮಾಪ್ತಿಂ॥

ಟೀ॥ವಿದ್ಯಾರಂಭ ವಿಷಯದಲ್ಲಿ ಸ್ಥಿರರಾಶಿಗಳು ಚರರಾಶಿಗಳು ಇ

ವು ನಿಷ್ಫಲಗಳು, ಆರಂಭಲಗ್ನಕ್ಕೆ ೮ನೇರಾಶಿಯು ಶುದ್ಧವಾಗಿರು ವಾಗಲೂ ಚಂದ್ರವಾರದಲ್ಲೂ ಕ್ಷತ್ರಿಯನಿಗೆ ವಿದ್ಯಾರಂಭವನ್ನು ಮಾಡಿದರೆ ಅದುಸರ್ವ ವಿದ್ಯಾಸಮಾಪ್ತಿಯನ್ನು ಮಾಡುವದು.

ಮೂ॥ ಜನ್ಮಯೋಗಶಕುನಾದಿವಿಸ್ತರೆಗೋಚರೇಚಶುಭದೆನ್ಯಯೆಷಿ
ತೋಃ । ಸಾಂಪ್ರದಾಯಸಮಯೆಗಣಾನ್ವಿತೆಪಾಣಿಪೀಡನ
ವಿಧಿರ್ವಿಧೀಯತೆ॥

ಟೀ॥ ಜನನಕಾಲದಶುಭಗ್ರಹಸಂಪತ್ತಿಯು, ಶುಭಶಕುನಗಳು ಶುಭಗೋಚಾರಗಳು, ಸುಗುಣಗಳುಳ್ಳಸಂಪ್ರದಾಯಸಮಯಗಳ ಲ್ಲಿಯೂ, ಸ್ತ್ರೀಪುರುಷರಿಗೆವಿವಾಹವು ಶುಭಪ್ರದವು.

ಮೂ॥ ಅರ್ಕ್ಕೆ ಕರ್ಕ್ಕಟಕನ್ಯಕಾಘಟಧನುರ್ಮ್ಮಕ್ತೆಭೃಗೌಮಂತ್ರಿಣಿ
ಸ್ಫಾರಜ್ಯೋತಿಷಿಶೀತರೋಚಿಷಿಬಲೋಪ್ಯೇತೆವಿರಿಕ್ತೆತಿಥೌ । ರೊ
ಹಿಣ್ಯುತ್ತರರೆವತೀಪಿತೃಮರುನ್ಮಿತ್ರೇಂದುಹಸ್ತಾಸುರೇ। ಷ್ವಾ
ರಾರ್ಕ್ಕಜವಾಸರೈಶ್ಚ ರಹಿತೆಷೂದ್ವಾಹಕರ್ಮ್ಮಾರಭೇತ್ ॥

ಟೀ॥ ಸೂರ್ಯನುಕರ್ಕಟಕ. ಕನ್ಯಾ, ಕುಂಭ, ಧನುಸ್ಸು ಈರಾಶಿ ಗಳನ್ನು ದಾಟಿದಾಗಲೂ, ಗುರುಶುಕ್ರರು ಆಕಾಶದಲ್ಲಿಪ್ರಕಾಶಿಸು ತ್ತಿರ ವಾಗಲೂ ಚಂದ್ರನು ಬಲವಂತನಾಗಿರುವಾಗಲು, ರಿಕ್ತತಿಥಿ ಗಳನ್ನು ಬಿಟ್ಟು ರೋಹಿಣೀ, ಉತ್ತರಾ, ಉಷಾ, ಉಭಾ, ರೇವತೀ, ಮಖಾ, ಸ್ವಾತೀ, ಅನೂ, ಮೃಗಶಿರ ಹಸ್ತ, ಮೂಲ, ಈ ನಕ್ಷತ್ರಗಳ ಲ್ಲಿಯೂ, ಕುಜ, ರವಿ, ಶನಿವಾರಗಳನ್ನು ಬಿಟ್ಟುಕಡಮೆ ವಾರಗ ಳಲ್ಲೂ ವಿವಾಹಕರ್ಮವನ್ನು ಮಾಡತಕ್ಕದ್ದು.

ಮೂ॥ ಶ್ರೇಷ್ಠಾಸ್ತೌಳಿಯುಮಾಂಗನಾಘಟಧನುರ್ಗೋಕರ್ಕಿ
ಕಂಠೀರವಾಃ ಮಧ್ಯಾಸ್ಸೌಮ್ಯಯುತಾಸ್ತದೂರ್ಧ್ವರಹಿತಾಸ್ಸ
ರ್ವೆವಿವಾಹೆಹಿತಾಃ ॥ ಸೌಮ್ಯಾಃಕೇಂದ್ರಧನಾಯಪುತ್ರಸಹಿತಾಃ
ಸ್ತ್ರೀಪಾಪಷಷ್ಠಾಯಗಾಃ ಪ್ರೊಜ್ಯಾಶುಕ್ರಗುರೂಮೃತಾವಶುಭ
ದ್ಯೌಭವೆತ್ಸಪ್ತಮಃ ॥

ಟೀ॥ ವಿವಾಹದಲ್ಲಿ ತುಲಾ, ಮಿಥುನ, ಕನ್ಯಾ,ಕುಂಭ, ಧನುಸ್ಸು ವೃಷಭ, ಕರ್ಕಾಟಕ, ಸಿಹ್ಮ ಈರಾಸಿಗಳು ಶುಭಗಳು, ಇತರ ರಾಶಿ ಗಳು ಮಧ್ಯಮಗಳು, ಸರ್ವರಾಶಿಗಳು ಪಾಪಗ್ರಹಸಂಬಂಧವಿಲ್ಲದೆ

ಶುಭಗ್ರಹಗ ಳೊಂದಿಗೆ ಕೂಡಿಇದ್ದರೆ ಶುಭಕರಗಳಾಗಿಯೇಇರು ವವು, ಶುಭಗ್ರಹಗಳು ೧-೨-೪-೫-೧೦-೧೧ ಈ ಸ್ಥಾನಗಳಲ್ಲಿ ಇದ್ದರು ಪಾಪಗ್ರಹಗಳು ೩-೬-೧೧ ಈರಾಶಿಗಳಲ್ಲಿ ಇರುವಾಗ ಲು ಶುಭಫಲವುಂಟಾಗುತ್ತದೆ ಗುರು ಶುಕ್ರರು ಮೂಢರೂ,ಅಸ್ತಂ ಗತರಾಗಿಯೂ ಇದ್ದರೆ ಅಶಭುಕರವು. ವಿಪಂಚಗುರು ಶುರಿಗೆಕ್ರ ಹಾಧ್ಯ ಅಸ್ತಮನಗಳಿಲ್ಲದೆ ಇರುವಾಗಲೂವಿವಾಹ, ಲಗ್ನಕ್ಕೆ ಸ ಪ್ತಮೆಶುಭ್ಧ ಇರುವಾಗಲೂ ವಿವಾಹವು ಶುಭಕರವಾಗುವದು.

ವಿವಾಹಪ್ರಶ್ನವು.

ಮೂ ॥ ಶುಭೆದಿನೆದೆವವಿದಂತ್ವಭಿಜ್ಞಾಂತಾಂಬೂಲ ಪುಷ್ಪಾಕ್ಷತ ಪೂರ್ಣಪಾಣಿಃ। ಕರ್ತಾಚಗತ್ವಾಪ್ರಣಿಪತ್ಯಪೃಚ್ಛೆ ನಿವೆದ್ಯತ ಸ್ಮೈವರಕನ್ಯಯೊರ್ಭಂ ॥

ಟೀ॥ ವಿವಾಹವನು ಮಾಡಿಸುವವನು ಶುಭದಿನದಲ್ಲಿ ಪುಷ್ಪತಾಂ ಬೂಲಗಳನ್ನು ಕೈಯ ತೆಗದುಕೊಂಡು ಜ್ಯೋತಿಶ್ಯಾಸ್ತ್ರವನ್ನು ತಿಳಿದ ಬ್ರಾಹ್ಮಣನಬಳಿಗೆ ಹೋಗಿ ವಂದನೆ ಮಾಡಿ ಕನ್ಯಾವರರನ ಕ್ಷತ್ರಗಳನ್ನುತಿಳಿಸಿವಿವಾಹವನ್ನು ಕುರುತುಪ್ರಶ್ನೆಮಾಡತಕ್ಕದ್ದು

ಗೋತ್ರವರ್ಜ್ಯ.

ಮೂ॥ ಸ್ವಗೊತ್ರಪ್ರವರೊಪೆತಾಹೀನಾದಿಕಮುಲೊದ್ಭವಾ। ಕ ನ್ಯಾವಯೊಧಿಕಾನೆಷ್ಟಾದುರ್ಲಕ್ಷಣಗುಣಾನ್ವಿತಾ॥

ಟೀ॥ ವರನಗೋತ್ರದವಳಾಗಿಯೂ,ಪ್ರವರವುಳ್ಳವಳಾಗಿಯೂ, ವರನಗಿಂತೆ ಉತ್ತಮಕುಲದಲ್ಲಿ ಹುಟ್ಟಿದವಳಾಗಿಯೂ, ಹೀನ ಕುಲದವಳಾಗಿಯೂ, ವರನಿಗಿಂತ ದೊಡ್ಡವಳಾಗಿಯೂದುರ್ಲಕ್ಷ ಣಗ ಳುಳ್ಳವಳಾಗಿ ಇರುವ ಕನ್ಯಕೆಯುನ್ನು ಬಿಡತಕ್ಕದ್ದು.

ಮೂ ॥ ಕುಲಂಚಶೀಲಂಚವಪುರ್ವಯಶ್ಚ ವಿದ್ಯಾಂಚವಿತ್ತಂಚಸ ನಾಥತಾಂಚ। ವಿತಾನ್ಸುಣಾಂತ್ಸಪ್ತಪರೀಕ್ಷ್ಯದೆಯಾಃಕನ್ಯಾಬು ಧೈಶ್ಶೆಷಮಚಿಂತನೀಯಂ ॥

ಟೀ॥ ವರನಕುಲ, ನಡತೆ, ದೇಹ, ವಯಸ್ಸು, ವಿದ್ಯೆ, ಧನ ಪಾಲ ಕರು, ಈ ೭ ಗುಣಗಳನ್ನು ಪರೀಕ್ಷಿಸಿ ಕನ್ಯೆಯುನ್ನು ಕೊಡಬೇಕು. ಮಿಕ್ಕ ಮಿಕ್ಕವಿಷಯುಗಳನ್ನು ಯೋಚಿಸ ಕೆಲಸವಿಲ್ಲ, ಅಂದರೆ-ಕ

ನ್ಯೆಯನ್ನು ಕೊಡುವನುಇವುಗಳನ್ನು ಚನಾಗಿತಿಳಿದುಕೊಡಬೇಕು.

ಜನ್ಮನಕ್ಷತ್ರನಾಮನಕ್ಷತ್ರವಿಷಯ.

ಮೂ॥ ದಂಪತ್ಯೋರ್ಜನ್ಮತಾರಾಭ್ಯಾಂ ನಾಮಋಕ್ಷಾಭ್ಯಾಮಥಾಪಿವಾ। ಸ್ತ್ರೀಜನ್ಮತಾರಾಪೂರ್ವಾಭ್ಯಾಮ್ಯೂಬ್ರಯಾತ್ಪ್ರಜ್ಞಃ ಶ್ಯುಭಾಶುಭಂ ॥

ಟೀ॥ ದಂಪದಿಗಳ ಜನ್ಮನಕ್ಷತ್ರಗಳಿಂದಲಾಗಲಿ ನಾಮ ನಕ್ಷತ್ರಗಳಿಂದಲಾಗಲಿ ಕನ್ಯೆಯನಕ್ಷತ್ರವೊದಲಾಗಿ ಜ್ಯೋತಿಶಾಸ್ತ್ರಜ್ಞನು ಶುಭಾಶುಭಗಳನ್ನು ಹೇಳತಕ್ಕದ್ದು.

ಮೂ॥ ಜನ್ಮಧಿಷ್ಣ್ಯಭವನೊದ್ಭವಮ್ಫಲಜ್ಞಾಮಿ ನೀಪುರುಷಯೊರ್ವಿಚಿಂತಯೆತ್। ಜನ್ಮಧಿಷ್ಣ್ಯಭವನಾನಭಿಜ್ಞಯಾನಾಮತೋಖಿಲಮಿದಂವಿಚಿಂತಯೆತ್ ॥

ಟೀ॥ ಸ್ತ್ರೀಪುರುಷರಿಗೆ ಜನ್ಮನಕ್ಷತ್ರಜನ್ಮರಾಶಿಗಳನ್ನು ವಿಚಾರಿಸಿ ಶುಭಾಶುಭಫಲಗಳನ್ನು ಯೋಚಿಸಬೇಕು. ಅದು ತಿಳಿಯದಿದ್ದರೆ ನಾಮನಕ್ಷತ್ರ ರಾಶಿಗಳಿಂದಶುಭಾಶುಭಗಳನ್ನು ಚಿಂತಿಸತಕ್ಕದ್ದು.

ಮೂ॥ ಅಜ್ಞಾತಜನ್ಮನಾಂನೄಣಾಂ ನಾಮಭರ್ಪರಿಕಲ್ಪಯೆತ್ ॥ ತೆನೈವಚಿಂತಯೆತ್ಸರ್ವಂ ರಾಶಿಕೂಟಾದಿಜನ್ಮವತ್ ॥

ಟೀ॥ ಜನ್ಮನಕ್ಷತ್ರ ತಿಳಿಯದ ಮನುಷ್ಯರಿಗೆ ನಾಮನಕ್ಷತ್ರವನ್ನೇ ಹಿಡಿಯತಕ್ಕದ್ದು, ಅದರಿಂದಲೆ ರಾಶಿಕೂಟಮುಂತಾದ ಎಲ್ಲಾ ವರ್ಗಗಳನ್ನು ಆಲೋಚಿಸತಕ್ಕದ್ದು.

ಮೂ॥ ಜನ್ಮನಾಜನ್ಮಕರ್ವಿಶೀತ ನಾಮ್ನಾನಾಮೈವಕಾರಯೇತ್। ಉಭಯಮ್ಬಲಹೀನಂಚೆತ್ಪುಂಜನ್ಮಸ್ತ್ರೀಷುನಾಮತಃ ॥

ಟೀ॥ ಪುರುಷನಿಗೂ ಸ್ತ್ರೀಗೂ ಜನ್ಮ ನಕ್ಷತ್ರಗಳನ್ನೇ ಹಿಡಿಯುವದೊಂದು ಪಕ್ಷವು, ನಾಮನಕ್ಷತ್ರವನ್ನೇ ಹಿಡಿಯುವದೊಂದು ಪಕ್ಷವು ಈ ಎರಡುಪಕ್ಷಗಳೂ ದುರ್ಬಲಗಳಾಗಿರುವ ಪಕ್ಷದಲ್ಲಿ ಪುರುಷನ ಜನ್ಮ ನಕ್ಷತ್ರದಿಂದಲೂ, ಸ್ತ್ರೀಯ ನಾಮ ನಕ್ಷತ್ರದಿಂದಲೂ ಶುಭಾ ಶುಭಗಳನ್ನು ಯೋಚಿಸತಕ್ಕದ್ದು.

ಏಕ ನಕ್ಷತ್ರ ವಿವಾಕವು.

ಮೂ॥ ರೋಹಿಣ್ಯಾದ್ರಾಮಘೇಂದ್ರಾಗ್ನಿ ತಿಷ್ಯಶ್ರವಣಪೌಷ್ಣ

ಭಂ। ಅಹಿರ್ಬುಧ್ನ್ಯೈಸ್ತ್ವಾಷ್ಟ್ರೌಚನಕ್ಷತ್ರೈಕ್ಯೇಶುಭಾವಹಃ ॥

ಟೀ॥ ರೋಹಿಣಿ, ಆದ್ರಾ, ಮಖಾ, ವಿಶಾಖಾ, ಪುಷ್ಯ, ಶ್ರವಣಾ,ರೇವತೀ, ಉಭಾ, ಈ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀ ಪುರುಷರು ಒಂದೇ ನಕ್ಷತ್ರದವರಾಗಿದ್ದರೂ ಶುಭಕರಣಗಳು.

ಮೂ॥ ಅಶ್ವಿನೀಚಯಮಸ್ವಾತಿ ಸಾರ್ಪಫಾಲ್ಗುಣಮೇವಚ।
ವೈತ್ರವಾರುಣಮೂಲಾಖ್ಯಂನಕ್ಷತ್ರೈಕ್ಯೇಪಿಮಧ್ಯಮಾ ॥

ಟೀ॥ ಅಶ್ವಿನೀ, ಭರಣೀ, ಸ್ವಾತಿ, ಆಶ್ರೇಷಾ, ಪೂರ್ವಫಲ್ಗುನೀ, ಅನೂ ಶತಭಿಷಕ್ ಮೂಲ, ಈ ೮ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀ ಪುರುಷರಿಗೆ ನಕ್ಷತ್ರಗಳೊಂದಾಗಿದ್ದರೆ ಮಧ್ಯಮವು.

ಮೂ॥ ಅಜೈಕಪಾಚ್ಛ್ರವಿಷ್ಠಾಚ ಪುನರ್ವಸ್ವಥಕೃತ್ತಿಕಾ। ಮೃಗಶೀರ್ಷಂಚ ಚಿತ್ತಾಚಸವಿತೋತ್ತರಫಲ್ಗುನೀ । ಜ್ಯೇಷ್ಠಾಚ ವಿಶ್ವತೋಯಂಚನಕ್ಷತ್ರೈಕ್ಯೇವಿನಶ್ಯತಿ । ಏಕರಾಶೌಪೃಥಗ್ಧಿಷ್ಣ್ಯೇಚೋತ್ತಮವ್ರಾಣಿಪೀಡನಂ ॥

ಟೀ॥ ಪೂರ್ವಾಭಾದ್ರ, ಧನಿಷ್ಠಾ, ಪುನರ್ವಸು,ಕೃತ್ತಿಕಾ, ಮೃಗಶೀರ್ಷ, ಚಿತ್ರಾ,ಹಸ್ತ, ಉತ್ತರಾ, ಜ್ಯೇಷ್ಠ, ಪೂಷಾ, ಉಷಾ, ಈ ನಕ್ಷತ್ರಗಳಲ್ಲಿಹುಟ್ಟಿದ ಸ್ತ್ರೀಪುರುಷರಿಗೆ ನಕ್ಷತ್ರೈಕ್ಯವುಂಟಾದರ ಸ್ತ್ರೀಪುರುಷರಿಗೆನಾಶಕರವಾಗುತ್ತದೆಮತ್ತುಸ್ತ್ರೀಪುರುಷರಿಗೆ ಜನ್ಮ ರಾಶಿಯೊಂದಾಗಿ ನಕ್ಷತ್ರಗಳು ಬೇರೆಯಾಗಿಇದ್ದಲ್ಲಿವಿವಾಹ ಉತ್ತಮವಾದುದು.

ಮೂ॥ ರಾಶ್ಯೈಕ್ಯೇಚೇದ್ಭಿನ್ನ ಮೃಕ್ಷುದ್ವಯೋಸ್ಸ್ಯಾನ್ನಕ್ಷತ್ರೈಕ್ಯೇ ರಾಶಿಯುಗ್ಮಂತಥೈವ। ನಾಡೀದೋಷೋನೋಗಣಾನಾಂಚದೋಷೋನಕ್ಷತ್ರೈಕ್ಯೇಭಿನ್ನಪಾದಶ್ಶುಭಸ್ಸ್ಯಾತ್ ॥

ಟೀ॥ ದಂಪತಿಗಳೊಂದೇರಾಶಿಯಲ್ಲಿ ಹುಟ್ಟದವರಾಗಿ ಯಿದ್ದರೆ ನಕ್ಷತ್ರಬೇಧ ಉಂಟಾದರೂ ಹಾಗೆ ಒಂದೇನಕ್ಷತ್ರದಲ್ಲಿ ಹುಟ್ಟಿದವರಾಗಿದ್ಧ ರಾಶಿಬೇದ ಉಂಟಾದರೂ ನಾಡೀ ದೋಷವು ಗಣ ದೋಷವು ಸಹ ಉಂಟಾಗುವದಿಲ್ಲಿ ವಧೂವರರು ಒಂದೇ ನಕ್ಷತ್ರದಲ್ಲಿ ಹುಟ್ಟಿದ್ದರೂ ಬೇರೆ ಬೇರೆ ಪಾದಗಳಲ್ಲಿ ಹುಟಿದವರಾದರೆ ಅವರ ವಿವಾಹವು ಶೇಭಕರವಾಗುವದು.

ಗ್ರಂಥಾಂತರದಲ್ಲಿ.

ಮೂ॥ ಏಕರ್ಕ್ಷೆಚೈಕಪಾದೆತುವಿವಾಹಪ್ರಾಣಹಾನಿದಃ ।
ದಂಪತ್ಯೋರೇಕನಕ್ಷತ್ರೆಭಿನ್ನಪಾದೇಶುಭಾವಹಃ ॥

ಟೀ॥ ಒಂದೇನಕ್ಷತ್ರದಲ್ಲೂ, ಒಂದೇ ಪಾದದಲ್ಲೂ, ಹುಟ್ಟಿದರಿಗೆ ವಿವಾಹವು ಅವರಿಗೆ ಪ್ರಾಣಹಾನಿಕರವು ಒಂದೇನಕ್ಷತ್ರದಲ್ಲೂ ಬೇರೆಬೇರೆ ಪಾದಗಳಲ್ಲಿ ಹುಟ್ಟಿದವರಿಗೆ ವಿವಾಹವು ಶುಭಕರವು.

ಮೂ ॥ ವಾರುಣಾರ್ಕಮರುದ್ಧಸ್ರವಹ್ನ್ಯೈಪಶ್ಚಪಿದುಃಪಿತಾ ।
ಏಷುಸ್ತ್ರೀಪೂರ್ವವತ್ಯೆಪಿರಾಶ್ಯೈಕ್ಯೇನತುದೋಷಭಾಕ್ ॥

ಟೀ॥ ಶತಭಿಷಕ್ ಹಸ್ತ, ಸ್ವಾತಿ॥, ಅಶ್ವಿನಿ। ಕೃತ್ತಿಕಾ, ಪೂಷಾ ಮೃಗಶಿರ, ಮಖಾ, ಈ ನಕ್ಷತ್ರಗಳಿಲ್ಲಿ ಕನ್ಯೆಯು ಪ್ರಥಮ ಪಾದದಲ್ಲಿ ಹುಟ್ಟಿದ್ದರೆ ದಂಪತಿಗಳು ಒಂದೇ ನಕ್ಷತ್ರ ಒಂದೇ ರಾಶಿಯಲ್ಲಿ ಹುಟ್ಟಿದವರಾದರೂ ದೋಷವಿಲ್ಲ.

ಮೂ॥ ಯುಗ್ಮಪಾದೆಚಧಿಷ್ಣ್ಯೆತುವರಃ ಪೂರ್ವಾರ್ಧಗೊಜಯಃ। ಅಪರಾರ್ಧೋದ್ಭವಾನಾರೀ ಚೈಕರ್ಕ್ಷೆಪಿಶುಭಾವಹಃ ॥

ಟೀ॥ ಸ್ತ್ರೀಪುರುಷರೊಂದೇ ನಕ್ಷತ್ರದಲ್ಲಿ ಹುಟ್ಟಿದವರಾಗಿ'ಇರುವಾಗ ಆ ನಕ್ಷತ್ರವು ದ್ವಿಪಾದನಕ್ಷತ್ರವಾಗಿಯೂ ಅದರಲ್ಲಿ ವರನು ಪೂರ್ವಾರ್ಧದಲ್ಲಿಯೂ, ಸ್ತ್ರೀಯು ಅಪರಾರ್ಧದಲ್ಲಿಯೂ ಹುಟ್ಟಿದವರಾಗಿದ್ದರೆ ಅಂತವನಿಗೆ ಜಯವು, ಶುಭವುಸಹವುಂಟಾಗುವದು.

ಮೂ ॥ ಏಕರಾಶೌದ್ವಿನಕ್ಷತ್ರೆ ಪುಂತಾರಾಪ್ರಥ ಮಾಭವೇತ್ ।
ಅತೀವಶೋಭನಂ ಪ್ರೋಕ್ತಂಸ್ತ್ರೀತಾರಾಚೆದ್ವಿನಾಶನಂ ॥

ಟೀ ॥ ಎರಡು ನಕ್ಷತ್ರಗಳ ಸಂಭಂಧವುಳ್ಳ ಒಂದುರಾಶಿಯಲ್ಲಿ ಹುಟ್ಟಿದಸ್ತ್ರೀಪುರುಷರೊಳು ಆ ರಾಶಿಯ ನಕ್ಷತ್ರಗಳಲ್ಲಿ ಪುರುಷನ ನಕ್ಷತ್ರವು ಮುಂದಿನದಾಗಿಇದ್ದರೆವಿವಾಹವುಶುಭಕರವು.ಸ್ತ್ರೀನಕ್ಷತ್ರವು ಮೊದಲನೇದಾಗಿ ಇದ್ದರೆಅವರಿಗೆ ನಾಶವುಂಟಾಗುತ್ತದೆ.

ನಾಮಾಂಶವು.

ಮೂ॥ ಶುಭಮಂಶೈಕ್ಯಮುದ್ವಾಹೆದಂಪತ್ಯೋರ್ನಾಮತಾರಕೆ ।
ಗ್ರಾಮಸಂಗ್ರಾಮಸೆವಾಸು ಸಮಾಂಶಮಶುಭಂವಿದುಃ ॥

ಟೀ॥ ದಂಪತಿಗಳ ನಾಮನಕ್ಷತ್ರಗಳಿಗೆ ಅಂಶೆಒಂದೇಯಾಗಿದ್ದ

ರೆ ಶುಭಕರವಹುದು. ಗ್ರಾಮಪ್ರವೇಶ ಯುದ್ಧಾರಂಭ ಅಧಿಕಾರ ಪ್ರವೇಶ ಗಳಲ್ಲಿ ಸಮಾಂಶೆವುಂಭಕರವು.

ಮೂ॥ ವಿರುದ್ಧೇರಾಶಿನಕ್ಷತ್ರಭವೇತಾಮಪಿಚೆತ್ತದಾ। ದಂಪತ್ಯೋಃ
ಪ್ರೀತಯೆನ್ನೃಣಾಂನಾಮಾಂತರಮಥಷಿವೇತ್॥

ಟೀ॥ ದಂಪತಿಗಳ ನಕ್ಷತ್ರರಾಶಿಗಳು ವಿರುದ್ಧಗಳಾಗಿಇದ್ದರೆ ಅವರುಗಳಿಗೆಪರಸ್ಪರ ಪ್ರೀತಿಯುಂಟಾಗುವದಕ್ಕಾಗಿ ಬೇರೆಹೆಸರನ್ನು ಇಡಬಹುದು.

ಗ್ರಂಧಾಂತರದಲ್ಲಿ.

ಮೂ॥ ದಂಪತ್ಯೋರೆಕನಕ್ಷತ್ರೆದ್ವಿಪದರ್ಕ್ಷಮೃತಿರ್ಭವೇತ್ ॥
ತ್ರಿಪದರ್ಕ್ಷೆಗವೊತ್ಪತ್ತಿಶ್ಚತುಷ್ಪಾದೆಶುಭಾವಹಃ ॥

ಟೀ॥ ದಂಪತಿಗಳುಹುಟ್ಟಿದ ಒಂದೇ ನಕ್ಷತ್ರವು ದ್ವಿಪಾದವಾಗಿದ್ದರೆ ಮೃತ್ಯುವು, ತ್ರಿಪಾದ ನಕ್ಷತ್ರವಾದರೆ ಪಶುಗಳುಫಲವುಂಟಾಗುವದು, ಚತುಷ್ಪಾದನಕ್ಷತ್ರವಾದರೆ ಶುಭಕರವಹುದು.

ಕನ್ಯೆಗೆ ನಾಮಾಂತರ ವಿಷಯ.

ಮೂ॥ ಪಂಚತ್ವಕ್ಸಿತಸರ್ಷಪಾನ್ವಿತಜಲಂ ಕುಂಭಸ್ಥಿತಂನೂತನಂದೂರ್ವಾಶ್ವತ್ಥದಳೈರ್ವಿವಾಹಸಮಯೆಸಂಪ್ರೋಕ್ಷಣಂ ಕಲ್ಪಯೆತ್। ಕನ್ಯಾಯಾಸ್ತದನಂತರಂದ್ವಿಜವರಸ್ತಸ್ಯಾಶ್ಚ ಪುಣ್ಯಾಂಗಣಾಪೂರ್ವೋಕ್ತಮ್ಪರಿಹೃತ್ಯಮಂಗಳಕರಂನಾಮಾಂತರಮಷಿಪೆತ್

ಟೀ॥ ಕನ್ಯೆಗೆ ವಿವಾಹಕಾಲದಲ್ಲಿ ಒಂದು ನೂತನಕುಂಭದಲ್ಲಿನೀರು ತುಂಬಿಆಲದ್ದು. ಮಾವಿನದು, ನೇರಳೇದು, ಅಶ್ವತ್ಥದ್ದು, ಜುವ್ವೀದು. ಈ ೫ ಚಕ್ಕೆಗಳನ್ನೂ. ಬಿಳಿ ಸಾಸುವೆಯುನ್ನು ಸಹ ಆ ನೀರಿನಲ್ಲಿ ಹಾಕಿ ಗರಿಕೆ, ಆಶ್ವತ್ಥ ಇವುಗಳ ಚಿಗುರುಗಳಿಂದ ಆ ಕುಂಭದಲ್ಲಿರುವ ನೀರನ್ನು ತೆಗದು ಮುತ್ತೈದರಿಂದ ಆಕನ್ಯೆಗೆ ಪ್ರೋಕ್ಷಣೆ ಮಾಡಿಸಿತರುವಾಯುಕನ್ಯೆಯುಮುಂದಿನಹೆಸರನ್ನುತಪ್ಪಿಸಿಶುಭವಾದಬೇರೆಹೆಸರನ್ನುಬ್ರಾಹ್ಮಣಮುತ್ತೈದರಬಾಯಿಂದಹೇಳಿಸತಕ್ಕದ

ಮೂ॥ ಮೂಲಜಾಶ್ವಶುರಂಹಂತಿವ್ಯಾಳಜಾಚತದಂಗನಾಮ್।
ಜ್ಯೇಷ್ಠಜಾಭಾವುಕಂಹಂತಿದೇವರಂತುದ್ವಿದೈವಜಾ ॥

ಟೀ॥ ಮೂಲ ನಕ್ಷತ್ರದಲ್ಲಿ ಹುಟ್ಟಿದ ಕನ್ಯೆಯು ಮಾವನನೂ

ಅಶ್ರೇಷದಲ್ಲಿ ಹುಟ್ಟಿದವಳು ಅತ್ತೆಯನ್ನೂ ಜ್ಯೇಷ್ಠೆಯಲ್ಲಿ ಹುಟ್ಟಿದವಳು ಗಂಡನತಮ್ಮನನ್ನೂ, ವಿಶಾಖೆಯಲ್ಲಿ ಹುಟ್ಟಿದವಳು ಗಂಡನ ಅಣ್ಣನನ್ನು ಕೊಲ್ಲುವಳು.

ಮೂ॥ ಮೂಲಾಶ್ಲೇಷಾವಿಶಾಖಾಸು ಮಾಹೇಂದ್ರೇಚೋದ್ಭವಃ ಪುಮಾನ್ । ನದೋಷಕೃದ್ವಿವಾಹೇಚಸ್ತ್ರಿಯಶ್ಚತೇಷುವರ್ಜಿತಾಃ ॥

ಟೀ॥ ಮೇಲೆ ಹೇಳಿದಮೂಲ ಆಶ್ರೇಷ ಜ್ಯೇಷ್ಠಾ, ವಿಶಾಖಾ, ಈ ೪ ನಕ್ಷತ್ರಗಳಲ್ಲಿ ಹುಟ್ಟಿದ ಪುರುಷನ ವಿವಾಹ ಶುಭಕರವಹುದು, ಆ ನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀಯನ್ನು ಬಿಡತಕ್ಕದ್ದು.

ಗ್ರಂ ಥಾಂ ತ ರೆ.

ಮೂ॥ ತುಲಾಯುಕ್ತೆದ್ವಿದೈವರ್ಕ್ಷೇಜಾತಾನಾರೀನದೋಷಭಾಕ್।
ಕೌರ್ಪಿಯುಕ್ತೆದ್ವಿದೈವರ್ಕ್ಷೇಜಾತಾಹಂತಿತದ್ಧೈವಚ ॥

ಟೀ॥ ವಿಶಾಖಯ ೩, ಪಾದದೊಳಗಾಗಿ ತುಲಾರಾಶಿಯಲ್ಲಿ ಸ್ತ್ರೀಯು ಹುಟ್ಟಿದ್ದರೆ ದೋಷವಿಲ್ಲ, ಆನಕ್ಷತ್ರದ ೪ನೇ ಪಾದದಲ್ಲಿ ವೃಶ್ಚಿಕ ರಾಶಿಯಲ್ಲಿ ಹುಟ್ಟಿದ್ದರೆ ದೋಷಉಂಟಾಗುತ್ತೆ.

ದ್ವಾದಶ ಕೂಟಗಳು.

ಮೂ॥ ದಿನಂಗಣಂಚಮಾಹೇಂದ್ರಸ್ತ್ರೀದೀರ್ಘಂಯೋನಿರೇವಚ
ರಾಶೀರಾಶ್ಯಧಿಪೋವಶ್ಯೋರಜ್ಜುರ್ವೇಧಾತಥಾದಶ। ಪುನಶ್ಚವರ್ಣ
ಕೂಟಂಚನಾಡೀ ಕೂಟಪ್ರಶಸ್ಯತೆ । ಏತೆಧ್ವಾದಶಕೂಟಾ
ಸ್ಸ್ಯುಃಕೂಟಭೇದಾಃಪ್ರಕೀರ್ತಿತಾಃ ॥

ಟೀ॥ ಕನ್ಯಾವರರಿಗೆ ವಿವಾಹದಲ್ಲಿ ದಿನಕೂಟ, ಗಣಕೂಟ, ಮಾಹೇಂದ್ರಕೂಟ, ಸ್ತ್ರೀದೀರ್ಘಕೂಟ, ಯೋನಿಕೂಟ, ರಾಶಿಕೂಟ, ರಾಶ್ಯಧಿಪತಿಕೂಟ, ವಶ್ಯಕೂಟ, ರಜ್ಜುಕೂಟ, ವೇಧಾಕೂಟ, ವರ್ಣಕೂಡ, ನಾಡೀಕೂಟ, ಎಂಬದಾಗಿ ೧೨ ಕೂಟಗಳುಪ್ರಶಸ್ತಗಳಾಗಿರುತ್ತವೆ.

ಮೂ ॥ ರಾಶಿಕೂಟಾದಿಕಂಸರ್ವಂಸ್ತ್ರೀಭಮಾರಭ್ಯಚಿಂತಯೇತ್।
ಪುಂಭಾತ್ತಾರಾವಿಶುದ್ಧಸ್ಸ್ಯಾನ್ನಾಡಿರಜ್ಜುಸ್ಸ್ವದಸ್ರಭಾತ್॥

ಟೀ॥ ರಾಶಿಕೂಟ ಮೊದಲಾಗಿ ಎಲ್ಲಾ ಕೂಟಗಳು ಸ್ತ್ರೀನಕ್ಷತ್ರದಿಂದನೋಡತಕ್ಕದ್ದು, ಪುರುಷ ನಕ್ಷತ್ರದಿಂದ ತಾರಾಬಲನೋಡತಕ್ಕ

ದ್ದು, ಅಶ್ವಿನೀನಕ್ಷತ್ರದಿಂದ ನಾಡೀಕೂಟ ರಜ್ಜುಕೂಟಗಳನ್ನು ನೋಡತಕ್ಕದ್ದು.

ಮೂ॥ಗ್ರಹಮೈತ್ರಂರಾಶಿಕೂಟಂತಾರಾನಾಡೀವಿಶೇಷತಃ । ಸರ್ವೇ ಷಾಮೇವವರ್ಣಾನಾಮವಶ್ಯಂಗಣಕೂಟಕಂ॥

ಟೀ॥ಗ್ರಹಮಿತ್ರತ್ವಉ, ರಾಶಿಕೂಟಉ, ತಾರಾಬಲಉ,ನಾಡೀಕೂಟಉ, ಗಣಕೂಟಉ, ಇಉಗಳು ಯೆಲ್ಲಾವರ್ಣದವರಿಗೂ ಅವಶ್ಯ ನೋಡತಕ್ಕದ್ದು.

ಮೂ ॥ ಗ್ರಹಮೈತ್ರಂದ್ವಿಜಾತೀನಾಂಕ್ಷತ್ರಿಯಾಣಾಂಗಣಾಂಗಣಸ್ತಥಾ।ಕನ್ಯಾದೂರಂತುವೈಶ್ಯಾನಾಂಶೂದ್ರಾಣಾಂಯೊನಿರೇವಚ

ಟೀ॥ ಬ್ರಾಹ್ಮಣರಿಗೆಗ್ರಹಮೈತ್ರಉ, ಕ್ಷತ್ರಿಯರಿಗೆ ಗಣಕೂಟಉ. ವೈಶ್ಯರಿಗೆಕನ್ಯೆದೂರ, ಅದರೆ ಸ್ತ್ರೀದೀರ್ಘಕೂಟ,ಶೂದ್ರರಿಗೆಯೋನಿಕೂಟ ಅವಶ್ಯ ನೋಡತಕ್ಕದ್ದು.

## ದಿನಕೂಟವು.

ಮೂ । ಕನ್ಯಾದಿವರಋಕ್ಷಾಂತಂಗಣಯೆನ್ನವಸಂಖ್ಯಯಾ । ನವಮಾತ್ಯೆತಾರಕೇಶ್ರೇಷ್ಠಂದಿನಕೂಟಮ್ಪ್ರಶಸ್ಯತೆ॥

ಟೀ॥ಕನ್ಯೆಯ ನಕ್ಷತ್ರಮೊದಲು ವರನ ನಕ್ಷತ್ರಪರ್ಯಂತನಕ್ಷತ್ರಗಳಾಗಿ ಯಣಿಸುವಾಗ ಪುರುಷನಕ್ಷತ್ರಉ ಸಮಸಂಖ್ಯೆಯಾಗಿ ಅಂದರೆ೨-೪-೬-೮-ಈ ಮೇರೆ ಇದ್ದರೆ ಉತ್ತಮಉ.

## ಗೂಣಕೂಟಉ-

ಮೂ॥ಪುನರ್ವಸುದ್ವಯಂಸ್ವಾತೀಕರಶ್ರವಣತಾರಕೆ । ಪೌಷ್ಣಮೈತೆಂದುದಸ್ರಾಭಾಸ್ತಾರಾದೇವಗಣಾಸ್ಮೃತಾಃ॥

ಟೀ॥ ಪುನರ್ವಸೂ, ಪುಷ್ಯ, ಸ್ವಾತೀ, ಹಸ್ತ, ಶ್ರವಣ, ರೇವತೀ, ಅನೂರಾಧಾ,ಮೃಗಶೀರ್ಷ,ಅಶ್ವಿನೀ,ಈ ನಕ್ಷತ್ರಗಳುದೇವಗುಣಗಳು,

ಮೂ॥ರೋಹಿಣಿ ತ್ರೀಣಿಪೂರ್ವಾಣಿಭರಣೀರೌದ್ರಮೆವಚ । ತ್ರೀಣ್ಯುತ್ತರಾಶ್ಚ ವಿಜ್ಞೆಯಾಮಾನುಷಾಃಪರಿಕೀರ್ತಿತಾಃ॥

ಟೀ॥ರೋಹಿಣೀ, ಪೂಷ ಪೂಷಾ ಪೂಭಾ,ಭರಣೀ ಆದ್ರಾ ಉತ್ತರಾ, ಉಷಾ, ಪುಭಾ, ಈ ನಕ್ಷತ್ರಗಳು ಮಾಷಗಣಗಳು.

ಮೂ॥ಅಗ್ನಿಸಾರ್ಪಮಖಾಚಿತ್ರಾದ್ವಿದೈವೇಂದ್ರಾಕ್ಷ್ಮಮೂಲಭಂ।
ಶ್ರವಿಷ್ಠಾವಾರುಣಂಚೈವರಾಕ್ಷಸಾಖ್ಯಾಗಣಾಸ್ಮೃತಾಃ॥

ಟೀ॥ಕೃತ್ತಿಕಾ, ಆಶ್ರೇಷಾ, ಮಖಾ ಚಿತ್ರಾ, ವಿಶಾಖ, ಜ್ಯೇಷ್ಟ,ಮೂಲ, ಧನಿಷ್ಟಾ, ಶತಭಿಷಕ್, ಈ೯ ನಕ್ಷತ್ರಗಳು ರಾಕ್ಷಸಗಣಗಳು.

ಮೂ॥ಸ್ವಗಣಂಚೊತ್ತಮಂವಿದ್ಯಾನ್ಮಧ್ಯಮಂದೈವಮಾನುಷಂ।
ಅಧಮಂರಾಕ್ಷಸಂದೈವಂಮೃತ್ಯುರ್ಮಾನುಷರಾಕ್ಷಸಂ।ಸ್ತ್ರೀರಾಕ್ಷಸನಕರ್ತವ್ಯಂಕರ್ತವ್ಯಂನರರಾಕ್ಷಸಂ॥

ಟೀ॥ಸ್ತ್ರೀಪುರುಷರಿಬ್ಬರ ನಕ್ಷತ್ರಗಳೂ ವಂದೇಗಣವಾಗಿ ಇದ್ದರೆ ವುತ್ತಮವು, ದೇವಗಣ ಮನುಷ್ಯಗಣವಾದರೆಮಧ್ಯಮವು, ದೇವರಾಕ್ಷಸಗಣಗಳು, ಅಧಮವು, ಮನುಷ್ಯರಾಕ್ಷಸಗಳು ಮೃತ್ಯುವು ಕನ್ಯೆಯನಕ್ಷತವುರಾಕ್ಷಸರಗಣವಾಗಿದ್ದರಮದುವೇಮಾಡಕೂಡು.

## ಮಾಹೇಂದ್ರ ಕೂಟ.

ಮೂ ॥ ವಧ್ವಾದೀನಾಂಚತುಸ್ಸಪ್ತದಶಮಂಚತ್ರಯೋದಶಂ ।
ಷೋಡಶೈಕೋನವಿಂಶಂಚದ್ವಾವಿಂಶಂಪಂಚವಿಂಶತಿಃ । ಏತೇಮಾಹೆಂದ್ರಯೋಗಾಸ್ಯುರ್ವಿವಾಹೆಷುಪ್ರಶಸ್ಯತೆ॥

ಟೀ॥ಸ್ತ್ರೀನಕ್ಷತ್ರ ಮೊದಲು ಎಣಿಸುವಲ್ಲಿ ಪುರುಷನ ನಕ್ಷತ್ರ೪-೭-೧೦-೧೩-೧೬-೧೯-೨೨-೨೫ನೇ ನಕ್ಷತ್ರಗಳಾಗಿದ್ದರೆ ಇದು ಮಹೆಂದ್ರಕೂಟವುವಿವಾಹದಲ್ಲಿ ಪ್ರಶಸ್ತಗಳು,

## ಸ್ತ್ರೀದೀರ್ಘಕೂಟವು,

ಮೂ॥ಸ್ತ್ರೀಧಿಷ್ಣ್ಯಾದಾದ್ಯನವಸ್ತ್ರೀದೂರಮತಿನಿಂದಿತಂ । ಯೆಮಧ್ಯನವಯುಂಮಧ್ಯೋಕ್ತಂತೃತೀಯನವಕಂಶುಭಂ ॥ ಚತುರ್ದಶರ್ಕ್ಷಾದುಪರಿಸ್ತ್ರೀಬಾಹುಳ್ಯಂವಿಶಾಂಶುಭಂ॥

ಟೀ॥ಸ್ತ್ರೀಯ ನಕ್ಷತ್ರದ ದೆಸೆಯಿಂದ ಮೊದಲು೯ ನಕ್ಷತ್ರಗಳೊಳಗೆಪುರುಷ ನಕ್ಷತ್ರವಿದ್ದರೆ ಸ್ತ್ರೀದೀರ್ಘವೆಂಭ ಕೂಟವು, ಅತಿನಿಂದಿತವು. ಯೆರಡನೇ ನವಕದಲ್ಲಿ ಇದ್ದರೆಮಧ್ಯಮವು, ೩ನೇ ನವಕದಲ್ಲಿದ್ದರೆ ವುತ್ತಮವು. ವೈಶ್ಯರಿಗೆ ಸ್ತ್ರೀನಕ್ಷತ್ರವೊದಲು ಪುರುಷ ನಕ್ಷತ್ರವು೧೪ ನಕ್ಷತ್ರಗಳಮೇಲೆ ಇದ್ದರೆ ಶುಭವು.

## ಸ್ತ್ರೀದೀರ್ಘಕೂಟಾಪವಾದಃ.

ಮೂ ॥ ಸ್ತ್ರೀದೀರ್ಘಂಯದಿನೋದ್ಯಾಹೆಸ್ತ್ರೀನಾಶೋಭವತಿಧ್ರುವಂ।ನದೋಭೋನಾಸ್ತಿಯದ್ಯಸ್ತಿರಾಶಿಶ್ಚಗ್ರಹಮೈತ್ರಕಂ॥

ಟೀ॥ಮದುವೆಯಲ್ಲಿ ಸ್ತ್ರೀದೀರ್ಘಕೊಡವಿಲ್ಲದಿದ್ದರ ಸ್ತ್ರೀನಾಶವಹುದು, ರಾಶಿಕೊಟವು, ಗ್ರಹಮೈತ್ರ ಕೊಟವು ಸಹ ಇದ್ದರೆ ಆ ದೋಷವಿಲ್ಲ.

## ಯೋನಿಕೂಟವು.

ಮೂ॥ಅಶ್ವಿನೀಶತತಾರಾಶೌಭರಣೀರೇವತೀಗಜೌ । ಕೃತ್ತಿಕಾಪುಷ್ಯಭಂಛಾಗೌರೋಹಿಣೀಂದೂಭುಜಂಗಮೌ । ಮೂಲಾರ್ದ್ರೆತಥಾಶ್ವಾನೌಮಖಾಪೂರ್ವಾಚಮೂಷಕೌ । ಸಾರ್ಪಾದಿತ್ಯೇಚಮಾರ್ಜಾಲೌಸ್ವಾತಿಹಸ್ತಚನಾಹಿಷೌ। ವಿಶಾಖಾಚಿತ್ತಭೇವ್ಯಾಘ್ರೌಮೃಗೌಜ್ಯೇಷ್ಠಾನುರಾಧಕೌ। ಉತ್ತರೋತ್ತರಭಾದ್ರಾತುಗಾವೌಚಪರಿಕೀರ್ತಿತೌ । ಅಭಿಜಿಚ್ಛ್ರೋತ್ರರಾಷಾಢಾವಕೌಲೌ ಪರಿಕೀರ್ತಿತೌ ।ಪೂರ್ವಾಭಾದ್ರಾವಸೂಸಿಂಹೌಪೂರ್ವಾಷಾಢಾ ಹರಿಃಕಪಿಃ

ಟೀ॥ಅಶ್ವಿನೀ ಶತಭಿಷಕ್ ಈ ಯೆರಡೂ ಕುದುರೆ, ಭರಣೀ ರೇವತೀ ಈ೨ ಆನೆ, ಕೃತ್ತಿಕಾ ಪುಷ್ಯ ಈ ೨ಮೇಕೆ. ರೋಹಿಣೀ ಮೃಗಶೀರ್ಷ ಈ ೨ಸರ್ಪ, ಮೂಲ ಆದ್ರಾ ಈ೨ನಾಯಿ, ಮಖಾ ಪೂಫ ಈ೨ಇಲಿ, ಆಶ್ರೇಷಾ ಪುನರ್ವಸೂ ಈ೨ಬೆಕ್ಕು, ಸ್ವಾತೀ ಹಸ್ತ ಈ೨ಯೆಮ್ಮೆ, ವಿಶಾಖಾ ಚಿತ್ತಾ ಈ೨ಹುಲಿ, ಜ್ಯೇಷ್ಠಾ;ಅನೂರಾಧಾಈ೨ಹುಲ್ಲೆ, ಉತ್ತರಾ ಉತ್ತರಾಭಾದ್ರಾ ಈ೨ಹಸುವು. ಅಭಿಜತ್ ಉಷಾ ಈ೨ ಮುಂಗಿಸಿ, ಪೂಭಾ ಧನಿಷ್ಠಾ ಈ೨ ಸಿಂಹ, ಪೂರ್ವಾಷಾಢಾ ಶ್ರವಣ ಈ ೨ ಕಪಿ.

ಮೂ॥ ಪುಂಸ್ತ್ರೀಪೂರ್ವಪರೌಜ್ಞೇಯಾಧಿಷ್ಣ್ಯೇನಾಂಯೋನಿದತಃ।ಏಕಯೋನಿಷುಸಂಪತ್ತಿರ್ದಂಪತ್ಯೋಸ್ಸಂಗಮೇತಥಾ । ಭಿನ್ನಯೋನಿಷುಮಧ್ಯಂಸ್ಯಾದರಿಬಾವಂನಕಲ್ಪಯೇತ್।ಸ್ತ್ರೀಣಾಂ ಸ್ತ್ರೀಭಿಶ್ಚಸಂಯೋಗೆವಿವಾಹೊಮಧ್ಯಮೋಮತಃ । ಪುಂಸಾಂ ಪುಂಭಿಶ್ಚಸಂಯೋಗಸ್ಸದಾಶತ್ರುತ್ವಮಾಪ್ನುಯಾತ್॥

ಟೀ॥ಇಲ್ಲಿಹೇಳಲ್ಪಟ್ಟ ಎರಡು ನಕ್ಷತ್ರಗಳಲ್ಲಿ ಮೊದಲನೇದು ಪುರು

ಷನಕ್ಷತ್ರವಾಗಿರಬೇಕು, ಹೀಗೆ,ಯೋನಿಕೂಟನೋಡುವಾಗಸ್ತ್ರೀ ಪುರುಷರುವಂದೇಯೋನಿಯಾದರೇ ಉತ್ತಮ, ಶುಭ, ಇಬ್ಬರೂ ಬೇರೆ ಯೋನಿಯಾಗಿದ್ದರೆ ಮಧ್ಯಮಲು, ಇಷ್ಟೇಹೊರತು ಕ್ರೂರ ಯೋನಿ ಯೆಂದಿಗೂ ಆಗದುಸ್ತ್ರೀನಕ್ಷತ್ರದಲ್ಲಿ ಹುಟ್ಟಿದ ಕನ್ಯೆಗೂ ಅಂತಾ ಪುರುಷನಿಗೂ ವಿವಾಹಲುಶುಭಲು ಪುರುಷನ ನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀಪುರುಷರಿಗೆ ವಿವಾಹಲು ವೈರವನ್ನುಂಟುಮಾಡು ತ್ತದೆ.

ಮೂ॥ ಗೋವ್ಯಾಘ್ರಂಗಜ ಸಿಂಹಮಶ್ವಮಹಿಷಂಶ್ವೈಣಂಚಬಭ್ರೂರಗಂ।ವೈರಅವಾನರಮೇಷಕಂಚಸುಮಹತದ್ವೃದ್ಭಿಡಾಲೋದುರುಂ। ಲೋಕಾನಾಂ ವ್ಯವಹಾರತೋನ್ಯದಪಿಚಜ್ಞಾತ್ವಾಪ್ರಯತ್ನಾದಿಕಂ।ದಂಪತ್ಯೋರ್ನೃಕಭೃತ್ಯಯೋರಪಿರದಾವರ್ಜಂ ಶುಭಂಸ್ಯಾದಿತಿ॥

ಟೀ॥ಗೋವಿಗೆ ಹುಲಿಯು, ಆನೆಗೆ ಸಿಂಹ, ಕುದುರೆಗೆ ಯೆಮ್ಮೆಯು, ನಾಯಿಪೆ ಹುಲ್ಲೆ, ಮುಂಗಿಸಿಗೆ ಹಾಲು, ಕೋತಿಗೆ ಮೇಕೆ ಬೆಕ್ಕಿಗೆ ಇಲಿ, ಈಮೇರೆ ಲೋಕವ್ಯವಹಾರದಿಂದ ಯಿನ್ನು ಇತರಗಳನ್ನೂ ತಿಳಿದು ದಂಪತಿಗಳಿಗೂ ಸ್ವಾಮಿ ಭೃತ್ಯರಿಗೂ ಇಂತಾವೈರಿಯೋನಿಗಳನ್ನು ಬಿಟ್ಟರೆ ಶುಭವಹುದು.

ರಾಶಿ ಕೂಟ.

ಮೂ॥ ದ್ವಿಕೇದ್ವಾದಶಕೇಮೃತ್ಯುರಾಯುರ್ದ್ವಾದಶಕೇದ್ವಿಕೇ। ತೃತೀಯೈಕಾದಶೇದುಃಖಂಸುಖಮೇಕಾದಶತ್ರಿಕೇ।ಚತುರ್ಥದಶಕೇನಿಸ್ವಂಧನಂದಶಚತುರ್ಥಕೇ। ಅಶುಭಂಪಂಚನವಮೇಶುಭಂತುನವಪಂಚಕೇ। ಷಷ್ಠಾಷ್ಟಕೇಪುತ್ರನಾಶಃಪುತ್ರಲಾಭೋಷ್ಟಷಷ್ಠಕೇ। ಸಮಸಪ್ತೇತುಮಾಂಗಲ್ಯಂದಂಪತ್ಯೋಃಪ್ರೀತಿವರ್ಧನಮ್ ॥

ಟೀ॥ ಸ್ತ್ರೀಜನ್ಮರಾಶಿಗೆ ಪುರುಷನ ಜನ್ಮ ರಾಶಿಯು ೨ನೇದಾದರೆ ಮೃತ್ಯುವು, ಪುರುಷರಾಶಿಗೆ ಸ್ತ್ರೀರಾಶಿಯು ೧ನೇ ದಾದರೂ ಮೃತ್ಯುವು, ಸ್ತ್ರೀರಾಶಿಗೆ ಪುರುಷರಾಶಿಯು ೧೨ನೇ ದಾದರೂ ಪುರುಷರಾಶಿಗೆ ಸ್ತ್ರೀರಾಶಿ ೨ನೇ ದಾದರೂ ದೀರ್ಘಾಯುಷ್ಯವು, ಸ್ತ್ರೀರಾಶಿಗೆ ಪುರುಷರಾಶಿ ೩ನೇ ದಾದರೂ, ಪುರುಷರಾಶಿಗೆಸ್ತ್ರೀ

ರಾಶಿ ೧೧ನೇದಾದರೂ ದುಃಖವು, ಸ್ತ್ರೀರಾಶಿಗೆ ಪುರುಷರಾಶಿ ೧೧ ನೇ ದಾದರೂ ಪುರುಷರಾಶಿಗೆ ಸ್ತ್ರೀರಾಶಿ ೩ನೇ ದಾದರೂ ಸುಖವು, ಸ್ತ್ರೀರಾಶಿಯು ೧ನೇದಾದರೂ ಪುರುಷರಾಶಿಗೆ ಸ್ತ್ರೀರಾಶಿಯು ೧೦ನೇ ದಾದರೂ ದಾರಿದ್ರ್ಯವು, ಪುರುಷರಾಶಿಗೆ ಸ್ತ್ರೀರಾಶಿಯು ೧೦ ನೇದಾಗಿದ್ದರೂ ಧನವುಂಟಾಗುವದು, ಸ್ತ್ರೀರಾಶಿಗೆಪುರುಷರಾಶಿಯು ೫ನೇದಾಗಿಯೂ ಪುರುಷರಾಶಿಗೆ ಸ್ತ್ರೀರಾಶಿ ೯ನೇದಾಗಿಯೂ ಇದ್ದರೆ ಅಶುಭವು, ಸ್ತ್ರೀರಾಶಿ ೯ನೇದಾಗಿಯೂಪುರುಷರಾಶಿಗೆ ಸ್ತ್ರೀರಾಶಿ ೫ನೇದಾಗಿಯೂ ಇದ್ದರೆ ಶುಭವು, ಸ್ತ್ರೀರಾಶಿಗೆ ಪುರುಷರಾಶಿ ೬ನೇ ದಾಗಿಯೂ ಪುರುಷರಾಶಿಗೆ ಸ್ತ್ರೀರಾಶಿ ೮ ನೇದಾಗಿಯೂ ಇದ್ದರೆ ಪುತ್ರನಾಶವು, ಸ್ತ್ರೀರಾಶಿಗೆ ಪುರುಷರಾಶಿ ೮ನೇದಾಗಿಯೂ ಪುರುಷರಾಶಿಗೆಸ್ತ್ರೀರಾಸಿ ೬ನೇದಾದರೂಪುತ್ರಲಾಭವು, ಸ್ತ್ರೀಪುರುಷರಾಶಿಗಳೆರಡೂಸಮಸಪ್ತಮಗಳಾಗಿಇದ್ದರೆ ಸೌಮಂಗಲ್ಯವೂದಂಪತಿಗೆಪರಸ್ಪರಪ್ರೀತಿಯೂವುಂಟಾಗುವದು

ಅದಕ್ಕೆಅಪವಾದವು.

ಮೂ ॥ ಓಜೌಲಯಸ್ತ್ರಿಯೋಯತ್ರಮಿತ್ರಂಷಷ್ಠಾಷ್ಟಮಂವದೇತ್। ಯುಗ್ಮೇದ್ವಿದ್ವಾದಶಂಚೈವದಂಪತ್ಯೋಃಶುಭದಂಭವೇತ್॥

ಟೀ॥ ಸ್ತ್ರೀರಾಶಿಯು ಓಜರಾಶಿಯಾದರೆ ಅದಕ್ಕೆ ೬-೮ನೇರಾಶಿಗಳಿಗೆಮಿತ್ರತ್ವವುಂಟಾಗುವದು.ಮತ್ತುಯುಗ್ಮರಾಸಿಯಲ್ಲಿಹುಟ್ಟಿದಸ್ತ್ರೀಗೆ೨-೧೨ನೇರಾಶಿಗಳುದಂಪತಿಗೆಶುಭಕರವಾಗುವದು.

ಅಪವಾದವು

ಮೂ ॥ ದ್ವಿದ್ವಾದಶೇವಾನವಪಂಚಮೇವಾಷಷ್ಠಾಷ್ಟಕೇರಾಕ್ಷಸಕನ್ಯಕಾಯಾಃ । ಏಕಾಧಿಪತ್ಯೇಪ್ಯುಭಯೋಸ್ಸುಹೃತ್ವೇಪಾಣಿಗ್ರಹೋಮಂಗಳಮಾತನೋತಿ ॥

ಟೀ॥ ೨-೧೨ನೇ ರಾಶಿಗಳಲ್ಲಾದರೂ, ೯-೫ನೇರಾಶಿಗಳಲ್ಲಾದರೂ, ೬-೮ನೇ ರಾಶಿಗಳಲ್ಲಾದರೂ, ಕನ್ಯೆಯು ರಾಕ್ಷಸಗಣದವಳಾದ್ದರೂ, ಅಥವಾ ಎರಡೆರಡು ರಾಶಿಗಳ ಅಧಿಪತಿಯೊಬ್ಬನೆ ಯಾದರೂ,ಬೇರೆಬೇರೆಗ್ರಹಗಳಧಿಪತಿಗಳಾಗಿದ್ದಾಗ್ಯೂ ಅವರಿಗೆಮಿತ್ರತ್ವವುಂಟಾಗಿದ್ದರೂ,ಆಸ್ತ್ರೀಪುರುಷರಿಗೆಮದುವೆಶುಭಕರವಹುದು.

ಮೂ॥ ತೃತೀಯೈಕಾದಶೌಯತ್ರಚತುರ್ಥದಶಮಾನಪಿ। ಉಭಯೋಸ್ಸಪ್ತಮಸ್ತತ್ರಗ್ರಹಮೈತ್ರಂನಶೋಧಯೇತ್॥

ಟೀ॥ ಯಾವ ದಂಪತಿಗಳುಪರಸ್ಪರ ಒಂದೇರಾಶಿಯಲ್ಲಿಹುಟ್ಟಿ ಇದ್ದಾರೋಅಥವಾಪರಸ್ಪರಸಮಸಪ್ತಮರಾಶಿಗಳಲ್ಲಿಹುಟ್ಟಿಇದ್ದಾರೋಅಂತವರಿಗೆಗ್ರಹಮೈತ್ರಕೂಟವನ್ನುಪರಿಶೋಧಿಸತಕ್ಕದ್ದಲ್ಲ

ಮೂ॥ ಝುಷಾಳಿಕರ್ಕಟಾವಿಪ್ರಾಃಕ್ಷತ್ರಾಸ್ಸಿಂಹಧನುಸ್ತುಲಾಃ। ಮೇಷಯುಗ್ಮಘಟಾವೈಶ್ಯಾಶ್ಶೂದ್ರಾವೃಷಮೃಗಾಂಗನಾಃ ॥

ಟೀ॥ ಮೀನ ವೃಶ್ಚಿಕ ಕರ್ಕಾಟಕಗಳು ಬ್ರಾಹ್ಮಣ ಜಾತಿಯು, ಸಿಂಹಧನುಸ್ಸು, ತುಲೆಗಳು ಕ್ಷತ್ರಿಯ ಜಾತಿಯು, ಮೇಷ, ಮಿಥುನ, ಕುಂಭಗಳು ವೈಶ್ಯಜಾತಿಯು, ವೃಷಭ, ಕನ್ಯಾ, ಮಕರಗಳು ಶೂದ್ರಜಾತಿಯು.

ಮೂ॥ ವರ್ಣಶ್ರೇಷ್ಠಾಂವರ್ಣಹೀನಂವಿವಾಹಂನೈವಕಾರಯೇತ್। ಯದಿಕುರ್ಯಾತ್ತ್ತಮೋಹೇನಸದ್ಯೋಭರ್ತಾವಿನಿಶ್ಯತಿ ॥

ಟೀ॥ ಉತ್ತಮಜಾತಿಯ ನಕ್ಷತ್ರದವಳಾದಕನ್ಯೆಗೂಹೀನಜಾತಿ ನಕ್ಷತ್ರದಪುರುಷನಿಗೂಮದುವೆಯಾಗಕೂಡದು, ವೊಂದುವೇಳೆಅಜ್ಞಾನದಿಂದಮಾಡಿದರೆತಕ್ಷಣವೇಪುರುಷನುನಾಶವನ್ನುಒಂದುವ

ವಶ್ಯ ಕೂಟವು.

ಮೂ॥ ಸಿಹಾಳೀಕರ್ಕಿವಣಿಜೌಕನ್ಯಾವೃಶ್ಚಿಕಕಾಮುರ್ಕಕೌ।ತುಲಾಮೀನೆಯುಮಾನಕ್ರಕನ್ಯೆಕರ್ಕಟಕಸ್ತ್ಮಿಃ। ಮೇಷಕುಂಭಾವಜೋನಕ್ರೋಮೇಷಾದೇರ್ವಶ್ಯರಾಶಯಃ ॥

ಮೇಷರಾಶಿಗಗೆ ಸಿಂಹ ವೃಶ್ಚಿಕಗಳು, ವೃಷಭಕ್ಕೆ ಕಟಕ ತುಲೆಳು, ಮಿಥುನಕ್ಕೆಕನ್ಯೆಯು, ಕಟಕಕ್ಕೆ ವೃಶ್ಚಿಕ ಧನುಸ್ಸು, ಸಿಂಹಕ್ಕೆತುಲೆಯು, ಕನ್ಯೆಗೆ ಮೀನ ಮಿಥುನಗಳು, ತುಲೆಗೆಮಕರಕನ್ಯೆಗಳು, ವೃಶ್ಚಿಕಕ್ಕೆಕಟಕವು, ಧನುಸ್ಸುಗೆ ಮೀನವು,ಮಕರಕ್ಕೆಮೇಷಕುಂಭಗಳು, ಕುಂಭಕ್ಕೆಮೇಷವು, ಮೀನಕ್ಕೆ ಮಕರವು, ಈಮೇರೆ ಈ ರಾಶಿಗಳಿಗೆ ಈ ರಾಸಿಗಳುವಶ್ಯಗಳು.

ಮೂ॥ ವಶ್ಯಯೋಗಾಚ್ಚಭಂಪ್ರೋಕ್ತಂಸ್ತ್ರೀರಾಶೇಃಪುರುಷಸ್ಯಚ। ಕನ್ಯಕಾವರಯೋರ್ನಿತ್ಯಂ ಶೋಧಯನ್ನೃಪಭೃತ್ಯಯೋಃ ॥

ಟೀ॥ ಸ್ತ್ರೀಪುರುಷರ ರಾಶಿಗಳುವಶ್ಯಗಳಾಗಿಇದ್ದರೆಶುಭಜ, ಹೀಗೆ ಯೇಅರಸನಿಗೂಭೃತ್ಯರಿಗೂವಶ್ಯಕೂಟವುನೋಡಿಕೊಳ್ಳತಕ್ಕದು

ಗ್ರಹವೈತ್ರಂ.

ಮೂ॥ ಶತ್ರೂಮಂದಸಿತೌ ಸಮಶ್ಶಶಿಸುತೋಮಿತ್ರಾಣಿಶೇಷಾರ ವೇಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚ ಸುಹೃದೌಶೇಷಾಸ್ಸಮಾಶ್ಶೀ ತಗೋಃ । ಜೀವೇಂದೂಷ್ಣಕರಾಃ ಕುಜಸ್ಯಸುಹೃದೋಜ್ಞೋರಿಸ್ಸಿ ತಾರ್ಕಿಃಸಮಾಮಿತ್ರೇಸೂರ್ಯಸಿತೌಬುಧಸ್ಯಹಿಮಗುಶ್ಶತ್ರುಸ್ಸ ಕ್ಷಾಶ್ಚಾಪರೇ॥ ಸೂರೇಸ್ಸೌಮ್ಯಸಿತಾವರೀರವಿಸುತೋಮಧ್ಯಃಪರೇತ್ವ ನ್ಯಥಾ । ಸೌಮ್ಯಾರ್ಕೀಸುಹೃಸುಹೃದೌಸಮಾಕುಜಗುರೂಶು ಕ್ರಸ್ಯಶೇಷಾವರೀ । ಶುಕ್ರಜ್ಞೌಸುಹೃದೌಸಮಸ್ಸುರಗುರು ಸ್ಸೌರಸ್ಯಚಾನ್ಯೇರಯೋ॥ ಯೇಪ್ರೋಕ್ತಾಸ್ಸುಹೃದಸ್ತ್ರಿಕೋ ಣಭವನಾತ್ತೇಮೀಮಯಾಕೀರ್ತಿತಾಃ ॥

ಟೀ॥ ಸೂರ್ಯನಿಗೆ ಶನಿ ಶುಕ್ರರು ಶತ್ರುಗಳು, ಬುಧನು ಸಮ ನು, ಕಡಮೆಯವರು ಮಿತ್ರರು, ಚಂದ್ರನಿಗೆ ಸೂರ್ಯನು ಬುಧನು ಸಹ ಮಿತ್ರರು ಕಡಮೆಯವರು ಸಮರು, ಕುಜನಿಗೆ ಗುರು ಚಂ ದ್ರಸೂರ್ಯರು ಮಿತ್ರರು, ಬುಧನುಶತ್ರುವು ಅನ್ಯರು ಸಮರು ಬುಧ ನಿಗೆ ರವಿ ಶುಕ್ರರು ಮಿತರು, ಚಂದ್ರನು ಶತ್ರುವು, ಅನ್ಯರು ಸಮ ರು ಗುರುವಿಗೆ ಬುಧ ಶುಕ್ರರು ಶತ್ರುಗಳು ಶನಿಯು ಸಮು, ಅ ನ್ಯರು ಮಿತ್ರರು, ಶುಕ್ರನಿಗೆ ಬುಧ ಶನಿಗಳು ಮಿತ್ರರುಕುಜಗುರು ಗಳು ಸಮರು, ಮಿಕ್ಕವರು ಶತ್ರುಗಳು, ಶನಿಗೆ ಶುಕ್ರ ಬುಧರು ಮಿ ತ್ರರು, ಗುರುಸಮನುಮಿಕ್ಕವರುಶತ್ರುಗಳುಯೆಂದುತಿಳಿಯುವದು

ಮೂ॥ಉತ್ತಮೋಮಿತ್ರವರ್ಗಸ್ಸ್ಯಾತ್ಸಮಿತ್ರಸಮಮಧ್ಯಮಃ ಕನಿಷ್ಟಸ್ಸಮವರ್ಗಸ್ತುವೈರಿವರ್ಗಸ್ತುಮಾರಕಃ ॥

ಟೀ॥ ವಿವಾಹದಲ್ಲಿ ಎರಡು ಮಿತ್ರವರ್ಗವಾಗಿದ್ದರೆ ಉತ್ತಮವು ಒಂದು ಮಿತ್ರಮತ್ತೊಂದುಸಮವಾಗಿದ್ದರೆಮಧ್ಯಮ, ಎರಡೂಮ ಧ್ಯಮವಾಗಿದ್ದರೆ ಅಧಮ,ಎರಡುವೈರಿವರ್ಗವಾಗಿದ್ದರೆಮಾರಕವು.

ಮೂ॥ ಕಲಹಃಶತ್ರುಮಿತ್ರತ್ವೇವಿಯೋಗಸ್ಸಮಶತ್ರುಕೇ । ಅಂಶ ನಾಯಕಯೋಃಪ್ರೀತಾವುತ್ತಮಪ್ಪಾಣಿಪೀಡನಂ ॥

ಟೀ॥ ಎರಡುರಲ್ಲಿ ಒಂದು ಶತ್ರುವಾಗಿಯೂ ಒಂದು ಮಿತ್ರವಾದರೆ ದಂಪತಿಗಳಿಗೆ ಕಲಹಉಂಟಾಗುತ್ತಲಿರುವದು, ಶತ್ರುಸಮಗಳಾಗಿದ್ದರೆ ದಂಪತಿಗಳುಶೇರದೆ ಇರುವರು, ಸ್ತ್ರೀಪುರುಷರ ರಾಶ್ಯಾಧಿ ಪತಿಗಳಿಗೆ ಮಿತ್ರತ್ವವಿಲ್ಲದಿದ್ದರೂ ಅಂಶಾಧಿಪತಿಳಗಳಿಗೆಮಿತ್ರತ್ವ ವಿದ್ದವವಿವಾಹವು ಶುಭಕರವು.

## ರಜ್ಜುಕೂಟವು.

ಮೂ॥ ವಿಧುಬಿಂಬತ್ರಯಂ ಚೈವತಿರ್ಯಗ್ರೇಖಾಚತುಷ್ಟಯಂ ।
ಅಶ್ವಿನ್ಯಾದೀನಿಧಿಷ್ಣ್ಯಾನಿವಾಮಹಾರ್ಯ್ಯಾದಿವಿನ್ಯಸೇತ್ ॥

ಟೀ॥ ದೀರ್ಘ ವೃತ್ತಗಳಾದ ಮೂರುಮಂಡಲಗಳನ್ನು ಬರದು ಅವುಗಳಮೇಲೆಳಅಡ್ಡಗೆರೆಗಳನ್ನು ಬರದುಆವುಗಳಲ್ಲಿಯೆಡಗಡೆ ರೇಖೆಯುಮೊದಲುಅಶ್ವಿನ್ಯಾದಿಯಾಗಿನಕ್ಷತ್ರಗಳನ್ನು ಬರಿಯತಕ್ಕದು

ಮೂ॥ ಶಿರಃಕಂಠೋದರಃಕಟೀಪಾದರೇಖಾದಿಬೆದತಃ । ಏಕರೇಖಾ
ಭವೇನ್ನಾಶೋಭಿನ್ನರೇಖಾಶುಭಾವಹಃ ॥

ಟೀ॥ ಶಿರಸ್ಸಿನ ರೇಖೆ, ಕಂಠ ರೇಖೆ, ಉದರ ರೇಖೆ ಕಟೀರೇಖೆ, ಪಾದರೇಖೆ, ಹೀಗೆ ರೇಖೆಗಳ ಮೇಲೆ ನಕ್ಷತ್ರಗಳನ್ನು ಬರಿಯುವಾಗ ಹೆಣ್ಣು ಗಂಡುಗಳ ನಕ್ಷತ್ರಗಳೆಂದೇ ರೇಖೆಯಲ್ಲಿದ್ದರೆ ನಾಶವು, ಬೇರೇ ರೇಖೆಗಳಲ್ಲಿ ಇದ್ದರೆ ಶುಭ ಉಂಟಾಗುವದು.

ಮೂ॥ ಅಶ್ವಿಸಾರ್ಪಮಖಾಜ್ಯೇಷಾಮೂಲಾಂತ್ಯಂಪಾದರಜ್ಜವಃ ।
ಯಮಾರ್ಯಭಾಗಾಮೈತ್ರಾಪ್ಯಮಹಿರ್ಬುಧ್ನ್ಯಃಕಟೀರತಾಃ ॥
ಅಗ್ನ್ಯಾದಿತ್ಯಾರ್ಯ್ಯಮಾಶೂರ್ಪವಿಶ್ವಪ್ರೋಷ್ಠಪದೋದರೆ। ಬ್ರಹ್ಮ
ರುದ್ರಕರಸ್ವಾತಿಶ್ರವಣಂ ವಾರುಣಂತಥಾ। ಕಂಠರಜ್ಜುರ್ದ್ವಿಜಾ
ನೀಂದ್ರಾದ್ವಸುಚಿತ್ರೆಂದುಮಸ್ತಕಂ ॥

ಟೀ॥ ಆಶ್ವಿನೀ, ಅಶ್ರೇಷಾ, ಮಖಾ, ಜ್ಯೇಷ್ಠಾ, ಮೂಲ, ರೇವತೀ ಈ ೬ ನಕ್ಷತ್ರಗಳು ಪಾದ ರಜ್ಜುಗಳು, ಭರಣೀ, ಪುಷ್ಯ, ಪುಬ್ಬ ಅನೂರಾ, ಪೂಷಾ, ಉಭಾ, ಈ ೬ ನಕ್ಷತ್ರಗಳು ಕಟಿರಜ್ಜುಗಳು, ಕೃತ್ತಿಕಾ, ಪುನರ್ವಸು, ಉತ್ತರಾ ಫಲ್ಗುನೀ, ವಿಶಾಖಾ, ಉಷಾ, ಪೂರ್ವಾಭಾದ್ರ ಈ ೬ನ್ನು ಉದರ ರಜ್ಜುಗಳು. ರೋಹಿಣೀ, ಆದ್ರಾ, ಹಸ್ತ, ಸ್ವಾತಿಶ್ರವಣ,ಶತಭಿಷಕ್,ಈ೬ನ್ನು ಕಂಠರಜ್ಜುಗಳು,ಧನಿಷ್ಠಾ

ಚಿತ್ರಾ, ಮೃಗಶೀರ್ಷ ಈ ಮೂರು ನಕ್ಷತ್ರಗಳು ಶಿರೋರಜ್ಜುಗಳು.

## ಏಕರೇಖಾ ರಜ್ಜುಫಲವು.

ಮೂ॥ ಮಖಿಪತಿಂಗಳೆಕನ್ಯಾಂಕುಕ್ಷಾಸ್ವಸ್ಯಾತ್ಮಜಾರ್ನಹರೇತ್।
ದರಿದ್ರತಾಭವೇತ್ಕಟ್ಯಾಂಪಾದೇವಾಭ್ರಮಣಂತಥಾ ॥

ಟೀ॥ ವಧೂವರರ ನಕ್ಷತ್ರಗಳು ಶಿರಸ್ಸಿನ ರೇಖೆಯಲ್ಲಿದ್ದರೆ ಪತಿಯನ್ನು, ಕಂಠ ರಜ್ಜುವಿನಲ್ಲಿ ಬಂದರೆ ಕನ್ಯೆಯನ್ನು, ಉದರ ರಜ್ಜುವಲ್ಲಾದರೆ ದಂಪತಿಗಳ ಮಕ್ಕಳನ್ನು ನಾಶಮಾಡುವದು, ಸೊಂಟದ ರಜ್ಜುವಲ್ಲಿ ಬಂದರೆ ದಾರಿದ್ರ್ಯ ಉಂಟಾಗುವದು, ಪಾದರಜ್ಜುವಲ್ಲಿ ಬಂದರೆ ಅವರು ತಿರುಗುತ್ತಲಿರುವರು.

## ವೇಧಾ ಕೂಟವು.

ಮೂ॥ ಆಶ್ವಾದಿಮೂಲಾದಿ ಮಖಾದಿಭಾನಾಂ ಕ್ರಮಾಚ್ಚತು
ರ್ಣಾಮಪಿವೇಧಿತಾಸ್ಸ್ಯುಃ। ಪುರಾಣರಾಜಾಮುನುಭಾನುಸಂಖ್ಯ
ಯಾಚಾನ್ಯೋನ್ಯವದಾವಸುಸೋಮಚಿತ್ರಾಃ ॥

ಟೀ॥ ಅಶ್ವಿನಿಗೆ ೧೮ನೇ ನಕ್ಷತ್ರಕ್ಕೂ, ಭರಣಿಗೆ ೧೬ನೇ ನಕ್ಷತ್ರಕ್ಕೂ ಕೃತ್ತಿಕೆಗೆ ೧೪ನೇ ನಕ್ಷತ್ರಕ್ಕೂ ರೋಹಿಣಿಗೆ ೧೨ನೇನಕ್ಷತ್ರಕ್ಕೂ ವೇಧೆಯುಂಟಾಗಿರುವದರಿಂದಅವು ವೇದಾನಕ್ಷತ್ರಗಳುಇವುಗಳಲ್ಲಿಮದುವೆ ಮಾಡಕೂಡದು ಈ ಪ್ರಕಾರವೇ ಅಶ್ವಿನಿಮೊದಲು ೪ ನಕ್ಷತ್ರಗಳಿಗೂ ಮಖೆ ಮೊದಲು ೪ ನಕ್ಷತ್ರಗಳಿಗೂ ಮೂಲಮೊದಲು ೪ ನಕ್ಷತ್ರಗಳಿಗೂ ವೇಧೆಗಳುಂಟುಮತ್ತುಧನಿಷ್ಠಾ, ಮೃಗಶಿರಿ, ಚಿತ್ರಾಈ ೩ ನಕ್ಷತ್ರಗಳಿಗೂ ಪರಸ್ಪರ ವೇಧೆಯುಂಟು.

ಮೂ॥ ವಿದ್ಧಾಶ್ಚೈವಪರಸ್ಪರಂಯದಿಭವೇತ್ತಾರಾವಿವಾಹೇತದಾ।
ಸ್ಯಾಚ್ಛೀಘ್ರಂಯಮರಾಜಪುಣ್ಯಲಲನಾಸಂಗಾಂಗಭೋವರಃ ॥

ಟೀ॥ ವಿವಾಹದಲ್ಲಿ ಸ್ತ್ರೀಪುರುಷ ನಕ್ಷತ್ರಗಳು ಪರಸ್ಪರ ವಿರುದ್ಧಗಳಾಗಿದ್ದರೆಮದವಣಿಗನಿಗೆ ಶೀಘ್ರವಾಗಿ ಯಮರಾಯನ ದರ್ಶನ ಉಂಟಾಗುವದು.

## ನಾಡೀಕೂಟ.

ಮೂ॥ ಚತುರ್ನಾಡೀತ್ರಿಬಾಹ್ಲೀಕೇಪಾಂಚಾಲೇಪಂಚಪರ್ವಭಿಃ।
ಅನ್ಯದೇಶೇತ್ರಿನಾಡೀಸ್ಯಾನ್ನಾಡೀಮುಖ್ಯಾಕರಗ್ರಹೇ ॥

ಟೀ॥ ಬಾಹ್ಲೀಕ ದೇಶದಲ್ಲಿ ನಾಲ್ಕು ಪರ್ವಗಳಿಂದಲೂ, ಪಾಂಚಾಲ ದೇಶದಲ್ಲಿ ಪಂಚಪರ್ವಗಳಿಂದಲೂ, ಇತರ ದೇಶಗಳಲ್ಲಿ ಮೂರು ಪರ್ವಗಳಿಂದಲೂ ನಾಡೀ ಕೂಟವನ್ನು ವಿಚಾರಿಸತಕ್ಕದ್ದು. ನಾಡೀ ಕೂಟವೆಂಬದು ವಿವಾಹದಲ್ಲಾವಶ್ಯವಾದುದು.

ಮೂ॥ ನಾಡ್ಯಸ್ತ್ರಸ್ತ್ರ್ಯರ್ಕ್ಷನಿಶ್ಯೇಷಧಿಷ್ಣ್ಯಸ್ತ್ರೀಭ್ಯೋಶ್ವಿ
ನ್ಯಾದಿಭ್ಯಪಿವಪ್ರಶಸ್ತಾಃ । ಸರ್ಪಾಕಾರಾತತ್ರನಾಡೀಸಮಾ
ಯಾಂ ನಕ್ಷತ್ರಾಣಾಮೇಕನಾಡೀಮೃತಿಸ್ಯಾತ್ ॥

ಟೀ॥ ಅಶ್ವಿನೀ ಮೊದಲಾದ ನಕ್ಷತ್ರಗಳನ್ನು ಬೆರಳುಗಳ ಪರ್ವಗಳ ಮೇಲೆ ಮೂರುಮೂರು ನಾಡಿಗಳಾಗಿ ಆರೋಹಾವರೋಹಣ ಕ್ರಮದಿಂದ ಯೋಜಿಸುವಾಗ ಆ ಮೂರು ನಾಡಿಗಳೊಳು ಒಂದೇ ನಾಡಿಯಲ್ಲಿ ಸ್ತ್ರೀಪುರುಷರನಕ್ಷತ್ರಗಳೆರಡು ಸೇರಿದರೆ ಅಂತಾ ಕನ್ಯೆಯನ್ನು ಬಿಟ್ಟು ಬಿಡತಕದ್ದು. ಹಾಗಿಲ್ಲದೆ ಸ್ತ್ರೀನಕ್ಷತ್ರವಂದುನಾಗಿಯಲೂ, ಪುರುಷ ನಕ್ಷತ್ರ ಮತೊಂದುನಾಡಿಯಲೂ ಇದ್ದರೆ ಆ ವಿವಾಹವು ಶುಭಕರವಹುದು.

ಮೂ॥ ಬ್ರಹ್ಮಕ್ಷತ್ರವಿಶಾಂನಾಡ್ಯೋಮಧ್ಯದಕ್ಷಿಣವಾಮತಃ। ಬ್ರಾ
ಹ್ಮಣಾದೇರ್ವಿಶೇಷೇಣಮಧ್ಯನಾಡ್ಯಾದಿನಿಂದಿತಂ ॥

ಟೀ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಧ್ಯದಕ್ಷಿಣ ವಾಮನಾಡಿಗಳುನಿರ್ಣೀತಗಳ, ಹ್ಯಾಗುದರೆ, ಬ್ರಾಹ್ಮಣರಿಗೆ ಮಧ್ಯ ನಾಡಿ ಯೆಂಬದಾಗಿಯೂ, ಕ್ಷತ್ರಿಯರಿಗೆ ದಕ್ಷಿಣನಾಡಿ ಯೆಂಬದಾಗಿಯೂ ವೈಶ್ಯರಿಗೆ ವಾಮನಾಡೀಯೆಂಬದಾಗಿಯೂ ತಿಳಿಯತಕ್ಕದ್ದು, ಮತ್ತು ಬ್ರಾಹ್ಮಣರು ಮುಂತಾದವರಿಗೆ ವಿಶೇಷವಾಗಿಮಧ್ಯನಾಡಿಯೇ ನಿಷೇಧಿಸಲ್ಪಟ್ಟಿರುತ್ತದೆ,

ಮೂ॥ ಸಾಮಧ್ಯನಾಡೀಪುರುಷಂನಹಂತಿತ್ಪಾರ್ಶ್ವನಾಡೀಖಲುಕ
ನ್ಯಕಾಂಚ। ಆಸನ್ನಪರ್ಯಾಯಗತಾಸ್ಸಮಾಷದ್ವಿಷರ್ಷಣವಾ
ಚ್ಯೆಂಕ್ರಮಶಸ್ತ್ರಿವರ್ಷೇಃ॥

ಟೀ॥ ಮಧ್ಯನಾಡಿಯು ಪುರುಷ ನಾಶಕವು, ಪಾರ್ಶ್ವನಾಡಿ ಕನ್ಯೆಗೆ ನಾಶಕರವು, ಮೊದಲನೇ ಪಾರ್ಯಾಯದಲ್ಲಿ ಸಮನಾಡಿಯಾದರೆ ಒಂದನೇ ವರ್ಷದಲ್ಲೇನಾಶಕರವು, ಎರಡನೇ ಪರ್ಯಾಯದಲ್ಲಿ

೨ನೇವರುಷದಲ್ಲಿ॥ ೨ನೇಪರ್ಯಾಯದಲ್ಲಿ ೩,ನೇ ವರುಷದಲ್ಲಿಯೆಂದು ಕ್ರಮವಾಗಿ ತಿಳಿಯತಕ್ಕದ್ದು.

## ರಜ್ಜುಕೂಟಾಪವಾದವು,

ಮೂ॥ ರಜ್ಜೋರಭಾವೋಯದ್ಯಸ್ತಿರಾಶಿಶ್ಚ ಗ್ರಹಮೈತ್ರಕಂ। ದಿ
ನಮಾಹೇಂದ್ರಯುಕ್ತೋಪಿ ರಜ್ಜುದೋಷೋನವಿದ್ಯತೇ ॥

ಟೀ॥ ರಾಶಿಕೂಟವು, ಗ್ರಹಮೈತ್ರವು, ದಿನ, ಮಾಹೇಂದ್ರ, ಈ ನಾಲ್ಕು ಕೂಟಗಳೂ,ಇದ್ದರೆರಜ್ಜುಕೂಟಇಲ್ಲದಿದ್ದರೂದೋಷವಿಲ್ಲ,

ಮೂ ॥ ಅಹಿರುಧ್ನ್ಯದ್ವಯೆಚೈವ ಪ್ರಾಜಾಪತ್ಯೇತ್ರಯೆತಥಾ
ಶ್ರುತಿಪುಷ್ಯವಿಶಾಖಾಸು ನಾಡೀದೋಷೋನವಿದ್ಯತೇ ॥

ಟೀ॥ ಉಭಾ, ರೇವತಿ, ರೋಹಿಣೀ, ಮೃಗಶಿರ, ಅರ್ದ್ರಾ, ಶ್ರವಣ, ಪುಷ್ಯವಿಶಾಖಾ,ಈ ನಕ್ಷತ್ರಗಳಿಗೆ ನಾಡೀದೋಷವಿಲ್ಲಅಂದರೆಇಂಧರಿಸ್ತ್ರೀಪುರುಷನಕ್ಷತ್ರಗಳೊಂದುನಾಡಿಯಲ್ಲಿದ್ದರೂದೋಷವಿಲ್ಲ

## ಅಂಶನಾಡೀದೋಷಪ್ರಕಾರವು.

ಮೂ॥ ನಕ್ಷತ್ರಾದಂಶತೋನಾಡೀಕೂಟಂಸಾಮಾನ್ಯಮುಚ್ಯತೇ।
ನಕ್ಷತ್ರಪಾದಭೇದೇನನಾಡೀಮುಖ್ಯಾಕರಗ್ರಹೇ॥

ಟೀ॥ನಕ್ಷತ್ರಾಗಳಿಂದಲೂ, ನಕ್ಷತ್ರಪಾದಗಳಿಂದಲೂ, ನಾಡೀಕೂಟವನ್ನು ನೋಡತಕ್ಕದ್ದು, ಸಾಮಾನ್ಯವು ವಿವಾಹದಲ್ಲಿ ನಕ್ಷತ್ರದಿಂದನಕ್ಷತ್ರಪಾದವು ಮುಖ್ಯವು.

ಮೂ ॥ದಿಸ್ರಾದ್ಯಂಶಾಸ್ತುವಿಜ್ಞೇಯಾಅಷ್ಟೋತ್ತರಶತಂಕ್ರಮಾ
ತ್।ಪೂರ್ವಂನಕ್ಷತ್ರಸಂಖ್ಯಾವದ್ಗಣಯೆದಂಶನಾಡಿಕಾಃ॥

ಟೀ॥ಅಶ್ವಿನೀ ಮೊದಲು ೨೭ ನಕ್ಷತ್ರಗಳಿಗೆ ೧೦೮ ಪಾದಗಳಾಗುತ್ತವೆ.ಮೊದಲು ನಕ್ಷತ್ರಗಳಿಂದ ನಾಡಿಗಳನ್ನೆಣಿಸಿದಂತೆ ನಕ್ಷತ್ರಪಾದಗಳನ್ನು ಎಣಿಸತಕ್ಕದ್ದು,

## ನಾರದೀಯೆ.

ಮೂ ॥ ಚತುಸ್ತ್ರಿದ್ವ್ಯಂಘ್ರಿಭೋದ್ಭಾಯಾಃಕನ್ಯಾಯಾಃಕ್ರಮ
ಶೋಶ್ವಿಭಾಕ್॥ವಹ್ನಿಭಾಗಿಂದುಭಾಜ್ನಾಡೀತ್ರಿಚತುಃಪಂಚಪರ್ವಸು

ಟೀ॥ನಾಲ್ಕುಪಾದವುಳ್ಳ ನಕ್ಷತ್ರದಲ್ಲಿ ಹುಟ್ಟಿದ ಕನ್ಯೆಗೆ ಅಶ್ವಿನೀ ಮೊದಲಾಗಿ ಮೂರುನಾಡೀಪರ್ವಗದಲ್ಲಿಯೂ, ತ್ರಿಪಾದ ನಕ್ಷತ್ರದ

ಲ್ಲಿ ಹುಟ್ಟಿದವಳಿಗೆ ಕೃತ್ತಿಕೆ ಮೊದಲಾಗಿ ನಾಲ್ಕು ನಾಡೀ ಪರ್ವಗಳ ಲ್ಲಿಯೂ ದ್ವಿಪಾದ ನಕ್ಷತ್ರಗಳಲ್ಲಿ ಹುಟ್ಟಿದವಳಿಗೆ ಮೃಗಶಿರಮೊದಲು ಐದುನಾಡಿಗಳು ಪರ್ವಗಳಲ್ಲೂನಾಡಿ ಯೋಜಿಸಬೇಕು

ಮಾತುಲಕನ್ಯಾವಿವಾಹವು.

ಮೂ ॥ರಾಶೀಶತೃತ್ವಮಧ್ಯೈಕನಾಡಿಷಷ್ಠಾಷ್ಟಮಂವಾನವಪಂಚಮಂವಾ । ಕರಗ್ರಹೆಮಾತುಲಕನ್ಯಕಾಯಾಶ್ಯುಭೊಯದಿಸ್ಯಾಚ್ಛಕುನಂತ್ವಭೀಷ್ಟಂ॥

ಟೀ॥ ಸೋದರಮಾವನ ಮಗಳನ್ನು ಮದುವೆ ಮಾಡಿಕೊಳ್ಳುವಲ್ಲಿ ರಾಶಿಶತೃತ್ವ ರಾಶ್ಯಧಿಪತಿ ಶತೃತ್ವವು, ರಾಶಿಗಳ ಷಾಷ್ಟಾಷ್ಟಮವು,ನವಪಂಚಮಗಳು ಇವುಗಳಿದ್ದರೂಶುಭಶಕುನವಾದರೆ ಆವಿವಾಹಉ ಮಂಗಳಕರಮಹುದು.

ಮೂ॥ಗೌತಮ್ಯಾಯಾಮ್ಯದಿಗಾಗೆ ಕಾವೀರ್ಯಾಶ್ಚೋತ್ತರತಟೆ। ಮಾತುಲಸ್ಯತೊದ್ವಾಹಂ ಪ್ರಶಂಸಂತಿಮನೀಷಿಣಃ॥

ಟೀ॥ ಗೋದಾವರಿಯು ದಕ್ಷಿಣಭಾಗದಲ್ಲೂ, ಕಾವೇರಿಯು ಉತ್ತರ ದಿಗ್ಭಾಗದಲ್ಲೂ ಮಾತುಲಕಾ ವಿವಾಹವನ್ನು ವಿದ್ವಾಂಸರು ಒಪ್ಪಿಕೊಳ್ಳುವರು.

ಮೂ॥ಪಿತೃಷ್ವಸೃಸುತಾಯಾಶ್ಚ ಸುತಾಯಾಮಾತುಲಸ್ಯಚ । ವಿವಾಹೊದಿನಕೂಟಾದಿ ನವಿಚಾರ್ಯಪ್ರವರ್ತತೆ॥

ಟೀ॥ಸೋದರತ್ತೇಮಗಳ ವಿವಾಹದಲ್ಲೂ ಸೊದರ ಮಾವನಮಗಳ ವಿವಾಹದಲ್ಲೂ ದಿನಕೂಟಾದಿ ವರ್ಗಗಳನ್ನು ವಿಚಾರಿಸದೆಯೇ ಪ್ರವರ್ತಿಸಬಹುದು.

ವಿವಾಹಾಂತರವಿಷಯಉ.

ಮೂ॥ಭಾರ್ಯಾಂತರವಿವಾಹಸ್ಸ್ಯಾದಯುಗ್ಮೆವತ್ಸರೇಶುಭಃ । ಭರ್ತೃವಿನಾಶಾಯ ಗಾರ್ಗ್ಯಸ್ಯವಚನಂಯಧಾ॥

ಟೀ॥ ಪತ್ನೀವಿಯೋಗವಾದ ೧-೩-೫-೭-ನೇ ಈಮೇರೆ ವಿಷಮ ವರ್ಷಗಳಲ್ಲಿ ೨ನೇಮದುವೆಮಾಡಬೇಕುಹೊರ್ತು ೨-೪-೬ಈಮೇರೆಸಮವರ್ಷಗಳಲ್ಲಿ ಮಾಡಕೂಡದು.

ಗ್ರಂಥಾಂತರೆ.

ಮೂ ॥ಪತ್ನೀವಿಯೋಗೇಪ್ರಥಮೇಟವರ್ಷನೋಚೆದ್ವಿವರ್ಷೇಪುನರುದ್ವ ಹೇತ್ಸಃ॥ಅಯುಗ್ಮಮಾಸೇಷುಶುಭಂವದಂತಿ ವಸಿಷ್ಠಗಾರ್ಗಾದಿ ಮುನೀಂದ್ರವರ್ಯಾಃ॥

ಟೀ॥ಪತ್ನೀವಿಯೋಗವಾದ ೧ವರ್ಷದಲ್ಲೀ ೨ನೇ ವಿವಾಹವಾಗ ದೇಹೋದರೆ ೨ನೇ ವರುಷಗಳಲ್ಲಾದರೂ ವಿಷಮ ಮಾಸದಲ್ಲಿ ಮಾ ಡಬಹುದೆಂದು ವಸಿಷ್ಠಾದಿ ಋಷಿಗಳು ಹೇಳುತ್ತಾರೆ,

ನಾರದೀಪಿ.

ಮೂ॥ಯುಗ್ಮೆಬ್ದೆಜನ್ಮತಸ್ತ್ರೀಣಾಂಪ್ರೀತಿದಂಪಾಣಿಪೀಡನಂ । ಸಂಪತ್ಪ್ರಂಸಾಮಯುಗ್ಮೆಬ್ದೆ ವ್ಯತ್ಯೆಏನಾಶನಂತಏಃ॥

ಟೀ॥ಕನ್ಯೆಗೆ ವಿಷಮವರ್ಷದಲ್ಲೂ ಪುರುಷನಿಗೆ ವಿಷಮ ವರ್ಷದಲ್ಲಿ ಯೂವಿವಾಹಲು ಶುಭಕರಲು ಹಾಗಿಲ್ಲದೇ ಸ್ತ್ರೀಗೆ ವಿಷಮ ವರ್ಷ ವೂ ಪುರುಷನಿಗೆಸಮ ವತ್ಸರವೂ ಆದರೆ ಹಾನಿಕರವಹುದು.

ಮೂ॥ನಕದಾಚಿದ್ವಿಂಶತ್ಯೃಕ್ಷೆಭಾನೋರಾದ್ರಾಪ್ರವೇಶನಾತ್ । ವಿವಾಹೊದೆವತಾನಾಂಚಪ್ರತಿಷ್ಠಾಚೋಪನಾಯನಂ । ನಾಸ್ತಂ ಗತೆಸಿತೆಜೀವೆ ನತಏರ್ಬಾಲವೃದ್ಧಏಃ ನೆಗುರೌಸಿಂಹರಾಶಿಸ್ಥೆಸಿಂ ಹಾಂಶಕೆಗತೆಪಿವಾ॥

ಟೀ॥ಸೂರ್ಯನು ಆರ್ತ್ರಾ ಪ್ರವೇಶವಾದ ೨೦ನಕ್ಷತ್ರಗಳವರಿಗೂ ಗುರುಶುಕ್ರರುಅಸ್ತಂಗತರಾಗಿ ಇರುವಾಗಲೂ ಅವರು ಬಾಲರಾಗಿ ಯೂ ವೃದ್ಧರಾಗಿಯೂ ಇರುವಾಗಲೂ ಮತ್ತು ಗುರುಲು ಸಿಂ ಹಾಂಶದಲ್ಲಾದರೂ ಇರುವಾಗಲೂ ಸಹವಿವಾಹ ಉಪನಯನದೇ ವತಾಪ್ರತಿಷ್ಠೆಈಶುಭ ಕಾರ್ಯಗಳನ್ನು ಮಾಡಿಸಕೂಡದು.

ಅಪವಾದ ವಾಸಿಷ್ಠ.

ಮೂ॥ಸಿಂಹಂಗತೆದೆವಗುರೌವಿವಾಹಂನೆಚ್ಛಂತಿಯಾತ್ರಾಂಯ ಮುನಾತಟಾಂತೆ ಕಳಿಂಗವಂಗೆಷ್ವಥಮಾಗಧೆಷುದೋಷಃಪ್ರಯು ಕ್ತೊನನುಚಾನ್ಯದೇಶೆ॥

ಟೀ॥ಗುರುಲು ಸಿಂಹರಾಶಿಯಲ್ಲಿ ಇರುವಾಗ ಯಮುನಾ ನದಿಯ ತೀರದಲ್ಲಿ ಇರುವ ದೇಶದವರು ವಿವಾಹವನ್ನು ಪ್ರಯಾಣವನ್ನು ಸ ಹ ನಿಷೇಧಿಸುವರು, ಹಾಗಯೇ ಕಳಿಂಗ ವಂಗ ಮಾಗಧ ಈದೇಶ

ದವರು ಸಹ ಅದನ್ನು ಒಪ್ಪುವದಿಲ್ಲ. ಅವುಗಳಿಂತ ಅನ್ಯದೇಶದವರು ಅಂಥಾ ವಿವಾಹ ಪ್ರಯಾಣ ಗಳನ್ನು ಒಪ್ಪುತ್ತಾರೆ.

ಗುರು ಶುಕ್ರರಿಗೆ ವೃದ್ಧತ್ವ ಬಾಲ್ಯ ದೋಷಗಳು.

ಮೂ॥ಪಶ್ಚಾತ್ಪ್ರಾಗುದಿತಶ್ಶುಕ್ರೋದಶತ್ರಿದಿವಸಂಶಿಶುಃ।ವೃದ್ಧಃ ಪಂಚದಿನಂಪಕ್ಷಂಗುರೋಃಪಕ್ಷಂತುಸರ್ವದಾ॥

ಟೀ॥ ಪಶ್ಚಿಮದಲ್ಲೂ ಪೂರ್ವದಿಕ್ಕಿನಲ್ಲೂ, ಶುಕ್ರನು ಉದಯವಾದ ಹದಿಮೂರು ದಿನಗಳ ವರಿವಿಗೂ ಬಾಲನು, ಅಸ್ತಮಯಕ್ಕೆ ಮುಂದೆ೫ ದಿನವೃದ್ಧನು ೧೫ ದಿನ ವೆಂದು ಕೆಲವರುಹೇಳುವರು ಹಾಗೆಯೇ ಗುರು ಉದಯ ವಾದಮೇಲೂ ೧೫ ದಿನ ಬಾಲನು ಅಸ್ತಮಯಕ್ಕೆ ಮುಂ ೧೫ ದಿನವೃದ್ಧನು.

ಮೂ॥ ಶುಕ್ರೋಗುರುಃಪ್ರಾಕ್ಪರತಶ್ಚಕಾಲೆವಿಂಧ್ಯೆದಶಾವಂತಿಷು ಸಪ್ತರಾತ್ರಂ। ವಂಗೆಷುಹೂಣೆಷುಚಷಡ್ದ ಪಂಚಶೇಷೇತುದೇಶೆ ತ್ರಿದಿನಂಚವರ್ಜ್ಯಂ ॥

ಟೀ॥ ಶುಕ್ರನಿಗೂ ಗುರುವಿಗೂ ಉದಯಾಸ್ತಮಯಗಳ ಹಿಂದುಮುಂದಾಕಾಲಗಳಲ್ಲಿ ೧೦ದಿನಬಾಲ್ಯ,೧೦ದಿನವೃದ್ಧತ್ವವೆಂದು ವಿಂಧ್ಯಪರ್ವತಪ್ರಾಂತ್ಯದಲ್ಲಿ, ೭ರಾತ್ರಿಗಳೆಂದುಅವಂತೀದೇಶದಲ್ಲಿ ವಂಗದೇಶದಲ್ಲೂಹೂಣದೇಶದಲ್ಲೂ೬-೫-ದಿನಗಳುಇಉಗಳಿಗೆಇತರಗಳಾದ ದೇಶಗಳಲ್ಲಿ ೩ ದಿನದ ವರಿಗೂ ಬಾಲ್ಯ ವೃದ್ಧತ್ವಗಳೆಂದು ತಿಳಿಯತಕ್ಕದ್ದು.

ಮೂ॥ ವಿಧ್ಯನ್ಯದಕ್ಷಿಣೆದೆಶೆವೃದ್ಧಬಾಲ್ಯೆಸಿತೆಜ್ಯಯೋಃ।ತ್ರಿದಿನಂವರ್ಜಯಿತ್ವಾತು ತತಸ್ತಸ್ಯಾಂಚಶೋಭನಂ॥

ಟೀ॥ವಿಂಧ್ಯಪರ್ವತದದಕ್ಷಿಣದೇಶದಲ್ಲಿ ಶುಕ್ರಗುರುಗಳಿಗೆ ವೃದ್ಧತ್ವಬಾಲ್ಯಗಳು ಮೂರು ಮೂರು ದಿನಗಳೇ ಇದರಿಂದ ಅವುಗಳನ್ನು ಬಿಟ್ಟು ಕಡಮೆದಿನಗಳಲ್ಲಿ ಶುಭಕಾರ್ಯಗಳನ್ನು ಮಾಡಬಹುದು

ವೌಢ್ಯವರ್ಜ್ಯಗಳು,

ಮೂ ॥ ವಾಪೀಕೂಪತಟಾಕಯಾಗಗಮನಕ್ಷೌರಪ್ರತಿಷ್ಠಾವ್ರತಂ।ವಿದ್ಯಾಮಂದಿರಕರ್ಣವೇಧನಮಹಾದಾನಂವನಸ್ಥಾಪನಂ। ತೀರ್ಥೋದ್ವಾಹಜಪಾಭಿಷೇಕಮಖಿಲಾನ್ಯೋಷಪ್ರಯುಕ್ತೇತರಾ

ದುರೇಣ್ಯೈವಜಿಜೀವಿಷುಶಿಪರಿಹರೇದಾರ್ಯೈಸ್ತ್ರಗೇವಾಸಿತೆ॥

ಟೀ॥ಕ್ಷೇಮವನ್ನು ಅಪೇಕ್ಷಿಸುವವನು ಗುರುವಾದರೂ ಶುಕ್ರನಾದದರೂಅಸ್ತಂಗತರಾಗಿ ಇರುವಾಗ ಭಾವಿ, ಕೂಪ, ತಟಾಕ ಯಜ್ಞ ಪ್ರಯಾಣ। ಕ್ಷೌರ, ದೇವತಾಪ್ರತಿಷ್ಠೆ ವ್ರತಾರಂಭ,ವಿದ್ಯಾರಂಭ, ಗೃಹನಿರ್ಮಾಣ,ಕರ್ಣವೇಧನ, ಮಹಾದಾನ, ವನಾಂತರಹಾಕುವದು, ಪುಣ್ಯತೀರ್ಥಸ್ನಾನ, ವಿವಾಹ, ಮಂತ್ರಾರಂಭ, ಪಟ್ಟಾಭಿಷೇಕ ಮುಂತಾದವುಗಳು. ಇನ್ನೂ ನಿರ್ದೋಷಗಳಾದಇತರ ಶುಭಕರ್ಮಗಳನ್ನು ಬಿಟ್ಟುಬಿಡಬೇಕು.

ಮೂಢಕರ್ತವ್ಯಗಳು.

ಮೂ॥ ಭುಜಂಗಮೂಲ ಗ್ರಹರೋಗಶಾಂತಿಷ್ವಲಭ್ಯಯೋಗೆಗ್ರ
ಹಣಾಭಿಷೇಕೆ। ದೋಷಪ್ರಯುಕ್ತೈಷ್ವಖಿಲವ್ರತೇಷುಚೋತ್ಪಾ
ತಶಾಂತೌನಚವಾರ್ಧ್ಯದೋಷಃ ॥

ಟೀ॥ ಆಶ್ರೇಷಾಮೂಲಾದಿ ಗಂಡನಕ್ಷತ್ರಗಳುಶಾಂತಿಯು ಗ್ರಹಚಾರದಶಾಂತಿಯೂ ರೋಗೋಪದ್ರವ ಶಾಂತಿಯು ಅಕಸ್ಮಿಕವಾಗಿ ಬಂದುಗ್ರಹಶಾಂತಿಯು ಪಟ್ಟಾಭಿಷೇಕವು ದೋಷಪ್ರಯುಕ್ತಗಳಾದ ಸಕಲವ್ರತಗಳಲ್ಲಿಯೂ ಶಿಡಿಲು ಮುಂತಾದಉತ್ಪಾತಶಾಂತಿಗಳು ಇವುಗಳಲ್ಲಿ ಜಪ ಹೋಮಾದಿಗಳಿಗೆ ಗುರುಶುಕ್ರರ ವಾರ್ಧ್ಯಧೋಷವಿಲ್ಲಿ.

ಮೂಢದೋಷಾವಿವಾದಃ ಕಾಲಪ್ರಕಾಶಿಕಾಯಾಂ.

ಮೂ ॥ ಏಕೋಮೂಢೋಭವೇದನ್ಯಸ್ಸ್ವೋಚ್ಚ ಮಿತ್ರಾಂಶಗೋ
ಯದಿ। ಸ್ವರಾಶವರ್ತೀಗಶ್ಚೈವವಾರ್ಧ್ಯದೋಷೋನವಿದ್ಯತೆ॥

ಟೀ॥ ಗುರುಶುಕ್ರರಿಬ್ಬರಲ್ಲಿ ಒಬ್ಬನಸ್ತಂಗತನಾಗಿ ಇರುವಾಗ ಮತ್ತೊಬ್ಬನು ಉಚ್ಚಸ್ಥಾನ ಮಿತ್ರಾಂಶಗಳಲ್ಲಿದ್ದರೂ ಸ್ವಕ್ಷೇತ್ರದಲ್ಲಿದ್ದರೂ ವಾರ್ಧ್ಯದೋಷವು ಇಲ್ಲ.

ಮೂ॥ ಜೀವೆಲಗ್ನೆಬಲೋಪೆತೆಪಾಪಸಾತ್ರಯರಿರಾಶಿಷು। ಸ್ಥಿ
ತಾಶ್ಚೆದಸ್ತೆಶುಕ್ರಸ್ಯದೋಷೋನಾಸ್ತೀತಿ ಭಾರ್ಗವಃ ॥

ಟೀ॥ ಬೃಹಸ್ಪತಿಬಲಿಷ್ಠನಾಗಿ ಲಗ್ನದಲ್ಲಿದ್ದರೂ ಪಾಪಗ್ರಹಗಳು ೩-೬-೧೧-ನೇ ರಾಶಿಗಳಲ್ಲಿದ್ದರೂ ಶುಕ್ರನು ಅಸ್ತಂಗತನಾಗಿ

ದ್ದರೂ ದೋಷವಿಲ್ಲೆಂದುಭಾರ್ಗವನು ಹೇಳುತ್ತಾನೆ.

ಮೂ॥ ಗುರೋರಸ್ತಂಗತೇಽಪೋನಾಸ್ತಿಶುಕ್ರೋದಯೋಯದಿ ॥
ದ್ವಯೋರಸ್ತಮಯಸ್ಸ್ಯಾಚ್ಚೇದಪವಾದೈರ್ನ ಭಿದ್ಯತೇ ॥

ಟೀ ॥ ಹಾಗೆಯೇ ಗುರುವಸ್ತಂಗತನಾಗಿದ್ದರೂ ಶುಕ್ರೋದ ಯವಾಗಿದ್ದರೆ ದೋಷವಿಲ್ಲ, ಅವರಿಬ್ಬರೂ ಅಸ್ತಂಗತ ರಾಗಿದ್ದರೆ ದೋಷಪ್ರಬಲವಾಗುತ್ತದೆ ಅಪಕ್ಕಪವಾದವಿಲ್ಲ.

ವರ್ಷಮಾಸಾದ್ಯಂತವರ್ಜ್ಯಾಃ.

ಮೂ॥ ವರ್ಷಾಂತೇವರಯೇತ್ಪಕ್ಷಂಮಾಸಾಂತೇಚದಿನತ್ರಯಂ ।
ಋಕ್ಷಾಂತೇಘಟಿಕೆದ್ವೇಚಗ್ರಹಣೆದಿನಸಪ್ತಕಂ ॥

ಟೀ॥ ಸಂವತ್ಸರದಅಂತ್ಯದಲ್ಲಿ ೧೫ದಿವಸಗಳು ಮಾಸದಕೊನೆ ಯಲ್ಲಿ೩ದಿವಸಗಳು, ನಕ್ಷತ್ರಗಳ ಅಂತ್ಯದಲ್ಲಿ ೨ ಘಳಿಗೆಗಳು, ಗ್ರ ಹಣದಲ್ಲಿ ೭ ದಿವಸಗಳು,ಶುಭಕಾರ್ಯಗಳಲ್ಲಿಅವಶ್ಯವಾಗಿಬಿಡತಕ್ಕವು

ಕಶ್ಯಪಃ.

ಮೂ॥ ಮಾಸಾಂತೇತ್ರಿದಿನಂನೇಷ್ಟಂವರ್ಷಾಂತೇದಿನಪಂಚಕಂ
ಷಷ್ಟ್ಯಂತೇವತ್ಸರಸ್ತ್ಯಾಜ್ಯೋಷಣ್ಮಾಸಂವಾವಿಸರ್ಜಯೇತ್ ॥

ಟೀ॥ ಮಾಸದಕೊನೆಯಲ್ಲಿ ೩ದಿನಗಳನ್ನು, ವರ್ಷದಕೊನೆಯ ಲ್ಲಿ ೫ದಿನಗಳನ್ನು, ೬೦ ವರ್ಷಗಳ ಕೊನೆಯಲ್ಲಿ ೧ ವರ್ಷವನ್ನು ಅ ಥವಾ ೬ ತಿಂಗಳನ್ನಾದರೂ ಶುಭಕಾರ್ಯಗಳಲ್ಲಿ ಬಿಡತಕ್ಕದ್ದು.

ಮೂ ॥ ಪ್ರಾಕ್ಕೃತಾಬ್ದೋಗುರೋರಬ್ದಃ ಸೌರಾಬ್ದಸ್ತ್ರಿಧ ಸ್ಮೃತಃ॥ತೇಷಾಮಾದಾವಥಾಂತೇಚವರ್ಜಯೇಚ್ಚ ದಿನಂತ್ರಯಂ॥

ಟೀ॥ ಶಾಸ್ತ್ರದಿಂದ ಹೇಳಲ್ಪಟ್ಟ ಚಾಂದ್ರ, ಬಾರ್ಹಸ್ಪತ್ಯ, ಸೌ ರಮಾನ ವರ್ಷಗಳಲ್ಲಿ ಆದ್ಯಂತಗಳಾದ ಚಾಂದ್ರಸೌರಮಾನವ ರ್ಷಗಳ ಅಂತ್ಯಭಾಗಗಳಲ್ಲಿ ೩ ದಿನಗಳನ್ನು ವರ್ಜಿಸತಕ್ಕದ್ದು.

ಮೂ॥ ಅಂಗವಂಗಕಳಿಂಗೇಷುಮಾಸಷಟ್ಕಂವಿಸರ್ಜಯೇತ್ ।
ಆಂಧ್ರದೇಶೇಷುಸರ್ವತ್ರತ್ರಿಮಾಸಂವರ್ಜಯೇದ್ಬುಧಃ ॥

ಟೀ॥ ಅಂಗವಂಗ ಕಳಿಂಗ ದೇಶಗಳಲ್ಲಿ ೬೦ ವರ್ಷಗಳು ಅಂತ್ಯ ಭಾಗದಲ್ಲಿ ೬ ತಿಂಗಳನ್ನು ಬಿಡತಕ್ಕದ್ದು, ಯೆಲ್ಲಾ ಆಂಧ್ರದೇಶಗ ಳಲ್ಲೂ ತಿಂಗಳನ್ನು ಬಿಡತಕ್ಕದ್ದು.

## ಜನ್ಮಮಾಸಾದಿ ವರ್ಜಂ.

ಮೂ॥ ಜನ್ಮೋದಯೇಜನ್ಮರಾಶೌಜನ್ಮರ್ಕ್ಷೇಜನ್ಮಮಾಸರೆ । ಜನ್ಮ ಮಾಸೇಚದಂಪತ್ಯೋರ್ವಿವಾಹೋತ್ಯಂತದುಃಖಿತಃ ॥

ಟೀ॥ ದಂಪತಿಗಳ ಜನ್ಮಲಗ್ನ, ಜನ್ಮರಾಶಿ, ಜನ್ಮನಕ್ಷತ್ರ, ಜನ್ಮ ದಿನ, ಜನ್ಮಮಾಸ, ಇವುಗಳಲ್ಲಿ ಮಾಡಲ್ಪಟ್ಟ ವಿವಾಹವು ಅವರಿಗೆ ಅತ್ಯಂತ ದುಃಖ ಕರವಾಗಿರ್ಪುದು.

ಮೂ ॥ ಸಾಂಘಾತಿಕೇಜನ್ಮನಿಸಾಮುದಾಯೆ ವೈನಾಶಿಕೇಕರ್ಮಣಿ ಮಾನನಕ್ಷೇಚೌಲವ್ರತೆಹೋಮಧೀರ್ನ ಕಾರ್ಯಾಃಕೃತೌಕ್ರಿಯಾ ನಷ್ಟಕರೀಭವೇತ್ಸಾ ॥

ಟೀ॥ ಸಾಂಘಾತಿಕನಕ್ಷತ್ರ, ಜನ್ಮನಕ್ಷತ್ರ, ಸಾಮುದಾಯನಕ್ಷ ತ್ರ, ವೈನಾಶಿಕನಕ್ಷತ್ರ, ಕರ್ಮನಕ್ಷತ್ರ, ಮಾನಸಾಖ್ಯನಕ್ಷತ್ರ, ಇವುಗ ಳಲ್ಲಿ ಚೌಲ, ಉಪನಯನ, ವಿವಾಹ, ಈ ಶುಭ ಕಾರ್ಯಗಳನ್ನು ಮಾ ಡಕೂಡದು, ಹಾಗೆ ಮಾಡಿದವರಿಗೆ ಹಾನಿಯುಂಟಾಗುವದು.

## ವಿವಾಹ ಯೋಗ್ಯಾಯೋಗ್ಯಮಾಸಾಃ,

ಮೂ॥ ಮಾಘಫಾಲ್ಗುನವೈಶಾಖ ಜ್ಯೇಷ್ಠಮಾಸಾಶ್ಶುಭಪ್ರದಾಃ ಮಧ್ಯಮಾಕಾರ್ತಿಕೋಮಾರ್ಗಶೀರ್ಷೋವೈನಿಂದಿತಾಃಪರೆ ॥

ಟೀ॥ ಮಾಘ, ಫಾಲ್ಗುನ, ವೈಶಾಖ, ಜ್ಯೇಷ್ಠಮಾಸಗಳು. ಶುಭ ಪ್ರದಗಳು, ಕಾರ್ತಿಕ, ಮಾರ್ಗಶೀರ್ಷ ಮಾಸಗಳು, ಮಧ್ಯಮಗ ಳು, ಇತರ ಮಾಸಗಳು ವರ್ಜ್ಯಗಳು.

ಮೂ॥ ಅಜಗೋಯುಗ್ಮಕುಂಭಾಳಿ ಮೃಗರಾಶಿಗತೆರವೌ। ಮು ಖ್ಯಃಕರ್ಮಗ್ರಹಸ್ತ್ವನ್ಯೇರಾಶಿಕೆನಕದಾಚನ ॥

ಟೀ॥ ಮೇಷ, ವೃಷಭ, ಮಿಥುನ, ಕುಂಭ, ವೃಶ್ಚಿಕ, ಮಕರ ಈ ರಾಶಿಗಳಲ್ಲಿ ಸೂರ್ಯನಿರುವಾಗ ವಿವಾಹವು ಶುಭಕರವು ಇತರ ರಾಸಿ ಗಳಲ್ಲಿರುವಾಗಯಾವಾಗ್ಯೂಮಾಡಕೂಡದು.

## ಶೂನ್ಯಮಾಸವು

ಮೂ॥ ಉತ್ತರಾಯಣಗೆಸೂರ್ಯೆಮೀನಚೈತ್ರಂತುವರ್ಜಯೇತ್ ಮೀನಚೈತ್ರೋಧನುಃಪುಷ್ಯೋಮಿಥುನಾಷಾಢಕೋಪಿಚ॥ ಕನ್ಯಾ ಭಾದ್ರಪದೋಮಾಸಶೂನ್ಯಮಾಸಾಃಪ್ರಕೀರ್ತಿತಾಃ ॥

ಟೀ॥ ಸೂರ್ಯನು ಉತರಾಯಣದಲ್ಲಿರುವಾಗ, ಮೀನ ಚೈತ್ರವನ್ನು ಬಿಡತಕ್ಕದ್ದು. ಯಾತಕ್ಕಂದರೆ-ಮೀನಚೈತ್ರವು, ಧನುಃ ಪುಷ್ಯವು. ಮಿಥುನಾಷಾಢವು, ಕನ್ಯಾ ಭಾದ್ರಪದವು, ಇವುಗಳೆಲ್ಲವೂ ಶೂನ್ಯ ಮಾಸಗಳೆಂದು ತಿಳಿಯತಕ್ಕದ್ದು,

ಮೂ ॥ ಪೌಷೋನದೋಷೋಮಕರೇಣಯುಕ್ತಶ್ಚೈತ್ರಸ್ತಥಾಮೇಷಸಮನ್ವಿತಶ್ಚ । ಶುಚಿಶ್ಚ ಕೇಚಿನ್ಮಿಥುನೇನಯುಕ್ತೋವಿವಾಹಕಾರ್ಯಂಶುಭದಂವದಂತಿ ॥

ಟೀ॥ ಮಕರ, ಪುಷ್ಯ, ಮೇಷ, ಚೈತ್ರ, ಮಿಥುನ, ಜ್ಯೇಷ್ಠ ಈಮಾಸಗಳಲ್ಲಿ ವಿವಾಹವು .ಶುಭಪ್ರದವೆಂಬದಾಗಿಕೆಲವರು ಹೇಳುತ್ತಾರೆ.

ಮೂ॥ ಮುಂಡನಂಮೀನಚೈತ್ರೇತುಮಂಡನಂಮೇಷಚೈತ್ರಕೇ । ಮುಂಡನಂಮಂಡನಂಚೈವಮೇಷಚೈತ್ರೇವಿಧೀಯತೇ ॥

ಟೀ॥ ಮೀನಚೈತ್ರದಲ್ಲಿ ಮುಂಡನವೆಂಬ ಉಪನಯನವನ್ನು ಮಾಡಬಹುದು. ಮೇಷ ಚೈತ್ರದಲ್ಲಾದರೂ ಉಪನಯನವನ್ನು ಮಂಡನವೆಂಬ ವಿವಾಹವನ್ನು ಸಹ ಮಾಡತಕ್ಕದ್ದು.

ಸೂರ್ಯನ ಆರ್ದ್ರಾಪ್ರವೇಶದಲ್ಲಿ ಶುಭಕರ್ಮವರ್ಜ್ಯ-ಗಾರ್ಗ್ಯ,

ಮೂ॥ ಆರ್ದ್ರಾದಿಕೇಸ್ವಾತಿವಿರಾಮಕಾಲೇನಕ್ಷತ್ರಬೃಂದೇದಶಕೇತಥೈವ । ವಿವಾಹಚೌಲವ್ರತಬಂಧನಾಖ್ಯಂಸುರಂಪ್ರಗಿಷ್ಟಾಂಚನಕಾರ್ಯಮೇವ ॥

ಟೀ॥ ಸೂರ್ಯನು ಆರ್ದ್ರಾ ನಕ್ಷತ್ರಮೊದಲು ಸ್ವಾತೀನಕ್ಷತ್ರದವರಿಗೂಹತ್ತುನಕ್ಷತ್ರಗಳಲ್ಲಿರುವಾಗ ವಿವಾಹ, ಚೌಲ, ಉಪನಯನ ಕರ್ಮಗಳನ್ನು ಮಾಡಕೂಡದು.

ಕಾಶ್ಯಪ.

ಮೂ॥ ಜ್ಯೇಷ್ಠಮಾಸೇಯದಾಸೂರ್ಯೋರುದ್ರರ್ಕ್ಷೇಚಾರ್ಥಸೂಗವಾನ್ ॥ ವಿವಾಹಾದಿಶುಭಂಕಾರ್ಯಂಕೇಚಿದಾಹುಸ್ತ್ರಯೋಂಶಕಾಃ ॥

ಟೀ॥ ಜ್ಯೇಷ್ಠಮಾಸದಲ್ಲಿ ಸೂರ್ಯನು ಆರ್ದ್ರೆಯಲ್ಲಿರುವಾಗ ೩ ಪಾದಗಳ ವರಿಗೂ ವಿವಾಹಮುಂತಾದ ಶುಭಕರ್ಮಗಳನ್ನುಮಾಡಬಹುದೆಂದು ಕೆಲವರು ಹೇಳುತ್ತಾರೆ.

ಆ ಷಾ ಢ ಮಾ ಸ ವ ರ್ಜ್ಯ ೦.

ಮೂ॥ ಶುಚಿಮಾಸೇನವೋಢಾಯಾಃಪ್ರವೇಶಂಶ್ವಶ್ರುಮಂದಿರಂ ।
ವರ್ಜಯೇನ್ಮತಿಮಾಂಸ್ತತ್ರಮುನಯೋಪಿವದಂತಿಹಿ ॥

ಟೀ॥ ಹೊಸದಾಗಿ ಮದುವೆಯಾದಹೆಂಣನ್ನು ಆಷಾಢಮಾಸದ ಲ್ಲಿ ಗಂಡನಮನೆಗೆ ಕರೆದುಕೊಂಡುಹೋಗಿ ಗೃಹಪ್ರವೇಶ ಮಾಡ ಕೂಡದೆಂಬದಾಗಿ ಮುನೀಶ್ವರರು ಹೇಳುತ್ತಾರೆ.

ಮೂ॥ ಚಾತುರ್ಮಾಸ್ಯೇವದೋಷ್ಯಸ್ಯಾದ್ಗಂಧರ್ವಾಖ್ಯಕರಗ್ರ
ಹಃ।ಮಾಸಪ್ರಾಧಾನ್ಯಕರ್ಮಾಣಿಕರ್ತವ್ಯಾನಿಮುನೀಷಿಭಿಃ ॥

ಟೀ॥ ಆಷಾಢಾದಿ ನಾಲ್ಕುತಿಂಗಳಲ್ಲಿ ಗಾಂಧರ್ವ ವೆಂಬ ವಿವಾ ಹವು ನಿಷೇಧಿಸತಕ್ಕದ್ದಲ್ಲ. ಮತ್ತು ಆಯಾಮಾಸಗಳಲ್ಲಿಮಾಡತ ಕ್ಕ ವ್ರತಾದಿಕರ್ಮಗಳುಬುದ್ಧಿಮಂತರಿಂದಅವಶ್ಯಮಾಡತಕ್ಕವು

ಸ್ತ್ರೀಲಕ್ಷಣ.

ಮೂ॥ ಕುರ್ಯಾಶ್ವಶುರಯೋಃಪಾದವಂದನಂಭರ್ತೃತತ್ಪರಾ ।
ದ್ವಾರೋಪಸೇವನಂನಿತ್ಯಂಗವಾಕ್ಷಾವೇಕ್ಷಣಂತಥಾ ॥

ಟೀ॥ ಸ್ತ್ರೀಯು ನಿತ್ಯವೂ ಅತ್ತೆಮಾವ ಇವರ ಪಾದಸೇವೆಯ ನ್ನು ಮಾಡುತ್ತಾ, ತಲಭಾಗಲಲ್ಲಿಗಂಡನಬರುವಿಕೆಯನ್ನುಯೆದು ರುನೋಡುತ್ತಾಗಂಡನಲ್ಲಿಅತ್ಯಂತಆಸಕ್ತಿಯುಳ್ಳವಳಾಗಿರಬೇಕು

ಮೂ॥ವಿವಾಹೆಬಲಮಾವಶ್ಯಂದಂಪತ್ಯೋರ್ಗುರುಸೂರ್ಯಯೋಃ।
ಪೂಜಾಂಪ್ರಯತ್ನತಃಕುರ್ಯಾದ್ದುರ್ಬಲಪ್ರದಯೋಸ್ತಯೋಃ ॥

ಟೀ॥ ವಿವಾಹದಲ್ಲಿ ಗುರು ಸೂರ್ಯ ಇವರುಗಳುಬಲಿಷ್ಟರಾಗಿರ ಬೇಕು, ಒಂದುವೇಳೆ ಅವರುಗಳು ದುರ್ಬಲರಾಗಿ ಇದ್ದರೂ ಅಂತ ವರಿಗೆ ವಿಶೇಷವಾಗಿಪೂಜೆಯನ್ನು ಮಾಡಿದರೆ ಅವರು ಶುಭಫಲವ ನ್ನು ಕೊಡುವರು.

ಮೂ॥ಶುಭಕ್ಷೆತಯುತಾಶ್ಚಸ್ತಾಉದ್ವಾಹೆಖಿಲರಾಶಯಃ। ಶುಭಷಡ್ವ
ರ್ಗಗೆಲಗ್ನೆಮಹಾದೋಷವಿವರ್ಜಿತೆ॥ಜಾಮಿತ್ರಶುದ್ಧಿಸಂಯುಕ್ತೆ ॥

ವಿವಾಹಶ್ಶುಭ ದೋಮತಃ.

ಟೀ॥ವಿವಾಹದಲ್ಲಿ ಶುಭ ಗ್ರಹಗಳೊಡನೆ ಕೂಡಿಯೂ ಅವರಿಂದ ನೋಡಲ್ಪಟ್ಟು ಇರುವ ಯೆಲ್ಲಾರಾಶಿಗಳು ಶುಭಪ್ರದಗಳೂ,ಮತ್ತು ಲಗ್ನವು ಶುಭಷಡ್ವರ್ಗವುಳ್ಳದ್ದಾಗಿಯೂ, ಮಹಾ ದೋಷವರ್ಜಿತ

ವಾಗಿಯೂ ಇರುವಾಗಲೂ ಸಪ್ತಮಶುದ್ಧಿ ಇರುವಾಗಲೂ ವಿಶೇಷ ಶುಭಫಲ ವುಂಟಾಗುವದು,

ಪುಷ್ಕರಾಂಶಾಃ.

ಮೂ ॥ ಯೆಕವಿಂಶೊಮನುಶ್ಚೈವಜನಾಶ್ಚಮುನಯಃಕ್ರಮಾತ್ । ಮೆಷಾದಿಮೀನಪರ್ಯಂತಂಪುಷ್ಕರಾಂಶಾಃಪ್ರಕೀರ್ತಿತಾಃ ॥

ಟೀ॥ಮೇಷ ಮೊದಲುಮೀನ ಪರ್ಯಂತವಾಗಿ ರಾಶಿಗಳಲ್ಲಿ೨೧-೧೪ ೨೪-೭ಈ ಅಂಶಗಳು ಪುಷ್ಕರಾಂಶಗಳೆಂದು ಹೇಳಲ್ಪಡುತ್ತವೆ.

ಮೂ॥ಶ್ವಶುರೋರ್ಕಸ್ಸಿತಶ್ಶ್ವಶ್ರೂಸ್ತ್ರೀಣಾಮಸ್ತಪತಿಃಪತಿಃತೆಷೂಚ್ಚಾದಿಸ್ಥಿತೆಷ್ವೆಷುಶುಭಂನೀಚಾರಿಗೆಷ್ವಸತ್॥

ಟೀ ॥ ಸ್ತ್ರೀಯರಿಗೆ ಸೂರ್ಯನು ಮಾವನು, ಶುಕ್ರನು ಅತ್ತೆ, ಶನಿಯುಗಂಡನು, ಈ ಮೂರು ಗ್ರಹಗಳೂ ಉಚ್ಚ, ಮೂಲ ತ್ರಿಕೋಣ, ಸ್ವಕ್ಷೇತ್ರಗಳಲ್ಲಿದ್ದರೆ ಸ್ತ್ರೀಗಳಿಗೆ ಶುಭವಾಗುವದು ಅವರು ನೀಚ ಶತ್ರುಕ್ಷೇತ್ರಗಳಲ್ಲಿದ್ದರೆ ಅಶುಭವಾಗುವದು.

ವಿವಾಹವೇದಿಕಾ ಲಕ್ಷಣವು.

ಮೂ॥ ಹಸ್ತೋಚ್ಛ್ರಿತಾಂಹಸ್ತಚತುಷ್ಟಯೆನವಿಸ್ತೀರ್ಣತಾಂಮಂದಿರವಾಮಭಾಗೆ।ವಿಚಿತ್ರತಾಂಸ್ತಂಭಚತುಷ್ಕಯುಕ್ತಾಂಸೊಪಾನರಮ್ಯಾಂಚವಿವಾಹವೆದಿಂ॥

ಟೀ॥ಒಂದುಮೊಳ ಯೆತ್ತರವಾಗಿಯೂ, ನಾಲ್ಕು ನಾಲ್ಕು ಮೊಳ ಚೌಕವಾಗಿಯೂ, ಮನೆಯ ಬಲಗಡೆಯಲ್ಲಿ ಈಶಾನ್ಯಭಾಗದಲ್ಲಿ ನಾಲ್ಕುಕಂಭಗಳಿಂದಲೂಅಂಕೆಳಿಂದಲೂ ಭೂಷಿತವಾಗಿ ವಿವಾಹ ವೇದಿಕೆಯನ್ನು ಮಾಡಿಸತಕ್ಕದ್ದು.

ವಿವಾಹ ಪೀಠೀ ಲಕ್ಷಣವು.

ಮೂ॥ಕುರ್ಯಾದ್ವಿವಾಹಪೀಠಂತುಶುಭ್ರಲಕ್ಷಣಸಂಯುತಂ। ಸಪ್ತತ್ರಿಂಶತಿಕಂದೀರ್ಘಮಾಯಾಮಂಪಂಚಕಂತಥಾ । ಷಡುನ್ನತಂಚಾಂಗುಳಾನಾಂವಿವಾಹಪೀಠಮುಚ್ಯತೆ॥

ಟೀ॥ವಿವಾಹದಲ್ಲಿ ವಧೂವರರು ಕುಳಿತು ಕೊಳ್ಳುವ ಹಸೆಯು೩೭ ಅಂಗುಳ ಉದ್ದವು, ೫ ಅಂಗುಳ ಅಗಲವು, ೭ ಅಂಗುಳ ಯೆತ್ತರವುಳ್ಳದ್ದಾಗಿಯೂ, ತೋರಣ ರಂಗೋಲಿ ಮುಂತಾದ ಅಲಂಕಾರ

ಯುಕ್ತವಾಗಿಯೂ ಇರತಕ್ಕದ್ದು.

ಪಂಚಕ.

ಮೂ॥ತಿಥಿವಾರೋಡುಭಿರ್ಯುಕ್ತಂತತ್ಕಾಲೋದಯಮಿಶ್ರಿತಂ । ನವಸಂಖ್ಯಾಹರದ್ಭಾಗಂಶೇಷಂಪಂಚಕಯೀರಿತಂ॥

ಟೀ॥ತಿಥಿ, ವಾರ, ನಕ್ಷತ್ರ, ತತ್ಕಾಲ ಲಗ್ನ, ಇವುಗಳನ್ನು ಕೂಡಿಸಿ ಲೆಖ್ಖಮಾಡಿದ್ದರಿಂದ ಹರಣ ಮಾಡುವಲ್ಲಿ ಮಿಕ್ಕದ್ದು ಪಂಚಕವನ್ನಿಸಿ ಕೊಳ್ಳುವದು.

ಮೂ॥ಏಕೋಮೃತ್ಯುರ್ದ್ವಯಂವಹ್ನಿಶ್ಚತ್ವಾರೋರಾಜಪಂಚಕಂ। ಷಟ್ಚೋರಅಷ್ಟರೋಗಸ್ಯಾದಿತ್ಯೇತತ್ಪಂಚಪಂಸ್ಮೃತಂ॥

ಟೀ॥೧ ಮಿಕ್ಕರೆ ಮೃತ್ಯುಪಂಚಕ, ೨ ಮಿಕ್ಕರೆ ಅಗ್ನಿ, ೪ ಮಿಕ್ಕರೆ ರಾಜ ೬ ಮಿಕ್ಕರೆ ಚೋರ, ೮ ಮಿಕ್ಕರೆ ರೋಗ, ಇದು ಪಂಚಕವು ಇದನ್ನು ಬಿಡತಕ್ಕದ್ದು.

ಮೂ॥ಸೇವಾಯಾಂರಾಜಕಂಮಾರ್ಗೇ ಚೋರಂರಾಜಾಗ್ನಿಮಾಲಯೇ । ಮೌಂಜೀಬಂಧನೇಉದ್ವಾಹೇರೋಗಂಮೃತ್ಯುಂಚವರ್ಜಯೇತ್॥

ಟೀ॥ ಉದ್ಯೋಗ ಪ್ರವೇಶದಲ್ಲಿ ರಾಜ ಪಂಚಕವನ್ನು । ಪ್ರಯಾಣದಲ್ಲಿಚೋರ ಪಂಚಕವನ್ನು, ಗೃಹನಿರ್ಮಾಣದಲ್ಲಿ ರಾಜಾಗ್ನಿ ಪಂಚಕಗಳನ್ನು ಉಪನಯನ ವಿವಾಹಗಳಲ್ಲಿ ರೋಗ ಮೃತ್ಯುಪಂಚಕಗಳನ್ನು ಸಹ ಬಿಡತಕ್ಕದ್ದು.

ಮೂ॥ ತ್ಯಜೇತ್ಪಂಚಕಂಭಾನುವಾರೇತು ರೋಗಂಶನೌಮೃತ್ಯುಕಂ ಭೂಮಿಪುತ್ರೇತುವಹ್ನಿಂ । ಗುರೌಸೋಮವಾರೇಚರಾಜಾನಮೇವಂ ಬುಧೇವಾರ್ಗವೇತಸ್ಕರಾಖ್ಯಂ ಶುಭಾರ್ಥೀ॥

ಟೀ॥ ಭಾನುವಾರದಲ್ಲಿ ರೋಗ ಪಂಚಕವನ್ನು, ಶನಿವಾರದಲ್ಲಿ ಮೃತ್ಯುಪಂಚರಾಜ ಪಂಚಕವನ್ನು, ಬುಧ ಶುಕ್ರವಾರಗಳಲ್ಲಿ ಚೋರ ಪಂಚಕವನ್ನು ಬಿಡತಕ್ಕದ್ದು.

ಮೂ॥ ಚೋರಂರೋಗಂತ್ಯಜೇದ್ರಾತ್ರೌದಿನಾರಾಜಾಗ್ನಿಮೇವಚ । ಅರ್ಧರಾತ್ರೇತ್ಯಜೇನ್ಮೃತ್ಯುಂಪಂಚಕಂಯತ್ರದೃಶ್ಯತೇ॥

ಟೀ॥ ರಾತ್ರಿಯಲ್ಲಿ ಚೋರರೋಗ ಪಂಚಕಗಳನ್ನು, ಹಗಲಲ್ಲಿ ರಾಜಾ ಅಗ್ನಿಪಂಚಕಗಳನ್ನು, ಅರ್ಧರಾತ್ರಿಯಲ್ಲಿ ಮೃತ್ಯುಪಂಚಕ

ವನು ಬಿಡತಕ್ಕದ್ದು.

ಸ್ವಲ್ಪದೋಷಾಃ.

ಮೂ॥ಉಪಗ್ರಹಾಖ್ಯಂದೋಷ್ಯೇಚೆಭಗ್ರಹಂಯುದ್ಧದೋಷಿತಂ ।
ವಿರುದ್ಧಯೋಗವಾದ್ಯೇಶ್ಚ ಪಂಗ್ವಂಧಗ್ರಹಜನ್ಮಭಂ॥

ಟೀ॥ದೋಷಯುಕ್ತಳಾದ ಉಪಗ್ರಹವೆಂಬ ದೋಷವು,ಯುದ್ಧದೂಷಿತವೆಂಬ ದೋಷವು, ಮರಣ ಯೋಗನಾಶಯೋಗಾದಿಗಳ ಘಳಿಗೆಗಳು ಕುಂಟಿ ಕುರುಡು ರಾಶಿಗಳು ಜನ್ಮ ನಕ್ಷತ್ರವು,ಇವೆಲ್ಲವೂ ಸ್ವಲ್ಪದೋಷಗಳು.

ಈ ದೋಷಗಳಿಗೆ ದೇಶ ವ್ಯವಸ್ಥೆಯು,

ಮೂ ॥ ಉಪಗ್ರಹರ್ಕ್ಷಂಕುರುಬಾಹ್ಲಿಕೇಷುಕಳಿಂಗವಂಗೇಷುಚಲತಸ್ತಂಭವಂ। ಸೌರಾಷ್ಟ್ರಘೂರ್ಜಷುಚಪಾತಜನ್ಯೆಶೆಷೆತುದೆಶೆಸವಿರುದ್ಧದೋಷಃ॥

ಟೀ॥ಕುರುಬಾಹ್ಲೀಕ ದೇಶಗಳಲ್ಲಿ ಉಪಗ್ರಹ ನಕ್ಷತ್ರವು, ಕಳಿಂಗ ವಂಗದೇಶಗಳಲ್ಲಿ ಲತ್ತಾದೋಷವು, ಸೌರಾಷ್ಟ್ರಘೂರ್ಜರ ದೇಶಗಳೊಳು ಪಾತವನ್ಯೆವಾದದೋಷವು ಸಹ ಬಿಡತಕ್ಕದ್ದು, ಮಿಕ್ಕ ದೇಶಗಳಲ್ಲಿ ವಿರುದ್ಧದೋಷವಿಲ್ಲ.

ಮೂ ॥ ಯೆಮಾನಿದಗ್ಧಾದಯುಪಿವದೋಷಾವಿವರ್ಜನೀಯಾಃಖಲುಮಧ್ಯದೇಶ । ದುಸ್ಸ್ವಪ್ನದುರ್ದರ್ಸನದುರ್ನಿಮಿತ್ತದುಶ್ಶಾಕುನಾದ್ಯಾಅಪಿಯತ್ರತತ॥

ಟೀ॥ಕರ್ಮನಕ್ಷತ್ರಮುಂತಾದವುಗಳು ಮಧ್ಯ ದೇಶದಲ್ಲಿ ಬಿಡತಕ್ಕಲು, ದುಸ್ಸ್ವಪ್ನ ದುಷ್ಟ ದಸ್ತುದರ್ಶನ ದುಶ್ಶಕುನಗಳಲ್ಲಿ ಕಾಣಲ್ಪಡುತ್ತವೋಅಲ್ಲೇಬಿಡತಕ್ಕಲು,

ಮೂ॥ವಜ್ರೆತುಘುಟಿಕಾಷಟ್ಕಂಜ್ವಾಲಾಖ್ಯೆಘುಟಿಕಾಷ್ಟಕಂ।ತಿಸ್ರಃಪಂಚೊತ್ಪಾತಮೃತ್ಯೋರ್ನವಸ್ಯುರ್ಯಮಕಂಟಕೆ॥

ಟೀ॥ ವಜ್ರಯೋಗದಲ್ಲಿ ೬ ಗಳಿಗೆಗಳು, ಜ್ವಾಲಾ ಯೋಗದಲ್ಲಿ ೮ ಗಳಿಗೆಗಳು, ಉತ್ಪಾತ ಯೋಗದಲ್ಲಿ ೩ ಗಳಿಗೆಗಳು ಮೃತ್ಯು ಯೋಗದಲ್ಲಿ ೫ ಗಳಿಗೆಗಳು, ಯಮಕಂಟಕ ಯೋಗದಲ್ಲಿ ೯ಗಳಿಗೆಗಳೂ, ಬಿಡತಕ್ಕಲು.

ದೋಷ ಭಂಗಗಳು.

ಮೂ॥ಶುಕ್ರಃಪಂಚಸಹಸ್ರಾಣಿಬುಧಃಪಂಚಶತಾನಿ।ಲಕ್ಷಮೇಕಂತು ದೋಷಾಣಾಂಗುರುಃ ಕೇಂದ್ರೇವ್ಯಪೋಹತಿ॥

ಟೀ॥ಲಗ್ನ ಕೇಂದ್ರದಲ್ಲಿರುವ ಶುಕ್ರ ೫ ಸಾವಿರ ದೋಷಗಳನ್ನೂ ಬುಧನು೫ ನೂರು ದೋಷಗಳನ್ನು, ಗುರುವು ಲಕ್ಷದೋಷಗಳನ್ನೂ ಹೋಗಲಾಡಿಸುವರು.

ಮೂ ॥ ಯೇಲಗ್ನದೋಷಾಃಕುನವಾಂಶದೋಷಾಃಪಾಪಗ್ರಹದೃಷ್ಟಿ ನಿಪಾತದೋಷಾಃ । ಲಗ್ನೇಗುರುಸ್ತಾನ್ವಿಮಲೀಕರೋತಿಬೀಜಂಯ ಥಾಂಭಃಕತಕದ್ರುಮಸ್ಯ॥

ಟೀ ॥ ಲಗ್ನದಲ್ಲಿ ಇರುವ ಗುರುವು ಲಗ್ನ ದೋಷಗಳನ್ನೂ, ನ ವಾಂಶದೋಷಗಳನ್ನೂ, ಪಾಪಗ್ರಹಗಳ ದೃಷ್ಟಿಸಂಬಂಧ ದೋ ಷಗಳನ್ನು ಸಹಹೋಗಲಾಡಿಸಿ, ಚಿಲ್ಲ ಬೀಜವು, ನೀರನ್ನು ನಿರ್ಮ ಲ ಮಾಡುವಂತೆ ಲಗ್ನವನ್ನು ಪರಿಶುದ್ಧ ಮಾಡುವನು.

ಮೂ ॥ ಗುರುಸ್ಸದೀಪ್ತಸ್ತನುಕೇಂದ್ರಸಂಸ್ಥಿತಸ್ಸ್ವವರ್ಗ ಸಂ ಸ್ಥೋಭೃಗುಜೋಬುಧೋವಾ। ಬಲಾಧಿಕೋಲಗ್ನಗತೋವಿಶೇಷತೋ ನಿಹಂತಿದೋಷಾನ್ಸಕಲಾನ್ಯಥಾವಿಧಾನ್॥

ಟೀ॥ ಬೃಹಸ್ಪತಿಯು ಪ್ರಕಾಶ ಉಳ್ಳವನಾಗಿ ಲಗ್ನಕೇಂದ್ರದಲ್ಲಿ ದ್ದರೂ, ಶುಕ್ರನು ಲಗ್ನ ಶುಭಷಡ್ವರ್ಗ ಗಳಲ್ಲಿದ್ದರೂ, ಬುಧನು ಬಲಿಷ್ಟನಾಗಿ ಲಗ್ನದಲ್ಲಿದ್ದರೂ ಸಮಸ್ತದೋಷಗಳನ್ನು ಹೋಗ ಲಾಡಿಸುವರು.

ಮೂ ॥ ಕಾವ್ಯೋಗುರುರ್ವಾಸೌಮ್ಯೋವಾಯದಾಕೇಂದ್ರತ್ರಿಕೋಣ ಗಃನಶ್ಯಂತಿಸಕಲಾದೋಷಾಃಪಾಪಾನೀವಹರಿಸ್ಮೃತಃ॥

ಟೀ॥ ಶುಕ್ರನಾದರೂ, ಗುರುವಾದರೂ, ಬುಧನಾದರೂ, ಕೇಂ ದ್ರತ್ರಿಕೋಣಗಳಲ್ಲಿದ್ದರೆ ಶ್ರೀ ಹರಿಸ್ಮರಣದಿಂ ಪಾಪಗಳು ನಶಿಸು ವಂತೆ ಸರ್ವದೋಷಗಳೂ ನಶಿಸುವವು.

ಮೂ॥ ಮುಹೂರ್ತಲಗ್ನಷಡ್ವರ್ಗಕುನವಾಂಶಗ್ರಹೋದ್ಭವಾಃ॥ ಯೇದೋಷಾಸ್ತಾನ್ನಿಹಂತ್ಯೇವಯುತ್ಪ್ರೇಕಾದಶಗಶ್ಶಶೀ.

ಟೀ॥ ಯಾವಲಗ್ನಕ್ಕೆ ಚಂದ್ರನು ೧೧ನೇ ರಾಶಿಯಲ್ಲಿರುತ್ತಾ

ನೋ ಅಲಗ್ನಕ್ಕೆ ಲಗ್ನ ಷಡ್ವರ್ಗ ಕುನವಾಂಶ ಗ್ರಹಗಳಿಂ ದುಂ ಟಾಗುವ ದೋಷಗಳನ್ನೆಲ್ಲಾ ಅವನು ಪರಿಹರಿಸುವನು.

ಮೂ॥ ಯತ್ರೈಕಾದಶಗಸ್ಸೂರ್ಯೋದೋಷಾನಾಶಂಯೆಯುಸ್ತ
ದಾ । ಸ್ಮರಣಾದಿವರುದ್ರಸ್ಯಪಾಪಂಜನ್ಮಶತೋದ್ಭವಂ ॥

ಟೀ॥ ಲಗ್ನಕ್ಕೆ ೧೧ನೇ ರಾಶಿಯಲ್ಲಿರುವ ಸೂರ್ಯನು, ಶಿವಸ್ಮರಣ ವು ಬಹುಜನ್ಮಕೃತಪಾಪವನ್ನು ಹರಿಸುವಂತೆ ಸಮಸ್ತದೋಷಗ ಳನ್ನು ಹರಿಸುವನು.

ಮೂ॥ ಬುಧೋಪಿಮಿತ್ರರ್ಕ್ಷಗತಸ್ತದಂಶ ಸಂಸ್ಥೋಪಿವಾತೇನನಿ
ರೀಕ್ಷಿತೋವಾ । ಚೆಲ್ಲಗ್ನಗೋದೋಷಚಯಂನಿಹಂತಿ ರಾಮೊ
ಯಥಾರಾವಣದೈತ್ಯಬೃಂದಂ ॥

ಟೀ॥ ಬುಧನು ಮಿತ್ರಕ್ಷೇತ್ರದಲ್ಲಾದರೂ, ಮಿತ್ರಾಂಶದಲ್ಲಾದ ರೂ ಇದ್ದರೂ ಮಿತ್ರನಿಂದ ನೋಡಲ್ಪಟ್ಟದ್ದರೂ. ಈ ಗುಣಗ ಳೊಡನೆ ಆ ಲಗ್ನದಲ್ಲಿದ್ದರೂ, ರಾಮನು ರಾಕ್ಷಸರ ಸಮೂಹವನ್ನು ನಾಶಮಾಡಿದಂತೆ ದೋಷಗಳನ್ನೆಲ್ಲಾ ಹರಿಸುವನು.

ಮೂ॥ ಲಗ್ನಸ್ಥೋಭಾರ್ಗವೋಯದಿವಾಚಂದ್ರನಂದನಃ ।
ನಾಶಯತ್ಯಖಿಲಾನ್ ದೋಷಾನ್ ತೂಲಸಂಘಮಿವಾನಲಃ ॥

ಟೀ॥ ಲಗ್ನದಲ್ಲಿರುವ ಗುರುವು. ಶುಕ್ರನು, ಬುಧನು, ಇವರುಗ ಳು ಹತ್ತಿಯರಾಶಿಯನ್ನು ಬೆಂಕಿ ಸುಟ್ಟಂತೆ ದೋಷಗಳರಾಶಿಯ ನ್ನು ಸುಟ್ಟುಬಿಡುವರು.

ಮೂ॥ ಕಾಣಾಂಧಬಧಿರೋದ್ಭೂತಾದರ್ಧಲಗ್ನಾದಿಕೋದ್ಭವಾಃ ।
ತೇದೋಷಾನಾಶಮಾಯಾಂತಿಕೇಂದ್ರಸಂಸ್ಥೈಶ್ಶುಭಗ್ರಹಾಃ॥

ಟೀ॥ ಲಗ್ನಕೇಂದ್ರದಲ್ಲಿ ಶುಭಗ್ರಹಗಳಿದ್ದರೆ ಕುಂಟಲಗ್ನ, ಕು ರುಡಲಗ್ನ, ಕಿವುಡುಲಗ್ನ ನಿವುಗಳಿಂದುಂಟಾಪಗಳೆಲ್ಲವು ಪರಿಹರಿ ಸಲ್ಪಡುತ್ತವೆ.

ಮೂ॥ ಉಚ್ಚಗಶ್ಶುಭಯೆಕೋಪಿ ಲಗ್ನಗೋದೋಷಸಂಚಯಂ ।
ಹಂತಿಪಾಪಾನ್ ಹರಿತೇಥೌ ಚೋಪವಾಸವತಂಧಾ ॥

ಟೀ॥ ಉಚ್ಚನಾದ ಒಂದು ಗ್ರಹವಾದರೂ ಲಗ್ನದಲ್ಲಿದ್ದರೆ, ಏ ಕಾದಶ್ಯುಪವಾಸವು ಪಾಪಗಳನ್ನು ನಾಶಮಾಡುವಂತೆ ಸಕಲ

ದೋಷಗಳನ್ನು ಹರಿಸುವದು.

ಮೂ ॥ ಏಕೋಪಿಮಿತ್ರರಾಶಿಸ್ಥಶ್ಯುಭಾಯದಿವಿಲಗ್ನಗಃ । ಹಂತಿದೋಷಾನ್ಮಹಾದೋಷಾ೯ಶಿವರಾತ್ರಿವ್ರತಂಯಥಾ ॥

ಟೀ॥ ಮಿತ್ರರಾಶಿಯಲ್ಲಿರುವ ಒಂದು ಗ್ರಹವಾದರೂ ಲಗ್ನದಲ್ಲಿದ್ದರೆಶಿವರಾತ್ರಿವ್ರತವು ಪಾಪಪರಿಹಾರಮಾಡುವಂತೆ ಸಕಲದೋಷಗಳನ್ನು ಹರಿಸುವದು.

ಮೂ॥ ವಿಪದಿಪ್ರತ್ಯೆಗೆಚ್ಚೈವಚರಮಂಚಾದ್ಯಕಂವಿನಾ । ಸ್ವೋಚ್ಚೆಸ್ವರ್ಕ್ಷೇಗತಶ್ಚಂದ್ರಶ್ಯುಭದಸ್ಸರ್ವಕರ್ಮಸು ॥

ಟೀ॥ ಪರಮ ಮೈತ್ರತಾರೆಯು, ಜನ್ಮತಾರೆಯು, ಈ ಎಡುರ ನಕ್ಷತ್ರಗಳನ್ನು ಬಿಟ್ಟು ವಿಪತ್, ಪ್ರತ್ಯಕ್, ಈ ನಕ್ಷತ್ರಗಳಲ್ಲಿ ಸ್ವಕ್ಷೇತ್ರಸ್ವೋಚ್ಚ ರಾಶಿಗಳಲ್ಲಿರುವಚಂದ್ರನು ಸರ್ವ ಕರ್ಮಗಳಲ್ಲಿಯೂಶುಭಪ್ರದನಾಗುತ್ತಾನೆ.

ಮೂ॥ ಜನ್ಮರ್ಕ್ಷಲಗ್ನಯೋರ್ವಾಪಿಚಂದ್ರಶ್ಯಸ್ತಶುಭೇಕ್ಷಿತಃ। ಕೇಂದ್ರೇಶುಭೇಸ್ವವರ್ಗೇವಾಲಗ್ನಾದುಪಚಯೆಪಿವಾ ॥

ಟೀ ॥ ಜನ್ಮ ನಕ್ಷತ್ರದಲ್ಲೂ ಜನ್ಮ ಲಗ್ನದಲ್ಲೂ ಇರುವ ಚಂದ್ರನು, ಅಥವಾಕೇಂದ್ರಸ್ಥಾನಗಲ್ಲೂ, ಶುಭಸ್ವವರ್ಗಗಳಾದ ಸ್ವೋಚ್ಚ ಮಿತ್ರಸ್ಥಾನಮೂಲ ತ್ರಿಕೋಣಗಳಲ್ಲಾದರೂ ೩-೬-೧೧ ನೇ ಸ್ಥಾನಗಳಲ್ಲಾದರೂ ಶುಭಗ್ರಹಗಳಿಂದ ನೋಡಲ್ಪಟ್ಟಿದ್ದರೆ ಶುಭಪ್ರದನಾಗುತ್ತಾದೆ.

ಮೂ॥ ಜೀವೆಸಿತೆಕೆಂಟಕಸ್ಥೆಪಾಪೆವಾತ್ರಿಷಡಾಯಗೆ। ವಾರರ್ಕ್ಷತಿಥಿಯೋಗಾನಾಂದೋಷಾಶ್ಯುವ್ಯಪೋಹತಿ ॥

ಟೀ॥ ಗುರುವಾದರು ಶುಕ್ರನಾದರು ಕೇಂದ್ರದಲ್ಲಿರುವಾಗಲೂ, ಪಾಪಗ್ರಹಗಳು ೩-೬-೧೧ನೇ ಸ್ಥಾನಗಳಲ್ಲಿರುವಾಗಲೂ, ವಾರ, ನಕ್ಷತ್ರ, ತಿಥಿ, ಯೋಗಗಳಿಂದುಂಟಾದ ದೋಷಗಳೆಲ್ಲವೂಹರಿಸಲಡುತ್ತವೆ. ೭

ಮೂ॥ ಏವಂಗುಣಾಗುಣಾನ್ವೀಕ್ಷ್ಯಲಗ್ನಂನಿಶ್ಚಿತ್ಯಯತ್ನತಃ । ಸಿದ್ಧಾಂತೋಕ್ತೇನಮಾರ್ಗೇಣಲಗ್ನಕಾಲಂಸಮಾನಯೆತ್ ॥

ಟೀ॥ ಈ ಮೇರೆ ಸೂರ್ಯಸಿದ್ಧಾಂತದಿಂದ ಹೇಳಲ್ಪಟ್ಟ ಮಾರ್ಗ

ದಿಂದ ಗುಣದೋಷಗಳನ್ನು ವಿಚಾರಿಸಿ, ಲಗ್ನವನ್ನು ನಿರ್ಣಯಿಸಿ ವಿವಾಹ ಶುಭಕಾಲವಂನು ಯೇರ್ಪಡಿತಕ್ಕದ್ದು.

ಮೂ॥ ವೈಧವ್ಯಂತರಣಿಸ್ತ್ರನೋತಿಹಿಮಗುಸ್ತ್ರೈವ ಹಂತ್ಯಾದರಾದ್ವೌಮೋದಂಪತಿ ಹಾಶಶಾಂಕತನಯು ಸೌಭಾಗ್ಯಮಾಯುಚ್ಛತಿ।ಆಯುರ್ದೀರ್ಘಗುರುಭಾರ ವೌವ್ಯುದುಗತಿರ್ದಾರಿದ್ರ್ಯದಸ್ಸರ್ವದಾರಾಹುಶ್ಚಾಸ್ಯನ ಪತ್ಯಕ್ರೈನ್ನಿಜಗುಣೈರ್ಲಗ್ನೆವಿವಾಹೆಷ್ಟಭಿಃ॥

ಟೀ॥ ವಿವಾಹ ಲಗ್ನದಲ್ಲಿರುವ ಸೂರ್ಯನು ಕನ್ಯೆಗೆ ವೈಧವ್ಯವನ್ನು ಮಾಡಿಸವನು, ಚಂದ್ರನು ಮರಣವನ್ನು, ಕುಜನು ದಂಪತಿಗಳ ನಾಶವನ್ನುಂಟು ಮಾಡುವನು, ಬುಧನು ಸೌಭಾಗ್ಯವನು, ಕೊಡುವನು, ಗುರು ಶುಕ್ರರು ಆಯುರ್ವೃದ್ಧಿಮಾಡುವರು, ಶನಿ ದಾರಿದ್ರ್ಯವನ್ನೀಯುವನು, ರಾಹುವು ಸಂತಾನಹಾನಿಯೆನ್ನುಂಟುಮಾಡುವನು. ಈ ಮೇರೆ ಸೂರ್ಯಾದಿ ೮ ಗ್ರಹಗಳು ಅವರವರ ಯೆಂಟು ಗುಣಗಳಿಂದ ಈ ಯೆಂಟು ಫಲಗಳನ್ನು ಕೊಡುವರು.

ವಿವಾಹ ಲಗ್ನ ಗುಣಗಳು.

ಮೂ॥ ಧನತ್ರಿಬಂಧುತನಯ ಧರ್ಮಾಜ್ಞಾಯಷು ಚಂದ್ರಮಾಃ। ಕರೋತಿಸುತಸೌಭಾಗ್ಯಭೋಗಯುಕ್ತಾನ್ವಿವಾಹಿತಾನ್॥

ಟೀ॥ ವಿವಾಹ ಲಗ್ನಕ್ಕೆ ೨-೩-೪-೫-೯-೧೦-೧೧-ಈ ಸ್ಥಾನಗಳಲ್ಲಿರುವ ಚಂದ್ರನು ದಂಪತಿಗಳಿಗೆ ಪುತ್ರ, ಭೋಗ, ಭಾಗಗಳನ್ನುಂಟುಮಾಡುವನು.

ಮೂ॥ ಪಾತಾಳಾಂಬರ ಪಂಚಮೆತ್ವೆನವಮೆಅಗ್ನೆಚ ಸೌಮ್ಯಗ್ರಹಾಃಕ್ರೂರಾಷಟ್ಟಗತಾಶ್ಚಶೀಧನಗತಸ್ಸರ್ವೆತ್ರಿರೇಕಾದಶಂ। ಜಾಮಿತ್ರಂಗ್ರಹವರ್ಜಿತಂನಚ ಭೃಗೋಷಟ್ಕಂ ಕುಜಸ್ಯಾಷ್ಟಮಂದಂಪತ್ಯೋರ್ಜನಿ ತೋಡುಲಗ್ನ ಸಮಯಂ ಲಗ್ನಾಷ್ಟಮದ್ವಾದಶಂ॥

ಟೀ॥ ವಿವಾಹ ಲಗ್ನಕ್ಕೆ ೪-೫-೧೦-೨-೯-೧ನೇ ಸ್ಥಾನಗಳಲ್ಲಿ ಗುರು ಶುಕ್ರಬುಧ ಚಂದ್ರ ಈ ಶುಭಗ್ರಹಗಳಿರಬೇಕು,ಆಪರೇಚಂದ್ರನು ಮಾತ್ರಲಗ್ನದಲ್ಲಿರಕೂಲದು, ದ್ವಿತೀಯದಲ್ಲಿರತಕ್ಕದ್ದು, ರವಿ ಕುಜಶನಿ ರಾಹು ಕೇತುಗಳು ೩-೬-೧೧ಈಸ್ಥಾನಗಳಲ್ಲಿರತಕ್ಕದ್ದು, ಸಪ್ತಮದಲ್ಲಿ ಯಾವಗ್ರಹವೂ ಇರಕೂಡದು. ವಿವಾಹ ಲ

ಗ್ನಕ್ಕೆ ೬ ರಲ್ಲಿ ಶುಕ್ರನು. ೮ ರಲ್ಲಿ ಕುಜವಿರಕೂಡದು, ಮತ್ತು ದಂಪತಿಗಳ ಜನ್ಮನಕ್ಷತ್ರ ಜನ್ಮರಾಶಿಗಳು, ಜನ್ಮಲಗ್ನಕ್ಕೆ ೮-೧೨ ನೇರಾಶಿಗಳು ಸಹವಿವಾಹದಲ್ಲಿ ಅಪ್ರಶಸ್ತಗಳೆಂದುತಿಳಿಯಬೇಕು.

ಮೂ॥ ಕೇಂದ್ರತ್ರಿಕೋಣ ಭವನೆಯದಿ ಶೊಭನೈಕಸ್ಸೋಚ್ಚ ಸ್ವವರ್ಗಸಹಿತೊಬಲವಾನ್ಪ್ರವಿಷ್ಟಃ। ಪಾಪೈಸ್ತಥಾವಿಧಗುಣೈಸ್ತ್ರಿ ಷಡಾಯುಗ್ವೈಶ್ಚ ಯೊಗೊ ವಿವಾಹಸಮಯೆ ಬಹುಪುತ್ರದಾತಾ ॥

ಟೀ॥ ವಿವಾಹಲಗ್ನದ ಕೇಂದ್ರಸ್ಥಾನದಲ್ಲಾದರೂ ತ್ರಿಕೋಣ ಸ್ಥಾನದಲ್ಲಾದರೂ ಒಬ್ಬಶುಭಗ್ರಹವು ಉಚ್ಚ ಮೂಲತ್ರಿಕೋಣ ಸ್ವಕ್ಷೇತ್ರಸ್ವಕೀಯ ಷಡ್ವರ್ಗಸಹಿತನಾಗಿಯೂಬಲಿಷ್ಠನಾಗಿಯೂ ಇರುವಾಗಲೂ,ಹಾಗೆಯೇ, ಪಾಪಗ್ರಹಗಳಸ್ಥಾನಾದಿಬಲಯುಕ್ತ ರಾಗಿ೩-೬-೧೧ಈಸ್ಥಾನ·ಗಳಲ್ಲಿರುವಾಗಲೂ, ಇಂತಾಶುಭಯೋಗ ದಲ್ಲಿ ವಿವಾಹವುದಂಪತಿಗಳಿಗೆಬಹುಪುತ್ರರನ್ನುಂಟುಮಾಡುತ್ತದೆ

ಮೂ॥ ಲಾಭಸ್ಥೆಸೂರ್ಯಪುತ್ರೆಚಷಷ್ಠೆಸೂರ್ಯೆಚತಿಷ್ಠತಿ । ವಿಲ
ಗ್ನೆತುಸಿತೆಜೀವೆತೃತೀಯೆಧರಣೀಸುತೆ । ಚಂದ್ರೆಚದಶಮ
ಕ್ಷೇತುಶುಕ್ರೆರಂಧ್ರೆಚಸಂಸ್ಥಿತೆ। ಏಕಸ್ತುಸ್ಯಾತ್ಸಮಾಯೊ
ಗೊದಂಪತ್ಯೋಃಪುತ್ರಪೌತ್ರದಃ ॥

ಟೀ॥ ವಿವಾಹ ಲಗಕ್ಕೆ ೧೧ ರಲ್ಲಿ ಶನಿಯು, ೬ ರಲ್ಲಿ ರವಿಯು, ಲ ಗ್ನದಲ್ಲಿ ಗುರುವು, ೩ ರಲ್ಲಿ ಕುಜನು, ೧೦ರಲ್ಲಿ ಚಂದ್ರನು, ೮ ರಲ್ಲಿ ಶುಕ್ರನೂ ಇದ್ದರೆ ಇಂತಾಶುಭಯೋಗವು ದಂಪತಿಗಳಿಗೆ ಮಕ್ಕ ಳನ್ನುಂಟುಮಾಡುತ್ತದೆ.

ಮೂ॥ ಲಗ್ನೆ ಗುರುಃಕುಜೊಲಾಭೆದಶಮೆಭಾಸ್ಕರೊಭವೆತ್। ಉ
ಮಾಶಂಕರಮಿತ್ಯಾಹುರ್ದಂಪತ್ಯೋಶ್ಚ ಸುಖಾವಹಂ ॥

ಟೀ॥ ವಿವಾಹ ಲಗ್ನದಲ್ಲಿ ಗುರುವು, ೧೧ ರಲ್ಲಿ ಕುಜನು, ೧೦ರಲ್ಲಿ ರವಿಯುಇದ್ದರೆ ಇದು ಉಮಾಶಂಕರಯೋಗವೆಂಬುವದು, ಈಶು ಭ ಯೋಗವುದಂಪತಿಗಳಿಗೆ ಪುತ್ರರನ್ನೀಯುತ್ತದೆ.

ಮೂ॥ ಕುಜಾರ್ಕಶುಕ್ರಜೀವಾಸ್ಸ್ಯುರಾಪೋಕ್ಲೀಬಗತಾಯದಿ ।
ರಮಾವಿಷ್ಣುರಿತಿಖ್ಯಾತೊದಂಪತ್ಯೋಶ್ಚ ಸುಖಾವಹಂ ॥

ಟೀ॥ ಕುಜ ರವಿ ಶುಕ್ರಗುರುಗಳು ವಿವಾಹ ಲಗ್ನಕ್ಕೆ ೩-೬-೯-

೧೬ನೇಸ್ಥಾನದಲ್ಲಿದ್ದರೆ ಬಹಳಶ್ರೇಷ್ಠ [illegible] ಶುಭಯೋ
ಗವು, ದಂಪತಿಗಳಿಗೆ ಸುಖಕರವಾಗಿಹುದು.

ರಾ ಹು ಕೇ ತು ದೋ ಷಃ .

ಮೂ॥ ಲಗ್ನಾಸ್ತಸಂಪ್ರಾಪ್ತೌಯದಿ ರಾಹುಕೇತೂನದೋಷದಾವೇತಿ
ವದಂತಿಕೇಚಿತ್ । ತ್ರಿಸ್ಕಂಧಶಾಸ್ತ್ರಾಗಮವೇದಿನಸ್ತುಲಗ್ನಾ
ಸ್ತಗೌತೌಚಹಿವರ್ಜಯಂತಿ॥

ಟೀ॥ ವಿವಾಹ ಲಗ್ನಕ್ಕೆಲಗ್ನಸಪ್ತಮಗಳಲ್ಲಿರಾಹುಕೇತುಗಳಿದ್ದ
ರೂ ದೋಷವಿಲ್ಲವನ್ನುತ್ತಾರೆ. ತ್ರಿಸ್ಕಂಧ ಶಾಸ್ತ್ರವನ್ನು ತಿಳಿದ ಕೆ
ಲವರುಲಗ್ನಸಪ್ತಮಗಳಲ್ಲಿ ರಾಹುಕೇತುಗಳಿರಕೂಡದೆನ್ನುತ್ತಾರೆ

ಲಗ್ನಾಸ್ತ ರಾಹುದೋಷ ಭಂಗವು.

ಮೂ॥ ವಿವಾಹಶುಭದೇವಾನಾಂಪ್ರತಿಷ್ಠಾಸೂಪನಾಯನೇ। ಛಾ
ಗ್ರಹೌತುವಿಜ್ಞೇಯೌರಾಹುಕೇತೂನದೋಷದೌ॥

ಟೀ॥ ವಿವಾಹದಲ್ಲಿಯೂ, ದೇವಪ್ರತಿಷ್ಠೆಯಲ್ಲಿಯೂ, ಉಪನ
ಯನದಲ್ಲೂ, ಛಾಯಾಗ್ರಹಗಳಾದರಾಹುಕೇತುಗಳದೋಷವಿಲ್ಲವು

ಚಂದ್ರಸ್ಯಾಸ್ತವೃದ್ಧಬಾಲ್ಯವು.

ಮ॥ ವೃದ್ಧತ್ವಮಿಂದೋಸ್ತ್ರಿದಿನಂದಿನಾರ್ಧಂಬಾಲತ್ವಮಸ್ತತ್ವ
ಮಹರ್ದ್ವಯಂಚ। ಅಸ್ತೇವಿದೌಮೃತ್ಯುಮುಪೈತಿಕನ್ಯಾಬಾಲೇನ್ನ
ನ್ನಸಕ್ತಾವಿಧವಾಚವಿದ್ಧಃ॥

ಟೀ॥ ಚಂದ್ರನಿಗೆ ೩ ದಿನಗಳು ವೃದ್ಧತ್ವವು, ೧॥ ದಿನ ಬಾಲತ್ವ
ವು. ೨ ದಿನಗಳು ಅಸ್ತತ್ವವು, ಹೀಗೆ ಚಂದ್ರನು ಅಸ್ತಗತನಾಗಿರು
ವಾಗ ಮದುವೆಯಾದರೆ ಕನ್ಯೆಗೆ ಮರಣ ಉಂಟಾಗುತ್ತದೆ ಅವ
ನು ಬಾಲನಾಗಿದ್ದರ ಕನ್ಯೆವ್ಯಭಿಚಾರಿಯಾಗುತ್ತಾಳೆ, ಅವನು, ವೃ
ದ್ಧನಾಗಿರುವಾಗ ವಿವಾಹವಾದರೆ ಅವಳು ವಿಧವೆ ಯಾಗುತ್ತಾರೆ.

ಮೂ॥ ಭವತ್ಯೇಮೃತರಶ್ಮಿತ್ವಾದ್ಬಾಲೋಪಿಶುಭದಶ್ಶಶೀ। ಶಶೀಶಿಶು
ರ್ದ್ವಿತೀಯಾಯಾಂಶುಭಂಕಾರ್ಯಂಸದಾಬುಧೈಃ॥

ಟೀ॥ಚಂದ್ರನುಅಮೃತಕಿರಣನಾದ್ದರಿಂದಅವನುಬಾಲನಾಗಿದ್ದಾ
ಗ್ಯೂಶುಕ್ಲದ್ವಿತೀಯೆಯಲ್ಲಿ ಶುಭಕಾರ್ಯಗಳನ್ನು ಮಾಡತಕ್ಕದ್ದು.

ಗ್ರಹಣ ದೋಷವು.

ಮೂ॥ ಗ್ರಸ್ತೇಸ್ತೇತ್ರಿದಿನಂ ಪೂರ್ವಮ್ಪಶ್ಚಾದ್ಗ್ರಸ್ತೋದಯೇತ
ಥಾ । ಸಂಧ್ಯಾಕಾಲೇತ್ರಿತ್ರಿದಿನಂ ನಿಶ್ಶೇಷೇಸಪ್ತಸಪ್ತಚ ॥

ಟೀ॥ ಸೂರ್ಯ ಚಂದ್ರರಿಗೆ ಗ್ರಸ್ತಾಸ್ತಮಯ ಗ್ರಹಣವಾದಾಗ ಗ್ರಹಣಕ್ಕೆ ಮುಂದೆ ಮೂರುದಿನಗಳು ಬಿಡತಕ್ಕವು, ಗ್ರಸ್ತೋದಯವಾದಾಗ ಗ್ರಹಣದಿನಾನಂತರ ಮೂರುದಿನಗಳನ್ನು ಬಿಡಬೇಕು, ಸಂಧ್ಯಾಕಾಲ ಗ್ರಹಣದಲ್ಲಿ ಮುಂದೆಯೂ ಹಿಂದೆಯೂ ೩ ದಿನಗಳನ್ನು ಬಿಡಬೇಕು, ಸಂಪೂರ್ಣ ಗ್ರಹಣದಲ್ಲಿಮುಂದೂ ಹಿಂದೂ ಏಳೇಳು ದಿನಗಳನ್ನು ಬಿಡತಕ್ಕದ್ದು.

ಮೂ॥ ಉತ್ಪಾತಗ್ರಹಣಾದೂರ್ಧ್ವಂಸಪ್ತಾಹಮಖಿಲಗ್ರಹಣಾ
ಖಿಲೇತ್ರಿದಿನಂನಷ್ಟಂನೇಷ್ಟಂತದ್ಭಂಮೃತೇತ್ರಯಮ್ ॥

ಟೀ॥ ಕಂಕಣ ಗ್ರಹಣ ಮೊದಲಾದ ಉತ್ಪಾತ ಗ್ರಹಣದಲ್ಲೂ, ಪೂರ್ಣಗ್ರಾಸದಲ್ಲೂ, ಪರದಲ್ಲಿ ಏಳು ದಿನಗಳು, ಸಂಪೂರ್ಣವಲ್ಲದ ಗ್ರಹಣದಲ್ಲಿ ೩ದಿನಗಳೂ ಅಪ್ರಶಸ್ತಗಳು, ಯಾವನಕ್ಷತ್ರದಲ್ಲಿ ಗ್ರಹಣ ಹಿಡಿಯುತ್ತದೊ ಆನಕ್ಷತ್ರವು ಆರುತಿಂಗಳವರಿಗೂ ಶುಭ ಕಾರ್ಯಗಳಲ್ಲಿ ತ್ಯಾಜ್ಯವು .

ಮೂ॥ ಪಕ್ಷಗ್ರಹಣಮಧ್ಯೇತು ವಿವಾಹಂಚೋಪನಾಯನಂ। ಯ
ದಿಕುರ್ಯಾತ್ಪಮೋಹಾತ್ಮನಷ್ಟಾಯುಸ್ತ್ರೀವಿಯೋಗವಾನ್ ॥

ಟೀ॥ ಪೂರ್ಣಿಮಾ, ಅಮಾವಾಸ್ಯಾ ಯೆರಡರಲ್ಲಿಯೂ ಗ್ರಹಣ ಬರುವಾಗಇವುಗಳ ಮಧ್ಯಕಾಲದಲ್ಲಿ ಯಾವನಾದರೂ ಅಜ್ಞಾನದಿಂದ ವಿವಾಹೋಪನಯನಗಳನ್ನು ಮಾಡಿದರೆ ಅವನು ಅಲ್ಪಾಯುಸ್ಸಾಗಿಯೂ ಸ್ತ್ರೀಹೀನನಾಗಿಯೂ ಆಗುತ್ತಾನೆ.

## ತ್ರಿಜ್ಯೇಷ್ಠ ನಿಷೇಧಃ.

ಮೂ॥ ಜ್ಯೇಷ್ಠಾಂಗನಾಕರಗ್ರಹಣಂನಕುರ್ಯಾ ಜ್ಯೇಷ್ಠರ್ಕ್ಷಜ
ಸ್ಯಪುರುಷಸ್ಯಚಶುಕ್ರಮಾಸೆ। ಚಿದರ್ಥಹಾನಿಕಲಹಪ್ರದಮಾ
ಶುತಸ್ಯಜ್ಯೇಷ್ಠಾಂಗನಾಪುರುಷಯೋಶ್ಚ ಪರಸ್ಪರಂಚ ॥

ಟೀ॥ ಜ್ಯೇಷ್ಠಮಾಸದಲ್ಲಿ ಜ್ಯೇಷ್ಠಾ ನಕ್ಷತ್ರದಲ್ಲಿಯೆ ಹುಟ್ಟಿದ ಸ್ತ್ರೀ ಪುರುಷರಿಇಂಥಾ ವಿವಾಹವನ್ನು ಮಾಡಿದರೆ ದ್ರವ್ಯಹಾನಿ, ಕಲಹಗಳುಂಟಾಗುತ್ತವೆ, ಹಾಗೆಯೇ ಜ್ಯೇಷ್ಠ ಪುತ್ರನಿಗೂ ಜ್ಯೇಷ್ಠ

ಮಾಸದಲ್ಲಿ ವಿವಾಹ ಮಾಡಕೂಡದು.

ಮೂ॥ ಆದ್ಯಗರ್ಭದ್ವಯೋರ್ಜ್ಯೇಷ್ಠಜ್ಯೇಷ್ಠಾನಕ್ಷತ್ರ ಜಾತಯೋಃ। ಜ್ಯೇಷ್ಠಮಾಸೇನಕುರ್ವೀತ ಜ್ಯೇಷ್ಠಂಪಂಚವಿವರ್ಜಿತಂ ।

ಟೀ॥ ಪ್ರಥಮಗರ್ಭಗಳಲ್ಲಿಯುಜ್ಯೇಷ್ಠಾನಕ್ಷತ್ರಗಳಲ್ಲಿಯುಹುಟ್ಟಿದಸ್ತ್ರೀಪುರುಷರಿಗೆ ಜ್ಯೇಷ್ಠ ಮಾಸದಲ್ಲಿ ವಿವಾಹ ಮಾಡಿದರೆ ಸಂಚ ಜ್ಯೇಷ್ಠವಾಗುವದರಿಂದ ಅಶುಭಕರವಹುದು.

ಏಕೋದರ ವಿವಾಹವು.

ಮೂ॥ ವಿವಾಹಶ್ಚೈಕಜನ್ಯಾನಾಂ ಷಣ್ಮಾಸಾಭ್ಯಂತರೇಯದಿ। ಅಸಂಶಯಂತ್ರಿಭಿರ್ವರ್ಷೈಸ್ತತ್ರೈಕಾವಿಧವಾಭವೇತ್ ॥

ಟೀ॥ ಒಂದೇ ಗರ್ಭದಲ್ಲಿ ಪುಟ್ಟಿದ ಇಬ್ಬರು ಕನ್ಯೆಯರಿಗಾಗಲಿ ಮೂವರಿಗಾಗಲೀ ಅವರಲ್ಲಿ ಒಬ್ಬಳಿಗೆ ಮದುವೆಯಾದ ೬ ತಿಂಗಳೊಳಗಾಗಿ ಮತ್ತೊಬ್ಬಳಿಗೆ ಮದುವೆಯಾದರೆ ೩. ವರ್ಷಗಳೊಳಗಾಗಿ ಅವರಲ್ಲೊಬ್ಬಳು ವಿಧವೆಯಾಗುವದಕ್ಕೆ ಸಂದೇಹವಿಲ್ಲ.

ಮೂ॥ ಕದಾಚಿದೇಕಜನ್ಯಾನಾಂ ಸವಿವಾಹನ್ಮೃತುತ್ರಯೇ। ಯತ್ರವರ್ಷೇಣತತ್ರೈಕಾವಿಧವೈವನಸಂಶಯಃ ॥

ಟೀ॥ ಒಂದು ಗರ್ಭದಲ್ಲಿ ಪುಟ್ಟಿದ ಇಬ್ಬರು ಕನ್ಯೆಯರಿಗೆ ಆರು ತಿಂಗಳೊಳಗಾಗಿ ಮದುವೆಯಾದರೆ ಒಂದು ವರ್ಷದೊಳಗಾಗಿ ಅವರಲ್ಲೊಬ್ಬಳು ವಿಧವೆಯಾಗುತ್ತಾಳೆ ಯಾಗಿ ಅಂತರವರಿಗೆ ಮದುವೆಯನ್ನು ಮಾಡಕೂಡದು.

ಮೂ॥ ಪುತ್ರೀವಿವಾಹಾತ್ಪರತಸ್ತಥೈವ ಶುಭಪ್ರದಂಪುತ್ರವಿವಾಹಕರ್ಮ । ಪುತ್ರೀದ್ವಯಂನೈವಋತುತ್ರಯೇಪಿಪುತ್ರದ್ವಯಂವಾಪಿಕದಾಚಿದೇವ ॥

ಟೀ॥ ಮೊದಲು ಕನ್ಯೆಗೆ ಮದವೆಯನ್ನು ಮಾಡಿ ಆವಾಗಲೇ ಮಗನಿಗೆಮದುವೆಯನು ಮಾಡತಕ್ಕದ್ದು, ಆಷ್ಟೇಹೊರ್ತು ಇಬ್ಬರು ಹೆಣ್ಣು ಮಕ್ಕಳಿಗೆ ಒಂದೇ ಕಾಲದಲ್ಲೂ ಅಥವಾ ಆರು ತಿಂಗಳೊಳಗಾಗಿಯೂ ಮದುವೆಯನ್ನು ಮಾಡಕೂಡದು.

ಮೂ॥ ಮಹಾನದೀಪರ್ವತ ಮಂತರಾವಾಕೃತ್ವಾವಿವಾಹಂಸಹಜಸ್ಯತಸ್ಯ। ತಸ್ಯಾನುಜಸ್ಯಾಪಿತದೈವಕಾರ್ಯಂವಾಂಜೀನಿಬಂ

ಧಾಖ್ಯಮಿದಂಹಿಶಸ್ತಂ ॥

ಟೀ॥ ಇಬ್ಬರು ಸಹೋದರರಲ್ಲಿ ಜ್ಯೇಷ್ಠ ಕನಿಷ್ಠರಿಗೆ ವಿವಾಹ ಉಪನಯನಗಳನ್ನು ಮಾಡಬೇಕಾಗಿ ಬಂದರೆ ಗಂಗಾ ಮಹಾ ನದಿಗಳಾಗಲಿ ವಿಂಧ್ಯಾದಿಪರ್ವತಗಳಾಗಲಿ ಅಡ್ಡವಾಗಿರುವಬೇರೆಸ್ಥಳಗಳಲ್ಲಿ ಮಾಡಿದರೆ ಶುಭಕರವು, ಅದರಲ್ಲಿಯೂ ದೊಡ್ಡವನಿಗೆ ಮುಂದೆ ಮದುವೆಯನ್ನು ಮಾಡಿಸಿ ತಮ್ಮನಿಗೆ ಉಪನಯನವನ್ನು ಮಾಡಕ್ಕದ್ದು.

ಮೂ॥ ಶುಭಕೃತ್ಪುತ್ರಿಕೋದ್ವಾಹಾತ್ಪಶ್ಚಾತ್ಪುತ್ರಕರಗ್ರಹಃ ।ಏಕತಿಥ್ಯಾಮಪಿಪ್ರಾಹಭಾರ್ಗವೋಭಿನ್ನವೇಳಯಾ ॥

ಟೀ॥ ಮಗಳಿಗೂ ಮಗನಿಗೂ ಮದುವೆಯಗಳನ್ನು ಒಂದೇ ದಿನದಲ್ಲಿ ಮಾಡಬೇಕಾಗಿ ಬಂದರೆ ಬೇರೆ ಬೇರೆ ಲಗ್ನಗಳನ್ನು ಇಟ್ಟುಕೊಂಡು ಒಂದೇ ತಿಥಿಯಲ್ಲು ಮಾಡ ಬಹುದೆಂಬದಾಗಿ ಶುಕ್ರಾಚಾರ್ಯರು ಹೇಳಿದರು.

ಮೂ॥ ಪೃಥಜಂಟಪಯೋಃಕೇಚಿನ್ನಾರ್ಯೋರೇಕೋದರಸ್ತ್ರಿಯೋಃ ।ಇಚ್ಛಂತಿಭಿನ್ನವೇಳಾಯಾಂತಯೋರುದ್ವಾಹಮಂಗಳಂ ॥

ಟೀ॥ ಏಕೋದರರಾದ ಇಬ್ಬರು ಕನ್ಯೆಯರಿಗೆ ಬೇರೆಬೇರೆ ವಿವಾಹ ಮಂಟಪಗಳಲ್ಲೂ ಬೇರೆಬೇರೆ ಲಗ್ನಗಳಲ್ಲೂ ವಿವಾಹ ಮಾಡಬಹುದೆಂದು ಕೆಲವರುಹೇಳುತ್ತಾರೆ.

ಮೂ॥ ಏಕಲಗ್ನೇಪಿಭಿನ್ನಾಂಶವಸಿಷ್ಠಾತ್ರಿಪರಾಶರಾಃ । ತಯೋರ್ವಿವಾಹಮಿಚ್ಛಂತಿಪೃಥಗ್ಗ್ರಾಮೇಥಮಂಟಪೇ ॥

ಟೀ ॥ ಒಂದೇ ಲಗ್ನದಲ್ಲಾದರೂ ಅಂಶಭೇದಗಳಲ್ಲೂ ಬೇರೆಬೇರೆ ಗ್ರಾಮಗಳಲ್ಲೂಬೇರೆಬೇರೆ ಮಂಟಪಗಳಲ್ಲೂ ಏಕೋದರರಾದಕನ್ಯೆಯರಿಗೆ ವಿವಾಹಮಾಡ ಬಹುದೆಂಬದಾಗಿ ವಸಿಷ್ಠರು, ಅತ್ರಿಯು, ಪರಾಶರರು, ಈ ಋಷೀಶ್ವರರುಗಳು ಹೇಳಿದರು

ಮೂ॥ ಫಾಲ್ಗುನೇಚೈತ್ರಮಾಸೇಚಪುತ್ರೋದ್ವಾಹೋಪನಾಯನೇ । ಭೇದಾದಬ್ದಸ್ಯಕುರ್ವೀತನರ್ತುತ್ರಯವಿಲಂಬನಂ ॥

ಟೀ॥ ಜ್ಯೇಷ್ಠಕನಿಷ್ಠ ಪುತ್ರರಿಗೆ ವಿವಾಹೋಪನಯನಗಳನ್ನು ಮಾಡಬೇಕಾದರೆ ಫಾಲ್ಗುನ ಮಾಸದಲ್ಲಿ ವಿವಾಹವನ್ನು ಚೈತ್ರಮಾ

ಸದಲ್ಲಿ ಉಪನಯನವನ್ನು ಸಹ ಮಾಡಬಹುದು, ಇದರಲ್ಲಿ ವರ್ಷ ಭೇದ ಉಂಟಾಗಿ ಇರುವದರಿಂದ ಮೂರು ಋತು ಕಳಿಯಬೇಕೆಂಬ ಶಾಸ್ತ್ರಕ್ಕೆ ಒಂದು ವರ್ಷದೊಳಗಿನ ಮೂರು ಋತುಗಳೆಂಬದೇ ಅರ್ಥವಾದದರಿಂದ ಆ ದೋಷಕ್ಕೆ ಇಲ್ಲಿ ಪ್ರಸಕ್ತಿ ಇರುವದಿಲ್ಲ.

ಮೂ॥ ಕುಮಾರ್ಯೋಸ್ಸುತಯೋಃ ಪುತ್ರಪುತ್ರ್ಯೋರೇಕೋದರಸ್ತ
ಯೋಃ । ವಿವಾಹೋಬ್ದಾಂಶಸ್ತನ್ನ್ಯೋರ್ನದ್ಯಂತರೇಯಥಾ ॥

ಟೀ॥ ಒಂದೇ ಗರ್ಭದಲ್ಲಿ ಪುಟ್ಟಿದ ಹೆಂಣು ಮಕ್ಕಳಿಗಾದರೂ, ಗಂಡು ಮಕ್ಕಳಿಗಾದರೂ, ಹೆಂಣು ಗಂಡಗಳಿಗಾದರೂ, ಒಂದೇ ಕಾಲದಲ್ಲಿ ಮದುವೆಮಾಡಬೇಕಾಗಿ ಬಂದರೆ ಮಹಾ ನದಿಯಡ್ಡವಾಗಿ ಆದರ ಉಭಯ ಪಾರ್ಶ್ವಗಳಲ್ಲಿರುವ ಗ್ರಾಮಗಳಲ್ಲಿ ಮಾಡಿದಂತ ಬೇರೆಬೇರೆ ವರ್ಷಗಳಲ್ಲಿ ಮಾಡಿದರೆ ಶುಭಕರವಾಗುವದು.

ಮೂ॥ ಕಲ್ಪಯೆದ್ವೇದಿಕಾಂರಮ್ಯಾಂಮಂಟಪಂಚಪೃಥಕ್ಪೃಥ
ಕ್ । ಭಿಂನೋದರ ಪ್ರಸೂತಾನಾಮೆಕತಿಥ್ಯಾಂಕರಗ್ರಹಃ ॥

ಟೀ॥ ಬೇರೆಬೇರೆ ರಮ್ಯಗಳಾದ ವಿವಾಹ ಮಂಟಪಗಳನ್ನು ಮದುವೆ ವೇದಿಕೆಗಳನ್ನು ನಿರ್ಮಾಣಮಾಡಿ ಅವುಗಳಲ್ಲಿ ಮದುವೆ ಮಾಡಿಸುವದು, ಏಕೋದರರಲ್ಲದೆ ಸವತಿಗಳ ಮಕ್ಕಳುಗಳಿ ಒಂದೇಶ ತಿಥಿಯಲ್ಲೂ ಮದುವೆಯನ್ನು ಮಾಡಬಹುದು.

ಮೂ॥ ಮುಂಡನಾನ್ಮಂಡನಂಚೈವ ಮಂನಾನ್ನತುಮುಂಡನಂ

ಟೀ॥ ಮಕ್ಕಳಿಗೆ ವಿವಾಹೋಪನಯಗಳನ್ನು ಮಾಡಬೇಕಾಗಿ ಬಂದಾಗಮೊದಲು ಮದುವಿಯನ್ನುಮಾಡಿ ತರವಾಯ ಉಪನಯವನ್ನು ಮಾಡತಕ್ಕದ್ದು.

ಅಭಿಜಿದ್ಮೋಧೂಳಿ ಲಕ್ಷಣವು.

ಮೂ॥ ಮಧ್ಯಂದಿನಗತೆಭಾಸೌಮುಹೂರ್ತೋಭಿಜಿದಾಹ್ವಯಃ
ಸರ್ವದೋಷಾನ್ನಿಹಂತ್ಯಾಶುಪಿನಾಕೀತ್ರಿಪುರಂಯಥಾ ॥

ಟೀ॥ ಸೂರ್ಯನು ಸರಿಯಾಗಿ ಆಕಾಶಮಧ್ಯದಲ್ಲಿ ನಿಂತಾಗ ಒಂದು ಮುಹೂರ್ತಕಾಲ ಅಭಿಜಿತ್ತೆಂಬ ಶುಭಕಾಲ, ಅಂಥಾ ಕಾಲವು ಮಹೇಶ್ವರನು ತ್ರಿಪುರಗಳನ್ನು ಸುಟ್ಟಂತೆ ಸಕಲ ದೋಷಗಳನ್ನು ನಾಶಮಡುತ್ತದೆ.

ಮೂ॥ ಸೂರ್ಯಾಚ್ಚತುರ್ಥಂಯಲ್ಲಗ್ನಮಭಿಜಿತ್ಸಂಜ್ಞಕಂಚತ
ತ್। ಸರ್ವದೇಶೇಷ್ವಿದಂಮುಖ್ಯಂ ಸರ್ವವರ್ಣೇಷುಸರ್ವದಾ ॥

ಟೀ॥ ಸೂರ್ಯನಿರುವ ಲಗ್ನಕ್ಕೆ ನಾಲ್ಕನೇ ಲಗ್ನವು ಅಬಿಜಿತ್ ಅನ್ನಿಸಿಕೊಳ್ಳುತ್ತದೆ. ಇದು ಸರ್ವ ದೇಶಗಳಲ್ಲೂ ಸರ್ವವರ್ಣಗಳಲ್ಲೂ ಮುಖ್ಯವಾದುದು.

ಮೂ॥ ಅಶೇಷದೋಷಾಪಹರಂಶುಭಪ್ರದಂಜಗುರ್ಮುನೀಂದ್ರಾ ಅ
ಭಿಜಿನ್ಮುಹೂರ್ತಂ। ತದ್ವೈವಗೋಧೂಳಿಕ ನಾಮಧೇಯಂವಿ
ಜಾಹಯಾತ್ರಾದ್ಯಖಿಲೋತ್ಸವೇಷು ॥

ಟೀ॥ ಪೂರ್ವ ಋುಷಿಗಳು ಮದುವೆ ಯಾತ್ರೆ ಮುಂತಾದ ಸರ್ವ ಶುಭಕಾರ್ಯಗಳಲ್ಲೂ ಅಭಿಜಿನ್ಮುಹೂರ್ತ ಗೋಧೂಳಿ ಲಗ್ನ ಇವೆರಡುಗಳನ್ನೂ ಸರ್ವದೋಷ ಹರಗಳನ್ನಾಗಿಯೂ ಶುಭಕರಗಳನ್ನಾಗಿಯೂ ಹೇಳುತ್ತಾರೆ.

ಮೂ॥ ಅಭಿಜಿತ್ಸರ್ವಕಾರ್ಯೇಷುಶಸ್ತಂನಾತೋಪನಾಯನಂ।
ಸೂರ್ಯಾತ್ಸಪ್ತಮಲಗ್ನಂಯದ್ಗೋಧೂಳಿಕಮಿತಿಸ್ಮೃತಂ ॥

ಟೀ॥ ಅಭಿಜಿನ್ಮುಹೂರ್ತವು ಸರ್ವ ಶುಭಕಾರ್ಯಗಳಲ್ಲೂ ಪ್ರಶಸ್ತವಾದರೂ ಉಪನಯನದಲ್ಲಿ ಮಾತ್ರ ಅಪ್ರಶಸ್ತವು ಸೂರ್ಯನಿರುವ ರಾಶಿಗೆ೭ನೇರಾಶಿಗೋಧೂಳಿ ಲಗ್ನವನ್ನಿಸಿಕೊಳ್ಳುತ್ತದೆ.

ಮೂ। ಪಾಶ್ಚಾತ್ಯಾನಾಂಕಳಿಂಗಾನಾಂ ಮುಖ್ಯಂಗೋಧೂಳಿ
ಕಂಸ್ಮೃತಂಅಭಿಜಿತ್ಸರ್ವದೇಶೇಷುಮುಖ್ಯಂದೋಷವಿದಾಶಕೃತ್ ॥

ಟೀ॥ ಪಶ್ಚಿಮ ದೇಶದವರಿಗೂ ಕಳಿಂಗ ದೇಶದವರಿಗೂ ಗೋಧೂಳಿಲಗ್ನ ಮುಖ್ಯವು, ಕಡಮೆ ಯೆಲ್ಲಾ ದೇಶಗಳಲ್ಲೂ ಅಭಿಜಿತ್ತು ಶ್ರೇಷ್ಠವಾಗಿಯೂ ದೋಷಹರವಾಗಿಯೂ ಇರುವದು

## ನೂತನವಧೂಪ್ರವೇಶವು ವಾಸಿಷ್ಠೇ.

ಮೂ॥ ಷಷ್ಠೇಷ್ಟಮೆದಾದಶಮೆದಿನೇವಾವಿವಾಹಮಾರಭ್ಯವಧೂ
ಪ್ರವೇಶಃ। ಪಂಚಾಂಗಶುದ್ಧಿಂಚದಿನಂವಿನಾಪಿತಿಥೌನಸದ್ಗೋ
ಚರಕೇಪಿಕಾರ್ಯಃ ॥

ಟೀ॥ ಮದುವೆಯಾದ ೬-೮-೧೦ ಈ ದಿನಗಳಲ್ಲಿ ಪಂಚಾಂಗ ಶುದ್ಧಿ ಇಲ್ಲದಿದ್ದಾಗ್ಯೂಗೋಚಾರ ನೆಟ್ಟಗೆ ಇಲ್ಲದಿದ್ದಾಗ್ಯೂ ಮ

ದವೆಯಾದ ಹೆಣ್ಣಿಗೆ ಪತಿಯುಗೃಹ ಪ್ರವೇಶಮಾಡಿಸಬಹುದು.

ಮೂ॥ ವಿವಾಹಮಾರಭ್ಯವಧೂಪ್ರವೇಶೋಯುಗ್ಮೆದಿನೆಷೋಡಶ ವಾಸರಾಂತೇತದೂರ್ಧ್ವಮಬ್ಧೇಯುದಿಪಂಚಮೆವಾಶಸ್ತ್ರಸ್ತ್ರದೂರ್ಧ್ವಂವಿಷಮೆಸಮೆವಾ ॥

ಟೀ॥ ವಿವಾಹದಿನಮೊದಲು ೧೬ ದಿನಗಳವರಿಗೂ ಯುಗ್ಮಗಳಾದ ೬-೮-೧೦-೧೨-೧೪-೧೬ ಈ ದಿನಗಳಲ್ಲಿ ನೂತನ ವಧುವಿಗೆ ಗೃಹಪ್ರವೇಶಮಾಡಿಸತಕ್ಕದ್ದು, ಅದುಕಳೆದತರುವಾಯ ಸಮಗಳಾದ ೨-೪ ಈ ಸಂವತ್ಸರಗಳಲ್ಲಿ ಮಾಡತಕ್ಕದ್ದು, ಅಥವಾ ವಿಷಮವಾದಾಗ್ಯೂ ೫ ನೇ ವರ್ಷದಲ್ಲಾದರೂಮಾಡತಕ್ಕದ್ದು, ಅದೂಕಳೆದುಮೇಲೆ ಯಾವ ಸಂವತ್ಸರದಲ್ಲಾದರೂ ಶುಭದಿನ ವಾರ ನಕ್ಷತ್ರಲಗ್ನಗಳಲ್ಲಿ ನೂತನವಧೂಪ್ರವೇಶ ಮಾಡಿಸತಕದ್ದು

ಮೂ ॥ ವಧೂಪ್ರವೇಶಂಪ್ರಥಮೇಚವರ್ಷೇತ್ರೃತೀಯೇವರ್ಷೇಪಿ ಶುಭಂವದಂತಿ। ವರ್ಷೇದ್ವಿತೀಯೆಸ್ತ್ವಥವಾಚತುರ್ಥೇವಧೂಪ್ರವೇಶಸ್ತ್ವಥಭರ್ತೃನಾಶಃ ॥

ಟೀ॥ ಹೊಸದಾಗಿಮದುವೆಯಾದ ಕನ್ಯೆಗೆ ಗೃಹಪ್ರವೇಶವು ೧ ನೇ ೩ ನೇ ವರ್ಷಗಳಲ್ಲಿ ಶುಭಕರವು, ೨ ನೇ ೪ನೇ ವರ್ಷಗಳಲ್ಲಿ ಅಶುಭಕರಗಳು.

ಪ್ರವೇಶತ್ರೈವಿಧ್ಯಂ-ಮೂರುವಿಧಪ್ರವೇಶವು.

ಮೂ॥ ವಧೂಪ್ರವೇಶೋನದಿವಾಪ್ರಶಸ್ತೋ ನೃಪಪ್ರವೇಶೋನನಿಶಿಪ್ರಶಸ್ತಃ। ದಿವಾಚರಾತ್ರೌಚ ಗೃಹಪ್ರವೇಶಃಕರೋತಿಕರ್ತುಶ್ಶುಭಕಾರ್ಯಸಿದ್ಧಿಂ ॥

ಟೀ॥ ಹಗಲಿನಲ್ಲಿಸ್ತ್ರೀಗೆ ನೂತನಗೃಹಪ್ರವೇಶ ಮಾಡಕೂಡದು, ರಾಜಗೃಹಪ್ರವೇಶವುರಾತ್ರಿಯಲ್ಲಿಮಾಡತಕ್ಕದ್ದಲ್ಲ, ನೂತನವಧೂಪ್ರವೇಶವು ರಾತ್ರಿಯಲ್ಲೂ ರಾಜಗೃಹಪ್ರವೇಶಹಗಲಲ್ಲಿಯೂ ಮಾಡತಕ್ಕದ್ದು, ಅದು ಮಂಗಳಕರವಾಗುತ್ತದೆ.

ವಧೂಪ್ರವೇಶನಕ್ಷತ್ರವಾರಾದಿಗಳು.

ಮೂ॥ ನೀಹಾರಾಂಶುವಸೂತ್ತರಾದಿತಿಗುರುಸಾರ್ಪಷ್ಟಾನುರಾಧಾಶ್ವಿನೀ। ಶಕ್ರಾಹಾಸ್ಕರವಾಯುವಾವರುಣಹತಿತ್ವಾಪ್ಟೈ ಷುಶಸ್ತೇ

ತಿಥೌ। ಕುಂಭೋಜಾಳಿಗತೇವಾ ಖರಕರವಾಪ್ರೋದಯೆಭಾರ್ಗವೇ।
ಜೀವೇಕ್ಯಾರ್ಸ್ಫುಜಿತಾದಿನೆನವವಧೂವದ್ಮವ್ರವೇಶಶ್ಶುಭಃ ॥

ಟೀ॥ ಮೃಗಶೀರ್ಷ, ಧನಿಷ್ಠಾ, ಉತ್ತರಾ, ಉಷಾ, ಉಭಾ, ಪುನರ್ವಸೂ ಪುಷ್ಯ, ರೋಹಿಣಿ, ಅನೂರಾಧಾ, ಅಶ್ವಿನೀ, ಜ್ಯೇಷ್ಠಾ, ಹಸ್ತ ಸ್ವಾತೀ ಶತಭಿಷಕಾ, ಶ್ರವಣ, ಈ ನಕ್ಷತ್ರಗಳು ಪ್ರಶಸ್ತವಾದ ತಿಥಿಯಲ್ಲಿಯೂ, ಸೂರ್ಯನ ಕುಂಭ ಮೇಷ ವೃಶ್ಚಿಕಗಳಲ್ಲಿ ಇರುವಾಗಲೂ ಗುರು ಶುಕ್ರರು ಉದಯವಾಗಿರುವಾಗಲೂನೂತನವಧೂ ಗೃಹಪ್ರವೇಶವು ಶುಭಕರವಾಗಿಹುದು.

ಮೂ॥ ಪೌಷೆಧಿಮಾಸೆಟಹರೌಸ್ರಸುಪ್ತೆದ್ವಿತೀಯವರ್ಷ್ಕೆಗುರು
ಶುಕ್ರಮೂಢೆ। ನವ್ರೋಢಿಕಾಯಾನಕರೋತಿಮುಂದಿರಪ್ರವೇಶ
ಮೇವಂಮುನಯೋವದಂತಿ ॥

ಟೀ॥ ಪುಷ್ಯಮಾಸದಲ್ಲೂ, ಅಧಿಕಮಾಸದಲ್ಲೂ, ಆಷಾಢ ಶ್ರಾವಣ, ಭಾದ್ರಪದ, ಆಶ್ವಿಯುಜಮಾಸಗಳಲ್ಲೂ ವಿವಾಹವಾದಯೆರಡನೇ ವರ್ಷದಲ್ಲೂಗುರು ಶುಕ್ರರು ಮೂಢದಲ್ಲೂನೂತನ ವಧೂಪ್ರವೇಶವನ್ನು ಮಾಡಕೂಡದೆಂದುಮುನೀಶ್ವರರುಹೇಳುತ್ತಾರೆ.

## ಮಲಮಾಸಸ್ವರೂಪವು.

ಮೂ॥ ಅಸಂಕ್ರಾಂತಿಮಾಸೊಧಿಮಾಸಸ್ಫುಟಸ್ಯಾದ್ದ್ವಿಸಂ
ಕ್ರಾಂತಿಮಾಸಃಕ್ಷಯಾಖ್ಯಃಕದಾಚಿತ್। ಕ್ಷಯಃಕಾರ್ತಿಕಾದಿತ್ರಯೆ
ನಾನ್ಯಥಾಸ್ಯಾಸ್ತ್ಥಾವರ್ಷಮಧ್ಯೇಧಿಮಾಸದ್ವಯಂಚ ॥

ಟೀ॥ ಯಾವತಿಂಗಳಲ್ಲಿಸೂರ್ಯನ ಸಂಕ್ರಾಂತಿ ಇಲ್ಲವೊ ಅದು ಅಧಿಕ ಮಾಸವೆಂದು ವ್ಯಕ್ತವಾಗಿಇದೆಎರಡು ಸೂರ್ಯಸಂಕ್ರಾಂತಿಯುಳ್ಳಮಾಸವುಕ್ಷಯಮಾಸವನ್ನಿಸಿಕ್ಕೊಳ್ಳುತ್ತದೆ ಅಂತಾ ಕ್ಷಯಮಾಸವು ಕಾರ್ತಿಕ, ಮಾರ್ಗಶೀರ್ಷ, ಪುಷ್ಯ ಈ ಮೂರುಮಾಸಗಳಲ್ಲಾಗುತ್ತದೆ, ಇತರಮಾಸಗಳಲ್ಲಾಗುವದಿಲ್ಲ,ಅಂತಾ ಕ್ಷಯಮಾಸಉಂಟಾದಾಗ ಆವರ್ಷದ ಮಧ್ಯದಲ್ಲಿ ಎರಡು ಅಧಿಕ ಮಾಸಗಳುಂಟಾಗುತ್ತವೆಂದು ತಿಳಿಯುವದು.

ಮೂ ॥ ಕ್ಷಯಮಾಸೆಯದಾಜಾತಸ್ಸಂಸರ್ಪಾಖ್ಯೋದ್ವಯಂಭವೇ
ತ್। ಸಂಸರ್ಪಃಪೂರ್ವಮಾಸಸ್ಯಾದಧಿಮಾಸಃಪರಸ್ಮೃತಃ ॥

ಟೀ॥ಶೋಭನವರ್ಷದಲ್ಲಿ ಕ್ಷಯಮಾಸಬರುತ್ತದೋಅವರ್ಷದಲ್ಲಿ ಯುಂಟಾಗುವವೆರಡು ಅಧಿಕ ಮಾಸಗಳಲ್ಲಿ ಮೊದಲನೇದುಸಂಸರ್ಪ ವೆಂಬದಾಗಿಯೂ ೨ನೇದು ಅಧಿಕಮಾಸವೆಂಬ ದಾಗಿಯೂ ತಿಳಿಯುವದು.

ಮೂ ॥ ಗರ್ಭೆವಾರ್ಷಿಕಭೃತ್ಯೇಶ್ರಾದ್ಧಕರ್ಮಣಿಮಾಸಿಕೆ ಸ
ಪಿಂಡೀಕರಣೆನಿತ್ಯೇನಾಧಿಮಾಸಂವಿವರ್ಜಯೇತ್ ॥

ಟೀ ॥ ಗರ್ಭಾಧಾನಸೀಮಂತ ಪುಂಸವನಾದಿ ಕರ್ಮಗಳನ್ನು ಚುಂಗಡಿ ಸಹಸಾಲತೀರಿಸಿಕ್ಕೊಳ್ಳುವದನ್ನು ಅಳಿರಿಸಿಕೊಳ್ಳುವದು ಸಾಂವತ್ಸರಿಕಾದಿಶ್ರಾದ್ಧಗಳಲ್ಲಿಯೂ ಸಪಿಂಡೀಕರಣದಲ್ಲೂ ಸಹ ಅಧಿಕಮಾಸವನ್ನು ಬಿಡಕೂಡದು, ಅದರಲ್ಲಿಯು ಮಾಡಿತೀರಬೇಕೆಂದಭಾವವು.

ಮೂ ॥ ಚಂದ್ರಸೂರ್ಯಗ್ರಹಸ್ನಾನಶ್ರಾದ್ಧದಾನಜಪಾದಿಕಂ ।
ಕಾರ್ಯಂಸ್ಯಾನ್ಮಲಮಾಸೆಪಿನಿತ್ಯನೈಮಿತ್ತಿಕಂಯಥಾ ॥

ಟೀ॥ ಚಂದ್ರಸೂರ್ಯಗ್ರಹಣಸ್ನಾನಶ್ರಾದ್ಧಜಪಾದಿ ಕರ್ಮಗಳನ್ನು ಮ॥ ಲಮಾಸದಲ್ಲೂ ಮಾಡತಕ್ಕದ್ದೇಯೆಂದು ಹೇಳಿದರು.

ಮೂ ॥ ವಾಪೀಕೂಪತಟಾಕಾದಿಪ್ರತಿಷ್ಠಾಯಜ್ಞಕರ್ಮಣಿ ।
ಗೃಹಪ್ರವೇಶಹೋಮಾದಿನಾನಾಕ್ರತುಮಹೋತ್ಸವಾನ್॥ ತೀ
ರ್ಥಯಾತ್ರೋತ್ಸವಾದೀನಿಮಹಾದಾನವತ್ರಾನಿಚ। ಮಾ
ಸಪ್ರಧಾನ್ಯಕಂಕರ್ಮಮುಕ್ತ್ವಾತತ್ಕಾಮ್ಯಕರ್ಮಚ ।
ನಕುರ್ಯಾನ್ಮಲಮಾಸೆಪಿಗುರೌಶುಕ್ರೇಧವಾಸ್ತಗೆ ॥

ಟೀ॥ ವಾಪೀಕೂಪತಟಾಕಾದಿ ಪ್ರತಿಷ್ಠೆಗಳು. ಯಜ್ಞಕರ್ಮಗಳು, ಗೃಹಪ್ರವೇಶ, ಹೋಮ, ದೇವೋತ್ಸವ, ತೀರ್ಥಯಾತ್ರಾ, ಮಹಾದಾನ, ಮಹಾವ್ರತ, ಮಾಸಪ್ರಧಾನಗಳಾದ ಇತರಕಾಮ್ಯಕರ್ಮಗಳು, ಇಂತಾವುಗಳನ್ನೆಲ್ಲಾ ಮಲಮಾಸದಲ್ಲೂ ಗುರು ಶುಕ್ರಾಸ್ತಮಯಗಳಲ್ಲಿಯೂ ಮಾಡಕೂಡದು.

ಸ್ತ್ರೀಯರ ಋತುವಿಷಯು,

ಮೂ॥ ಅನುಪಚಯಸ್ಥೆಚಂದ್ರೆಧರಣೀಸುತವೀಕ್ಷಣಾದ್ವಾಗಿ ।
ಪ್ರಥಮರಜೋದರ್ಶನತಶ್ಶುಭಾಶುಭಂಭವತಿವನಿತಾನಾಂ ॥

ಟೀ॥ ಚಂದ್ರನು ಆರ್ತವಲಗ್ನಕ್ಕೆ ೩-೬-೧ನೆ ಈ ಸ್ಥಾನಗಳಲ್ಲಿ ಇಲ್ಲದೆ ಇರುವಾಗಲೂ, ರಜೋದರ್ಶನಲಗ್ನಕ್ಕೆ ಅಂಗಾರಕನದೃಷ್ಟಿಯಿಂದಲೂ ಆಸ್ತ್ರೀಗೆ ಶುಭಾಶುಭಗಳು ಮಿಶ್ರವಾತಹುದು.

ದಿಕ್ಕುಗಳಫಲ.

ಮೂ॥ ಶೈಲಚಂದ್ರಾಷ್ಟಜಲಧಿರ ಸಾಷ್ಟೇನವಧಿಕ್ಕ್ರಮಾತ್ ।
ಪ್ರಾಗಾದಿಸ್ಯಾತ್ಪ್ರಜಾಸಂಖ್ಯಾಬಾಲಿಕಾಪ್ರಥಮಾರ್ತವೆ ॥

ಟೀ॥ ಕನ್ನೆಯುಮೊದಲನೇ ಋತುವಾದಲ್ಲಿ ಪೂರ್ವ ದಿಕ್ಕು ಮೊದಲು ಕ್ರಮವಾಗಿ ಪುತ್ರಸಂಖ್ಯೆಯು ಹ್ಯಾಗಂದರೆ, ೭-೧-೮-೪-೬-೨-೯-೧೦ ಇಷ್ಟಿಷ್ಟುಪುತ್ರಸಂಖ್ಯೆಯನ್ನು ತಿಳಿಯುವದು.

ಆರ್ತವವಸ್ತ್ರನಿರ್ಣಯವು.

ಮೂ॥ ಮೇಷಸಿಂಹೋಕ್ಷಕೋದಂಡಾನಾಮುದಯೆಧವಳಾಂಬರಾ । ಅ
ಕರ್ಕಟನಕ್ರಾಣಾಮುದಯೆಮಲಿನಾಂಬರಾ ॥ ಘಟಯುಗ್ಮಾಂ
ಗನಾ ತೌಳಿಲಗ್ನೆರಕ್ತಯುತಾಂಬರಾ । ಪೃಚ್ಛಕಾಲಿಭವತ್ಯೇ
ವಂಬಾಲಿಕಾಪ್ರಥಮಾರ್ತವೆ ॥

ಟೀ॥ ಕನ್ನೆಯು, ಪ್ರಥಮಋತುವಾದಾಗ ಎಂತಾವಸ್ತ್ರವುಟ್ಟಿದ್ದಳೆಂದು ಪ್ರಶ್ನೆ ಮಾಡುವಲ್ಲಿ ಪ್ರಶ್ನೆಕಾಲಮೇಷ, ಸಿಂಹ, ವೃಷಭ ಧನುರ್ಲಗ್ನಗಳಾಗಿದ್ದರೆ ಬಿಳೀಶೀರೆಯುಟ್ಟಿದ್ದಳೆಂದುನ್ನು, ವೃಶ್ಚಿಕ ಕಟಕ, ಮಕರಲಗ್ನಗಳಾದರೆ ಕೊಳಕು ಶೀರೆಯುಟ್ಟಿದ್ದಳೆಂದುನ್ನು, ಕುಂಭ, ಮಿಥುನ, ಕನ್ಯಾ, ತುಲಾಲಗ್ನಗಳಾದರೆಕೆಂಪು ಶೀರೆಯುಟ್ಟಿದ್ದಳೆಂದುನ್ನು ಹೇಳತಕ್ಕದ್ದು.

ಋತುಕಾಲದಲ್ಲಿಉಟ್ಟಿದ್ದವಸ್ತ್ರಫಲ.

ಮೂ॥ ಸುಭಗಾಶ್ವೇತವಸ್ತ್ರಾಸ್ಯಾದ್ದೃಢವಸ್ತ್ರಾಪತಿವ್ರತಾ ।
ಕ್ಷೌಮವಸ್ತ್ರಾಕ್ಷಿತೀಶಾಸ್ಯಾನ್ನವವಸ್ತ್ರಾಶುಭಾನ್ವಿತಾ ॥
ದುರ್ಭಗಾಜೀರ್ಣವಸ್ತ್ರಾಸ್ಯಾದ್ರೋಗಿಣೀರಕ್ತಧಾರಿಣಿ ।
ನೀಲಾಂಬರಧರಾನಾರೀವಿಧವಾಪುಷ್ಪಿಣೀ ಭವೇತ್ ॥
ಮಲಿನಾಂಬರಸಂವೀತಾದರಿದ್ರಾಸ್ಯಾದಸ್ಯಾದ್ರಜಸ್ವಲಾ ॥
ದೃಢವಸ್ತ್ರಫಲಂಸಮ್ಯಗ ದಿತಂಮುನಿಪುಂಗವೈಃ ॥

ಟೀ॥ ಸ್ತ್ರೀಯುಪ್ರಥಮ ಋತುವಾದಾಗಬಿಳಿಶೀರೆ ಯುಟ್ಟಿದ್ದೆ

ರ ಸೌಭಾಗ್ಯಉಂಟಾಗುವದು, ಅದರಲ್ಲಿದೃಢವಾದ ಶೀರೆಯುಟ್ಟಿದ್ದರೆ ಪತಿವ್ರತೆಯಾಗುವಳು. ಬೀಳೀ ರೇಷಿಮಿ ಶೀರೆಯುಟ್ಟಿದ್ದರೆ ಮಹಾರಾಜನ ಹೆಂಡತಿಯಾಗುವಳು. ಹೊಸಶೀರೆಯುಟ್ಟಿದ್ದರೆ ಶುಭ ಉಂಟಾಗುವದು, ಹರಕಲುಶೀರೆಯುಟ್ಟಿದ್ದರೆ ನಿರ್ಭಾಗ್ಯೆ ಯಾಗುವಳು, ಶುದ್ಧಕೆಂಪು ಶೀರೆ ಯುಟ್ಟಿದ್ದರೆರೋಗವತಿಯಾಗುವಳು. ಕರೀಶೀರೆಯುಟ್ಟಿದ್ದರೆ ಮುಂಡೆಯಾಗುವಳು, ಮಲಿನವಾಗಿ ಕೊಳಕುಶೀರೆಯುಟ್ಟಿದ್ದರೆ ದರಿದ್ರೆಯಾಗುವಳು, ಈ ಮೇರೆ ಋತುಕಾಲದಲ್ಲಿಯುಟ್ಟಿದ್ದ ಶೀರೆಗಳ ಫಲಗಳನ್ನು ತಿಳಿಯುವದು.

ರಜೋಬಿಂದುಫಲಗಳು.

ಮೂ॥ ಇಂದ್ರಗುಣೋಗ್ನೌಯಮಪಿನವಾರ್ಧಿ ರನ್ಯೇವ್ವೃಷೇವಾಯುದಿಶಿದ್ವಿಸಂಖ್ಯಾಃ। ಕುಬೇರಈಶೇಶಶಿಬಿಂದುರೇಕೊವಸ್ತ್ರೇಷುಸಕ್ತೋನವಪುಷ್ಪವತ್ಯಾಃ॥

ಟೀ॥ ಪೂರ್ವದಿಕ್ಕು ಆಗ್ನೇಯಮೂಲೆ ಈವುಗಳಲ್ಲಿ ೩ಬಿಂದುಗಳು, ದಕ್ಷಿಣದಿಕ್ಕಿನಲ್ಲೂ ೨ಬಿಂದುಗಳು, ಉತ್ತರ ಈಶಾನ್ಯದಿಕ್ಕುಗಳಲಿ ೧ಬಿಂದುವು ಅಂದರೆ ಕನ್ಯೆಯು ಋತುವಾದಳೆಂಬದಾಗಿ ಫಲಗಳನ್ನು ಕೇಳುವದಕ್ಕಾಗಿಜ್ಯೋತಿಷ್ಯನ ಬಳಿಗೆ ಬಂದಂತಾವರು ಯಾವದಿಕ್ಕಿನಲ್ಲಿನಿಂತು ಕೇಳುತ್ತಾರೋ ಆ ದಿಕ್ಕನ್ನು ಹಿಡಿದುಬಿಂದಗಳ ಸಂಖ್ಯೆಯನ್ನು ಹೇಳತಕ್ಕದ್ದು.

ಮೂ॥ ಪ್ರಾಪ್ನೋತಿಬಿಂದುವೈಕೇನಸೌಭಾಗ್ಯಂಚದ್ವಿಬಿಂದುನಾ ಭೋಗಸ್ತ್ರಿಬಿಂದುನಾರೋಗೋದಾರಿದ್ರ್ಯಂಬಹುಬಿಂದುನಾ॥

ಟೀ॥ ಒಂದುಬಿಂದುವಿನಿಂದ ಸೌಭಾಗ್ಯವು, ಯೆರಡುಬಿಂದುಗಳಿಂದಭೋಗವು, ಮೂರು ಬಿಂದುಗಳಿಂದ ರೋಗವು, ಬಹುಬಿಂದುಗಳಿಂದ ದಾರಿದ್ರ್ಯಉಂಟಾಗುತ್ತವೆ.

ಕಾಲಫಲವು.

ಮೂ॥ ಪುಷ್ಪವತ್ಯಾಶ್ಚಬಂಪಾತಃಪುರ್ವಾಹ್ಣೇತೀರ್ಥಗಾಮಿನಿ ಮದ್ಯಾಹ್ನೇಸುತಸೌಭಾಗ್ಯಾಚಾಪರಾಹ್ಣೇತುಜಾರಿಣೀ। ಸಾಯಾಹ್ನೆಬಹುಪತ್ನೀಸ್ಯಾತ್ಸಂಧ್ಯಯೋರ್ವೇಶ್ಯತಾಂವ್ರಜೇತ್। ಪೂರ್ವರಾತ್ರೆಚಿರಾಯುಸ್ಸ್ಯಾನ್ನಿಶೀಥೆವಿಧವಾಭವೇತ್॥ ನಿಶಾಂತೆಸುಖ

ಹೀನಾಸ್ಯಾದುರ್ಭಗಾಸರ್ವಸಂಧಿಷು ॥

ಟೀ॥ ಪ್ರಾತಃಕಾಲದಲ್ಲಿ ಪುಷ್ಪವತಿಯಾದರೆ ಶುಭಉಂಟಾಗುವದು. ಪೂರ್ವಾಹ್ಣದಲ್ಲಿ ತೀರ್ಥಯಾತ್ರೆ ಮಾಡುವಳು, ಮಧ್ಯಾಹ್ನದಲ್ಲಿ ಪುತ್ರಭಾಗ್ಯವತಿಯಾಗುವಳು, ಅಪರಾಹ್ಣದಲ್ಲಿ ವ್ಯಭಿಚಾರಿಯಾಗುವಳು, ಸಾಯಾಹ್ನದಲ್ಲಿ ಬಹುಜನ ಮಿಂಡರುಳ್ಳವಳಾಗುವಳು, ಯೆರಡುಸಂಧ್ಯೆಗಳಲ್ಲಿ ಸೂಳೆಯಾಗುವಳೇ, ಪೂರ್ವರಾತ್ರಿಯುಲ್ಲಿರೆದೀರ್ಘಾಯುಷ್ಯವತಿಯಾಗುವಳು,ಅರ್ಧರಾತ್ರಿಯಲ್ಲಿವಿಧವೆಯಾಗುವಳು,ಬೆಳಗಿನಯಾಮದಲ್ಲಿಯಾದರೆಯಾವಾಗಲೂದುಃಖಪಟ್ಟು ಕೊಂಡಿರುವಳು, ಪರ್ವ ಸಂಧಿಗಳಲ್ಲಿ ನಿರ್ಭಾಗ್ಯೆಯಾಗುವಳು.

## ತಿಥಿಗಳ ಫಲವು

ಮೂ॥ ಸಂತಾನಹೀನಾಪ್ರತಿಪದ್ದಿನೇಚಭವೇದ್ವಿತೀಯಲ್ಪಸುಖಾ
ತೃತೀಯೇ।ಸಮಸ್ತಸೌಭಾಗ್ಯವತೀಚತುರ್ಥ್ಯಾಂಪಾಪಾಲಯಾ
ಭೋಗವಿವರ್ಜಿತಾಚ ॥

ಟೀ॥ ಪಾಡ್ಯಮಿಯಲ್ಲಿ ಪ್ರಥಮ ಋತುವಾದ ಕನ್ಯೆಯುಸಂತಾನ ಹೀನೆಯಾಗುತ್ತಾಳೆ, ದ್ವಿತೀಯೆಯಲ್ಲಿ ಸ್ವಲ್ಪ ಸುಖಪಡುತ್ತಾಳೆ,ತೃತೀಯೆಯಲ್ಲಿಸಮಸ್ತ ಸೌಭಾಗ್ಯವತಿಯೂಚತುರ್ಥಿಯಲ್ಲಿಪಾಪಿಷ್ಠೆಯೂಗಿಯೂಭೋಗವಿಲ್ಲದವಳಾಗಿಯೂಆಗುತ್ತಾಳೆ

ಮೂ॥ ಪಂಚಮ್ಯಾಂಬಹುಪುತ್ರಭೋಗ ಸಹಿತಾಷಷ್ಠ್ಯಾಂತು
ದುರ್ಭಾಷಿಣೀ। ಸಪ್ತಮ್ಯಾಂಧನಧಾನ್ಯಭೂಷಣಯುತಾಶೌರ್ಯಾ
ನ್ವಿತಾಷ್ಟಮೇ।ದುಃಖಾರ್ತಾನವಮೀದಿನೇಪ್ಯದಶಮೀಸೌಭಾಗ್ಯಯು
ಕ್ತಾವರಾ।ಶುದ್ಧಾರುದ್ರದಿನೇತಥಾರ್ಕದಿವಸೇಶ್ಯಾದ್ದೂಷಿಣೀಸರ್ವತಾ

ಟೀ॥ ಪಂಚಮಿಯಲ್ಲಿ ಬಹುಪುತ್ರಭೋಗವತಿಯಾಗಿಯೂ, ಷಷ್ಠಿಯಲ್ಲಿಕೆಟ್ಟಮಾತಾಡುವಳಾಗಿಯೂ, ಸಪ್ತಮಿಯಲ್ಲಿ ಧನಧಾನ್ಯ ಭೂಷಣವಯಾಗಿಯೂ, ಅಷ್ಟಮಿಯಲ್ಲಿ ಧೈರ್ಯವುಳ್ಳವಳಾಗಿಯೂ, ನವಮಿಯಲ್ಲಿ ದುಃಖಿತೆಯಾಗಿಯೂ, ದಶಮಿಯಲ್ಲಿಸೌಭಾಗ್ಯವತಿಯೂಗಿಯೂಏಕಾದಶಿಯಲ್ಲಿಹೃದಯ ಶುದ್ಧಿಯುಳ್ಳವಳಾಗಿಯೂ,ದ್ವಾದಶಿಯಲ್ಲಿಪರದೂಷಣೆಮಾಡುವವಳಾಗಿಯೂಆಗುತ್ತಾಳೆ

ಮೂ॥ ತ್ರಯೋದಶ್ಯಾಂತುಸಂತುಷ್ಟಾಭೂತಾಯಾಂಪಾಪಿನೀ ಭವೇತ್ । ಪೂರ್ಣಿಮಾಯಾಂತುಸಂಪುಷ್ಟಾ ಚಾಮಾಯಾಮ ಲ್ಪಭೋಗಿನೀ ॥

ಟೀ॥ ತ್ರಯೋದಶಿಯಲ್ಲಿ ಸಂತುಷ್ಟೆಯಾಗಿರ್ಪಳು, ಚತುರ್ದಶಿಯಲ್ಲಿ ಪಾಪಿಷ್ಠೆಯಾಗುವಳು, ಪೂರ್ಣಿಮೆಯಲ್ಲಿ ಧನಪೂರ್ಣೆಯಾಗಿಹಳು, ಅಮಾವಾಸ್ಯೆಯಲ್ಲಿ ಕಷ್ಟಜೀವಿಯಾಗುವಳು.

ವಾರಫಲ—ಕಾಶ್ಯಪೆ.

ಮೂ॥ ರೋಗಿಣೀರವಿವಾರೇಚ ಸೋಮವಾರೇಪತಿವ್ರತಾ । ದುಃಖಿತಾಭೌಮವಾರೇತುಬುಧೇಸೌಭಾಗ್ಯಸಂಯುತಾ। ಶ್ರೀಸಂಯುತಾಗುರೋರ್ವಾರೇಪತಿಭಕ್ತಿರ್ಭ್ರುಗೋರ್ದಿನೆ ಮಲಿನಾಮಂದವಾರೇತುರಾತ್ರಾವಪಿತಥೈನಚ ॥

ಟೀ॥ ಭಾನುವಾರದಲ್ಲಿ ಋತುವಾದರೆ ಹೆಂಣು ರೋಗಿಷ್ಠೆಯಾಗುವಳು, ಸೋಮವಾರದಲ್ಲಿ ಪತಿವ್ರತೆಯು, ಮಂಗಳವಾರದಲ್ಲಿ ದುಃಖಿತೆಯು, ಬುಧವಾರದಲ್ಲಿ ಧನಧಾನ್ಯ ಸಂಪನ್ನೆಯು, ಗುರುವಾರದಲ್ಲಿ ಸಂಪತ್ತುಳ್ಳವಳು, ಶುಕ್ರವಾರದಲ್ಲಿ ಪತಿ ಭಕ್ತಿಯುಳ್ಳವಳು, ಶನಿವಾರದಲ್ಲಿ ಯಾವಾಗ್ಯೂಕೊಳಕಾದ ದೇಹ ಮನಸ್ಸುಳ್ಳವಳಾಗಿಯೂ ಆ ಗುವಳು, ಈ ವಾರ ಫಲಗಳು ರಾತ್ರಿಯಲ್ಲಿ ಹಗಲಲ್ಲಿ ಸಹ ಉಂಟಾಗುವವು.

ಮೂ ॥ ಕರಾದಿಪಂಚೊತ್ತರಮೂಲ ಪೂಷವಿಷ್ಣುತ್ರಯಾಶ್ವೀಜ್ಯವಿಧೀಂದುಭೇಷು । ಆದ್ಯೋಂರಜಸ್ಸೌಖ್ಯ ಸುತಾಯುರರ್ಥಂ ಸೌಭಾಗ್ಯವೃದ್ಧಿಂಕುರುತೇಂಗನಾನಾಂ ॥

ಟೀ॥ ಹಸ್ತ, ಚಿತ್ರಾ, ಸ್ವಾತೀ, ವಿಶಾಖಾ, ಅನೂರಾಧಾ, ಉತ್ತರಾ, ಉಷಾ, ಉಭಾ, ಮೂಲ, ರೇವತಿ, ಶ್ರವಣ, ಧನಿಷ್ಠಾ, ಶತಭಿಷಕ್, ಅಶ್ವಿನೀ, ಪುಷ್ಯ, ರೋ, ಮೃ, ಈ ನಕ್ಷತ್ರಗಳಲ್ಲಿ ಮೊದಲು ಋತುವಾದ ಹೆಂಣು ಸೌಖ್ಯ, ಪುತ್ರ, ಆಯುಸ್ಸು, ಧನ, ಸೌಭಾಗ್ಯ ವೃದ್ಧಿಯನ್ನು ಹೊಂದುವಳು.

ದುಷ್ಟನಕ್ಷತ್ರ ಫಲಗಳು.

ಮೂ॥ ಪೂರ್ವತ್ರಯೆಯೊಮ್ಯ ಭುಜಂಗಧಿಷ್ಣ್ಯತಾಂಬೂಲ

ತ್ರೈಲಂಕೆಸುಮಂಜರಿಡಾ್ರಂ । ತದ್ಭರ್ತೃಸಂದರ್ಶನ ಮೇವವ ರ್ಜ್ಯಂತಾತ್ತ್ಕಾಲಿ ಕಂಶಾತಿವಿಧಿಂಪ್ರಕುರ್ಯಾತ್ ॥ ರೌದ್ರೇಮಖ ಶೋಕೆಯುತಾದಿತಿಭಿಃಸಾಬಂಧಕೀಂದ್ರೇಪ್ರನೆಲೆದರಿದ್ರಾ ॥

ಟೀ॥ ಪೂರ್ವಫಲ್ಗುನೀ, ಪೂಷಾ, ಪೂಭಾ, ಭರಣೀ ಆಶ್ರೇಷಾ ಈ ನಕ್ಷತ್ರಗಳಲ್ಲಿ ಋುತುವಾದ ಹೆಂಣು ತಾಂಬೂಲ, ಅಭ್ಯಂಗನ, ಪುಷ್ಪ, ಅರಸಿನ, ಇವುಗನ್ನು ಬಿಟ್ಟು ಆ ನಕ್ಷತ್ರಗಳಲ್ಲಿ ಋುತುವಾದರೆ ದೋಷಕ್ಕೆ ಶಾಂತಿ ಕರ್ಮವನ್ನು ಮಾಡುವವರಿಗೂ ಗಂಡನ ಮುಖ ನೋಡದೆ ಇರಬೇಕು, ಶಾಂತಿ ಕರ್ಮವಾದ ತರುವಾಯು ಬಿಟ್ಟದ್ದನ್ನೆಲ್ಲಾ ಸ್ವೀಕರಿಸಬಹುದು ಮತ್ತುನದ್ರಾವಿಶಾಖಾ ಈ ನಕ್ಷತ್ರಗಳಲ್ಲಿ ಋುತುವಾದವಳು ದುಃಖಿಸುತ್ತಿರುವಳು, ಪುನರ್ವಸು ಜ್ಯೇಷ್ಠಾ ಇವುಗಳಲ್ಲಿ ಯುತುವಾದರೆ ವ್ಯಭಿಚಾರಿಯಾಗುವಳು, ಕೃತ್ತಿಕೆಯಲ್ಲಿ ಪುಷ್ಪವತಿಯಾದವಳು,ದರಿದ್ರೆಯಾಗುವಳು.

ಮೂ॥ ಕೃತ್ತಿಕಾದಿತ್ಯರೌದ್ರೇಷುಮಖಾಜ್ಯೇಷ್ಠೇರಜಸ್ವಲಾ। ಆದಿಪಾದೆಶುಭಂಪ್ರೋಕ್ತಂಸಾಕನ್ಯಾಮಂಗಳಪ್ರದಾ॥ ದ್ವಿಪಾದೆಚದ್ವಿಜೊದ್ದಿಷ್ಟಂಪಂಚವಿಂಶತಿ ಭೋಜನಂ । ತ್ರಿಪಾದೆವಚತುಷ್ಪಾದೆಶಾಂತಿಂಕುರ್ಯಾದ್ಯಥಾವಿಧಿ॥

ಟೀ॥ ಕೃತ್ತಿಕಾ, ಪುನರ್ವಸು, ಆದ್ರಾ, ಜ್ಯೇಷ್ಠಾ, ಮಖಾ, ಈ ನಕ್ಷತ್ರಗಳ ೧ನೇ ಪಾದದಲ್ಲಿ ಋುತುವಾದರೆ ಸ್ತ್ರೀರಿಗೆ ಮಂಗಳವಹುದು ೨ನೇ ಪಾದವಲ್ಲಾದರೆ ೨೫ ಬ್ರಾಹ್ಮಣರಿಗೆ ಸಮಾರಾಧನೆ ಮಾಡಿದರೆ ತದ್ದೋಷ ಪರಿಹಾರವಾಗುವದು. ೩-೪ನೇ ಪಾದಗಳಲ್ಲಾದರೆ ಆ ದೋಷಕ್ಕೆ ಶಾಸ್ತ್ರೋಕ್ತಕ್ರಮವಾದ ಶಾಂತಿ ಕರ್ಮವನ್ನು ಮಾಡಬೇಕು.

ಶುಭನಕ್ಷತ್ರಫಲಗಳು-ಗ್ರಂಥಾಂತರದಲ್ಲಿ.

ಮೂ॥ ಧನಿಷ್ಠಾವಿಷ್ಣುಮೂಲಾಸುನಾರ್ಯಸ್ಸ್ಯಾತ್ಸುತಪಂಚಕಂ। ಮೃಗೋತ್ತರಕರತ್ವಷ್ಟ್ರ ಶತತಾರಾಸುವೈದಶ। ದ್ವಿಪದೈವಸ್ವಾತಿಮೂಲಾಶ್ವಿಮೈತ್ರೇಷುಚಸುತಾಷ್ಟಕಂ। ಪ್ರಾಜಾಪತ್ಯೇಸುತಾಸ್ಸಪ್ತಚಾಂತ್ಯೇಚನವಕಂಭವೇತ್ ॥

ಟೀ॥ ಧನಿಷ್ಠಾ, ಶ್ರವಣ, ಮೂಲ, ಇವುಗಳಲ್ಲಿ ಋುತುವಾದಹೆ

ಗಸಿಗ ೫ಮಕ್ಕಳು ಹುಟ್ಟುವರು. ಮೃಗಶೀರ್ಷ, ಉತ್ತರಾ,ಉಷಾ ಉಭಾ, ಹಸ್ತ, ಚಿತಾ್ರ, ಶತಭಿಷಕ್, ಇವುಗಳಲ್ಲಿಯಾದರೆ ೧೦ಮ ಕ್ಕಳುಂಟಾಗುವರು. ವಿಶಾಖಾ ಸ್ವಾತೀ, ಮೂಲ, ಅಶ್ವಿನೀಅನೂರಾ ಧಾ, ಇವುಗಳಲ್ಲಿ ೪ಮಕ್ಕಳುಂಟಾಗುವರು. ರೋಹಿಣಿಯಲ್ಲಿಯಾ ದರೆ೭ಮಕ್ಕಳು. ರೇವತಿಯಲ್ಲಿಯಾದರೆ ೯ಮಕ್ಕಳುಂಟಾಗುವರು.

ದುಷ್ಟನಕ್ಷತ್ರ ಫಲಗಳು.

ಮೂ॥ ಪೂರ್ವತ್ರಯೆದರಿದ್ರಾಸ್ಸ್ಯಾತ್ಕೃತ್ತಿಕಾಯಾಂತುದು ರ್ಭಗಾ। ಆರ್ದ್ರಾಯಾಂಪುತ್ರನಾಶಸ್ಸ್ಯಾದ್ಭರಣ್ಯಾಂಸ್ವಮೃತಿ ರ್ಭವೇತ್॥ ಮಖಾಯಾಂಭರ್ತೃನಶಸ್ಸ್ಯಾತ್ಸರ್ಪೆಚಾಂಡಾಲಗಾ ಮಿನೀ। ದರಿದ್ರಿಣೀಚಜ್ಯೇಷ್ಠಾಯಾಂರತಿಹೀನಾಚಜಾಯತೆ ॥

ಟೀ॥ ಪೂಫ, ಪೂಷಾ, ಪೂಭಾ, ಇವುಗಳಲ್ಲಿ ಋತುವಾದರೆ ದ ರಿದ್ರಿಯಾಗಿಯೂ, ಕೃತ್ತಿಕೆಯಲ್ಲಿ ನಿರ್ಭಾಗ್ಯೆಯಾಗಿಯೂ, ಆ ರ್ದ್ರೆಯಲ್ಲಿ ಪುತ್ರನಾಶವುಳ್ಳವಳಾತಯೂ ಆಗುವಳು, ಭರಣಿಯ ಲ್ಲಿ ಅವಳಿಗೆ ಮೃತ್ಯುವಹುದು ಮಖೆಯಲ್ಲಿ ಗಂಡನಾಶವು ಆಶ್ಲೇ ಷದಲ್ಲಿ ಚಂಡಾಲ ಸಂಗಮಾಡುವಳು. ಜ್ಯೇಷ್ಠಯಲ್ಲಿ ದರಿದ್ರ ಯಾಗಿಯೂ ಭೋಗ ಸೌಖ್ಯವಿಲ್ಲದವಳಾಗಿಯೂ ಆಗುತ್ತಾಳೆ.

ಮೂ॥ ಪೂರ್ವತ್ರಯೆಭುಜಂಗರ್ಕ್ಷಯಾಮ್ಯರ್ಕ್ಷಚರಜಸ್ವಲಾ। ಪ್ರಥಮಾಂಶೆಪತಿಘ್ನೀಸಾದ್ದ್ವಿತೀಯೆಮೃತಪುತ್ರಕಾ। ತೃ ತೀಯೆತುದರಿದ್ರಾಸ್ಸ್ಯಾಚ್ಚತುರ್ಥೆತ್ವಶುಭಾವಹಾ ॥

ಟೀ॥ ಪೂಫ, ಪೂಷಾ, ಪೂಭಾ, ಆಶ್ಲೇಷಾ, ಭರಣೀ, ಈ ನಕ್ಷತ್ರ ಗಳಲ್ಲಿ೧ನೇಪಾದದಲ್ಲಿ ಋತುವಾದರೆ ಗಂಡನಿಗೆ ನಾಶವು ೨ನೇ ಪಾದದಲ್ಲಿ ಹುಟ್ಟಿದಮಕ್ಕಳು ಸಾಯುವವು. ೩ನೇ ಪಾದದಲ್ಲಿ ದಾರಿದ್ರ್ಯವು. ೪ನೇ ಪಾದದಲ್ಲಿ ಅಶುಭವು ಆಗುವದು.

ದುಷ್ಟತಿಥಿ ಫಲವು.

ಮೂ॥ ಅಮಾರಿಕ್ತಾಷ್ಟಮಿಷಷ್ಠೀದ್ವಾದಶೀಪ್ರತಿಪತ್ಸ್ವಪಿ। ಪ ರಿಘಸ್ಯಚಪೂರ್ವಾರ್ಧೆವ್ಯತೀಪಾತೆಚವೈಧೃತೌ । ಸಂಧ್ಯಾ ಸೂಪಪ್ಲವೆವಿಷ್ಟ್ಯಾಮಶುಭಂಪ್ರಥಮಾರ್ತವಂ ॥

ಟೀ॥ ಅಮಾವಾಸ್ಯಾ, ರಿಕ್ತಾ, ಅಷ್ಟಮಿ, ಷಷ್ಟೀ, ದ್ವಾದಶೀ,

ಪ್ರತಿಪತ್, ಪರಿಘಯೋಗಧ ಪೂರ್ವಾರ್ಧ, ವ್ಯತಿಪಾತ, ವೈಧೃತಿ ಸಂಧ್ಯಾಕಾಲಗಳು, ಸಿಡಿಲುಬೀಳುವದು ಮುಂತಾದ ಉತ್ಪಾತಗಳು ಭದ್ರಕರಣ, ಇಂತಾ ಅನಿಷ್ಟಕಾಲಗಲ್ಲಿ ಪ್ರಥಮಾರ್ತವವು ಅಶುಭಪ್ರದವು.

### ಆರ್ತವಲಗ್ನದಲ್ಲಿ ಗ್ರಹಫಲವು.

ಮೂ॥ ಕೇಂದ್ರತ್ರಿಕೋಣಾಯಧನಸ್ಥಿತಾಶ್ಚ ಶುಭಾಸ್ತ್ರಿಷಷ್ಠಾ
ಯಗತಾಶ್ಚ ಪಾಪಾಃ । ಶುಭಪ್ರದಾಸ್ಯುಃ ಪ್ರಥಮರ್ತುಕಾ
ಲೇತಥಾವಿತಿಜ್ಞಾ ಜಗುರಾರ್ಯವರ್ಯಾಃ ।

ಟೀ॥ ಪ್ರಥಮ ಋತುಕಾಲದಲ್ಲಿ ಋತುವಾದ ಲಗ್ನಕ್ಕೆ-೧-೨-೪-೫-೭-೯-೧೦-೧೧ ಈಸ್ಥಾನಗಳಲ್ಲಿ ಶುಭಗ್ರಹಗಳಿದ್ದು ಪಾಪಗ್ರಹಗಳು ೩-೬-೧೧ನೇ ಸ್ಥಾನಗಲ್ಲಿ ಇದ್ದರೆ ಶುಭಪ್ರದರಾಗುತ್ತಾರೆ.

ಮೂ॥ ಅಷ್ಟಮಸ್ಥೇನಿಶಾನಾಥೆ ಭರ್ತುರ್ನ್ಯೃಧನಕಾರಕಂ।ಚಂ
ದ್ರತಾರಾಬಲಯುತೇರಜಃ ಪುತ್ರಾರ್ಥಸಂಪದಃ । ಲಗ್ನಾದ್ವಾ
ಜನ್ಮಲಗ್ನಾದ್ವಾಭೂಮಿಜೇವಾಥವಾವಿಧೌ। ಸತ್ಪುತ್ರಪ್ರಥಮಾ
ರ್ತ್ತಿಸ್ಯಾತ್ತ್ರ್ಯಾಯೋಪಚಯೆಸ್ಥಿತೆ॥

ಟೀ॥ ಋತುವಾದಲಗ್ನಕ್ಕೆ ೮ರಲ್ಲು ಚಂದ್ರನಿದ್ದರೆಗಂಡನಿಗ ಅನಿಷ್ಟಕರವು, ಚಂದ್ರತಾರಾಬಲ ಯುಕ್ತನಾಗಿದ್ದರೆ ಪುತ್ರಧನಪ್ರದವು, ಋತುವಾದಲಗ್ನಕ್ಕಾದರೂ ಜನ್ಮಲಗ್ನಕ್ಕಾದರೂ ೩-೬-೧೧-ರಲ್ಲಿ ಕುಜನಾದರೂ ಚಂದ್ರನಾದರೂ ಇದ್ದರೆ ಸತ್ಪುತ್ರಸಂತಾನ ಉಂಟಾಗುವದು.

### ಆರ್ತವಲಗ್ನ ಶುಭಾಶುಭ ಫಲಗಳು.

ಮೂ॥ ಮೇಷೇತುವ್ಯಭಿಚಾರಸ್ಯಾದ್ವೃಷಭೆ ಸೌಖ್ಯವರ್ಧನಂ
ಮಿಥುನೆಸ್ಯಾತ್ಸುತ್ರಕರ್ಕಟೆ ಜಾತಿಜಾರಿಣೀಸಿಂಹೆಪುತ್ರವತೀ
ನಾರೀಕನ್ಯಾಯಾಂಶ್ರೀಮತೀಭವೇತ್‌ಭಾಗ್ಯಯುಕ್ತಾತುಲಾ
ಯಾಂಚವೃಶ್ಚಿಕೆವ್ಯಭಿಚಾರಿಣೀ।ದುಶ್ಚರೀಧನುಪೂರ್ವೆಸ್ಯಾ
ದಪರೇತು ಪತಿವ್ರತಾ। ಮಕರವಾನಹೀನಾಸ್ಯಾತ್ತುಂಭೆನಸತೀ
ಭವೇತ್ । ಮೀನೆಪುತ್ರಪತೀಜ್ಯೈದವಥಮಾರ್ತಾವಿದಂಫಲಂ॥

ಮೂ ॥ ಮೇಷಲಗ್ನದಲ್ಲಿ ಪ್ರಥಮರ್ತುವಾದರೆ ವ್ಯಭಿಚಾರಿಣಿ ಯಾಗುತ್ತಾಳೆ-ವೃಷಭದಲ್ಲಿ ಸೌಖ್ಯವತಿಯು, ಮಿಥುನದಲ್ಲಿಪು ತ್ರವತಿಯು, ಕಟಕದಲ್ಲಿ ಹಾದರಗಿತ್ತಿಯು ಸಿಂಹದಲ್ಲಿ ಪುತ್ರವತಿ ಯು ಕನ್ಯೆಯಲ್ಲಿ ಐಶ್ವರ್ಯವತಿಯು, ತುಲೆಯಲ್ಲಿ ಭಾಗ್ಯವತಿಯು, ವೃಶ್ಚಿಕದಲ್ಲಿ ವ್ಯಭಚಾರಿಣಿಯುಧನುಸ್ಸಿನ ಪೂರ್ವಾರ್ಧದಲ್ಲಿ ಕೆಟ್ಟ ಚರ್ಯೆಯುಳ್ಳವಳು, ಅದರ ಉತ್ತರಾರ್ಧದಲ್ಲ ಪತಿವ್ರತೆಯು-ಮಕ ರದಲ್ಲಿ ಮಾನಹೀನೆಯು, ಕುಂಭದಲ್ಲಿ ಧನವಂತೆಯು, ಮೀನದಲ್ಲಿ ಸಂತಾನವುಳ್ಳವಳಾ ಆಗುತ್ತಾಳೆ.

ಗ್ರಂ ಥಾಂ ತ ರ ದ ಲ್ಲಿ.

ಮೂ॥ ಮೇಷೇಸಿಂಹೇಚಕನ್ಯಾಯಾಂ ಗ್ರಾಮಸ್ಯಬಾ
ಹ್ಯೇಪ್ರಥಮಾರ್ತವಂಸ್ಯಾತ್ । ವೃಷೇಚಗೋಷ್ಠೇಧನು
ಷೀಶ್ವಗೇಹೆ ಗ್ರಾಮೇಧಟೇನ್ಯಸ್ಯಗೃಹಂಗನಾಯಾಃ॥ ಮೀ
ನೇಮೃಗೇಕರ್ಕಟಕೇಘಟೇಂಬುತೀರೇನೃಯುಗ್ಮೇತುದಿಗಂ
ಬರಸ್ಯಾತ್। ವನೇಚಮಧ್ಯೇವ್ಯಥವೃಶ್ಚಿಕೇಚಗರ್ತಾದಯೋ
ಪ್ಯೇವಮುದೀರಯಂತಿ ॥

ತಾ॥ ಮೇಷ, ಸಿಂಹ, ಕನ್ಯಾ, ಈ ೩ ರಾಶಿಗಳಲ್ಲಿ ಕನ್ಯೆ ಯುವೂ ರಿನಹೊರಗೆ ಋತುವಾಗುತ್ತಳೆ, ವೃಷಭದಲ್ಲಿ-ದನಕಟ್ಟುವಸ್ಥಳ ದಲ್ಲಿ, ಧನುಸ್ಸಿಲ್ಲಿ ತನ್ನ ಮನೆಯುಲ್ಲಿ ತುಲೆಯುಲ್ಲಿ, ಗ್ರಾಮ ಮಧ್ಯಧಲಾಲಿ, ಅಥವಾ ಅನ್ಯರ ಮನೆಯಲ್ಲಿ, ಮೀನ-ಕುಂಭ,ಕ ರ್ಕಟ ಇವುಗಳಲ್ಲಿ ನೀರಿನ ಸಮೀಪದಲ್ಲಿ, ಮಿಥುನದಲ್ಲಾದ ರೆ ದಿಗಂಬರ ವಾಗಿರುತಾಳೆ- ವೃಶ್ಚಿಕದಲ್ಲಿ ಅರಣ್ಯದಲ್ಲಿ ಪ್ರ ಥಮರ್ತು ಆಗುತ್ತಾಳೆಂದುಗರ್ಗಾದಿಗಳು ಹೇಳಿದರು.

ರಜೋದರ್ಶನಸ್ಥಾನಫಲವು.

ಮೂ॥ ಗ್ರಾಮಬಾಹ್ಯೇಪರಗ್ರಾಮೇಸಾಸ್ತ್ರೀಸ್ಯಾದ್ವ್ಯಭಿಚಾರಿಣೀ
ಪತಿವ್ರತಾಪಶುಸ್ಥಾನೇಸುಜೀವಾಗೃಹಮಧ್ಯಮೇ ।
ಗ್ರಾಮಮಧ್ಯೇಸುವೃದ್ಧಿಸ್ಸ್ಯಾದ್ವಿಧವಾಸ್ಯಾದ್ದಿಗಂಬರಾ ।
ಅನ್ಯಸ್ಯಗೇಹೆಮಶ್ಶೀಲಾದೀರ್ಘಾಯುರ್ಜಲಸನ್ನಿಧೌ ।
ವನಮಧ್ಯೇತುಸೌಭಾಗ್ಯಧನಧಾನ್ಯಸಮನ್ವಿತಾ ॥

ತಾ॥ ಗ್ರಾಮಭಾಗ್ಯದಲ್ಲೂ ಪರಗ್ರಾಮದಲ್ಲೂ ಋತುವಾದವಳು ವ್ಯಭಿಚಾರಿಣಿಯಾಗುವಳು- ಸ್ವಸ್ಥಾನವಲ್ಲಾದವಳು ಪತಿವ್ರತೆಯಾಗುವಳು, ಸ್ವಗ್ರಾಮಮಧ್ಯದಲ್ಲಿ ಸೌಖ್ಯವುಳ್ಳವಳಾಗುವಳು- ಗ್ರಾಮ ಮಧ್ಯದಲ್ಲಿಶುಭಕರವಾಗುವಳು- ಚಿತ್ತಲೆಯಾದವಳು- ವಿಧವೆಯಾಗುವಳು- ಅನ್ಯರ ಮನೆಯಲ್ಲಿಋತುವಾದವಳು ಕೆಟ್ಟ ನಡತೆಯುಳ್ಳವ ಳಾಗುತ್ತಾಳೆ. ಜಲಸಮೀಪದಲ್ಲಾದವಳು ದೀರ್ಘಾಯುಷ್ಮತಿಯಾಗುತ್ತಾಳೆ. ಅರಣ್ಯದಲ್ಲಾದವಳುಸೌಭಾಗ್ಯ ಧನಧಾನ್ಯವತಿಯಾಗುತ್ತಾಳೆ

ಪ್ರಥಮಾರ್ತವನಕ್ಷತ್ರದಲ್ಲಿಗ್ರಹಪ್ರಯುಕ್ತಫಲವು.

ಶ್ಲೋ॥ ಪ್ರಥಮಾರ್ತ್ತವನಕ್ಷತ್ರೇಸವ- ಹೀಜೀವ್ಮೃತಪ್ರಜಾ।
ಜ್ಞಶುಕ್ರೇ ಸಹಿತೆವವಿದ್ಯಾಸಗುರೌಸ್ಯಾತ್ತಪಸ್ವಿನೀ
ಸಾದಿತ್ಯೇತು:ಪತಿಘ್ನೀಸ್ಯಾದ್ರಾಹುಯುಕ್ತೇತುಜಾರಿಣೀ॥
ಶನೌತ್ರಿಪೃತ್ತಿಚೇದ್ದಾಸೀಗ್ರಹಹೀನೇಸುವಾಸಿನೀ॥

ತಾ॥ ಋತುವಾದ ನಕ್ಷತ್ರದಲ್ಲಿ ಕುಜನಿದ್ದರೆ ಹುಟ್ಟುವ ಮಕ್ಕಳುಸಾಯುತ್ತವೆ- ಬುಧಶುಕ್ರರಿದ್ದರೆ ಬಂಜೆಯು- ಗುರುವಿದ್ದರೆ ತಪಸ್ಸು ಮಾಡುವಳು, ಸೂರ್ಯನಿದ್ದರೆ ಗಂಡನನ್ನುಕೊಲ್ಲುತ್ತಾಳೆ ರಾಹುವಿದ್ದರೆ ಜಾರೆಯಾಗುವಳು, ಶನಿಯಿದ್ದರೆ ಚಾಕರಿ ಮಾಡಿ ಜೀವಿಸುವಳು- ಆದ್ದರಿಂದ ಪ್ರಥಮ ಋತುವಾದ ನಕ್ಷತ್ರದಲ್ಲಿ ಯಾವಗ್ರಹವೂಯಿಲ್ಲದಿದ್ದರೆದೀರ್ಘಸುಮಂಗಲಿಯಾಗಿರುವಳು,

ರಜಸ್ವಲಾ ಚಕ್ರವು.

ಶ್ಲೋ॥ ರಜಸ್ವಲಾಯಾಂಕನ್ಯಾಯಾಂದಿಕ್ಚಕ್ರೇಭಾನಿವಿನ್ಯೇತ್।
ಪ್ರಾಚ್ಯಾದಿದಿಕ್ಷುಚತ್ವಾರಿತ್ರೀಣಿತ್ರೀಣಿವಿದಿಕ್ಷುಚ॥

ತಾ॥ ಕನ್ಯೆರಜಸ್ವಲೆಯಾದಾಗದಿಕ್ಕುಗಳ ಆಕಾರವಾಗಿಒಂದು ಚಕ್ರವನ್ನೇರ್ಪಡಿಸಿ, ಆದರಲ್ಲಿ ಪೂರ್ವದಿಕ್ಕಿನಲ್ಲಿ ಸೂರ್ಯನಿರುವ ನಕ್ಷತ್ರ ಮೊದಲ್ಗೊಂಡು ನಕ್ಷತ್ರಗಳು ೪ ಆಗ್ನೇಯದಲ್ಲಿ ೩. ದಕ್ಷಿಣದಲ್ಲಿ ೪ ನಿಋುತಿಯಲ್ಲಿ ೩. ಪಶ್ಚಿಮದಲ್ಲಿ ೪ ವಾಯುವ್ಯದಲ್ಲಿ ೩ ಉತ್ತರದಲ್ಲಿ ೪ ಈಶಾನ್ಯದಲ್ಲಿ ೩ ಈ ಮೇರೆ ನಕ್ಷತ್ರಗಳನ್ನು ಬರೆಯತಕ್ಕದ್ದು.



ಮೂ॥ ಭಾನುಭಾಚ್ಚಂದ್ರನಕ್ಷತ್ರಪರ್ಯಂತಂಗಣಯೇತ್ಕ್ರಮಾತ್। ಆಯುಸ್ಸಂಪದ್ವೈಧವ್ಯಪುತ್ರಾನ್ದಿಕ್ಷುವಿನಿರ್ದಿಶೇತ್। ವಿದಿಕ್ಷುಕ್ಷತರೋಗಾರ್ತಿಮರಣಾನಿವದೇತ್ಕ್ರಮಾತ್॥

ಟೀ॥ ಸೂರ್ಯನಿರುವ ನಕ್ಷತ್ರ ಮೊದಲು ಚಂದ್ರನಿರುವ ನಕ್ಷತ್ರ ಪರ್ಯಂತ ಎಣಿಸಿದರೆ ಮೂಡಲ ದಿಕ್ಕು ಮೊದಲು ೪ ದಿಕ್ಕುಗಳಲ್ಲಿಯೂ ಕ್ರಮವಾಗಿ ೧ನೇ ನಕ್ಷತ್ರಕ್ಕೆ ಫಲ ಆಯುಸ್ಸು, ೨ನೇ ನಕ್ಷತ್ರಕ್ಕೆ ಸಂಪತ್, ೩ನೇ ನಕ್ಷತ್ರಕ್ಕೆ ವೈಧವ್ಯ, ೪ನೇ ನಕ್ಷತ್ರಕ್ಕೆ ಪುತ್ರರು, ಈ ಮೇಲೆ ಫಲವನ್ನು ತಿಳಿಯತಕ್ಕದ್ದು, ವಿದಿಕ್ಕುಗಳಲ್ಲಿ ಇರುವ ಮೂರು ನಕ್ಷತ್ರಗಳಿಗೂ ಕ್ರಮವಾಗಿ ೧ನೇದಕ್ಕೆ ಗಾಯ, ೨ನೇದಕ್ಕೆ ರೋಗ ಪೀಡೆ, ೩ನೇದಕ್ಕೆ ಮರಣವೆಂಬದಾಗಿ ಫಲಗಳನ್ನು ತಿಳಿಯಬೇಕು, ಅಂದರೆ ಋತುವಾದ ನಕ್ಷತ್ರವು ಸೂರ್ಯನಿರುವನಕ್ಷತ್ರಕ್ಕೆ ೧-೨-೪-೮-೯-೧೧-೧೫-೧೬-೧೮-೨೨-೨೩-೨೫ ನೇದಾಗಿ ಇದ್ದರೆ ಶುಭ ಫಲವು, ೩-೫-೬-೭-೧೦-೧೨-೧೩-೧೪-

೧೩-೧೯-೨೦-೨೧-೨೪-೨೬-೨೩-೨೮ನೇ ದಾಗಿ ಇದ್ದರೆ ಅಶುಭಫಲವೆಂದು ತಿಳಿಯುವದು, ಈ ವಿಕ್ಟ ಕ್ರದಲ್ಲಿ ಅಭಿಜಿತ್ತು ನಕ್ಷತ್ರವನ್ನು ಸೇರಿಸಿಕೊಂಡು ಅಶ್ವಿನಿಮೊದಲು ೨೮ ನಕ್ಷತ್ರಗಳನ್ನು ಗಣಿಸಬೇಕೆಂದು ತಾತ್ಪರ್ಯವು.

## ರಜಸ್ವಲಾಶುದ್ಧಿಃ.

ಮೂ॥ ಪ್ರಥಮೇವನಿಚಂಡಾಲೀದ್ವಿತೀಯೇಪತಿತಾಸ್ಮೃತಾ ।
ತೃತೀಯೇರಜಕೀಪ್ರೋಕ್ತಾಚತುರ್ಥೇಶೂದ್ರಿಕಾಭವೇತ್ ॥

ಟೀ॥ ಮುಟ್ಟಾದವಳು ಪ್ರಥಮ ದಿನದಲ್ಲಿ ಚಂಡಾಲದ ಸ್ತ್ರೀಎಂತೆ ಅಶುದ್ಧಳು ೨ನೇ ದಿನದಲ್ಲಿ ಕುತಿಕೆಯು ೩ನೇ ದಿನದಲ್ಲಿ ಅಗಸಗಿತ್ತಿಯಂತೆ, ೪ನೇ ದಿನದಲ್ಲಿ ಶೂದ್ರಿಯಂತೆ ಆಗುತ್ತಾಳೆ.

ಮೂ॥ ಪಂಚಮೇಹನಿಶುದ್ಧಾಸ್ಯಾದ್ಧವ್ಯಕವ್ಯಾದಿಕರ್ಮಸು ।
ಚತುರ್ಥೇಹನಿಭರ್ತುಸ್ಸ್ಯಾಚ್ಛುದ್ಧಾಸಂಭೋಗಕರ್ಮಣೀ ॥

ಟೀ॥ ೫ನೇ ದಿನದಲ್ಲಿ ದೇವಕರ್ಮ ಪಿತೃಕರ್ಮಗಳಿಗೆ ಪರಿಶುಧಿಯಾಗಿ ಯೋಗ್ಯೆಯಾಗುತ್ತಾಳೆ, ೪ನೇ ದಿನದಲ್ಲಿ ಗಂಡನ ಸಂಭೋಗಕ್ಕೆ ಮಾತ್ರ ಯೋಗ್ಯಳಾಗುತ್ತಾಳೆ.

## ನಾರದೀಯೇ.

ಮೂ॥ ರಜಸ್ವಲಾಯದಿಸ್ನಾತಾಪುನರೇವರಜಸ್ವಲಾ । ಅಷ್ಟಾದ
ಶದಿನಾದರ್ವಾಗಶುಚಿತ್ವಂನವಿದ್ಯತೇ ॥

ಟೀ॥ ಋತುವಾದ ಹೆಂಗಸು ಸ್ನಾನವಾದ ತರುವಾಯ ೧೮ ದಿನಗಳೊಳಗೆಪುನಃ ಮುಟ್ಟಾದರೆ ಆವಳು ಸ್ನಾನಮಾತ್ರದಿಂದಲೇ ಪರಿಶುದ್ಧೆಯಾಗುತ್ತಾಳೆ.

ಮೂ॥ ಏಕೋನವಿಂಶತೇರರ್ವಾಗೇಕಾಹಂಸ್ಯಾತ್ತದೂರ್ಧ್ವತಃ ।
ವಿಂಶತ್ಯುತ್ತರಕಾಲೇತುತ್ರಿರಾತ್ರಂತುಶೇಚಿರ್ಭವೇತ್ ॥

ಟೀ॥ ೧೯ ದಿನದೊಳಗೆ ಮುಟ್ಟಾದರೆ ಒಂದೇ ದಿನ ಅಶುಚಿತ್ವವು೨೦ದಿನಕೆಮೇಲೆಮುಟ್ಟಾದರೆ೩ರಾತ್ರಿಯುಶುಚಿಯಾಗಿರಬೇಕು

## ನಿಷೇಕ ಪ್ರಕರಣವು.

ಮೂ॥ ವಿಷ್ಣುಪ್ರಜೇಶರವಿಮಿತ್ರಸಮೀರಪೌಷ್ಣಮೂಲೋತ್ತರಾ
ವರುಣಭಾನಿನಿಷೇಕಕಾರ್ಯೇ। ಪೂಜ್ಯಾನಿಪುಷ್ಯವಸುಶೀತಕರಾ

ಸ್ವಿಚಿತ್ರಾದಿತ್ಯಾಶ್ಚಮಧ್ಯಮಫಲಾವಿಫಲಾಸ್ಯುರನ್ಯೇ ॥

ಟೀ॥ ಶ್ರವಣ, ರೋಹಿಣೀ, ಹಸ್ತ, ಅನೂರಾಧ, ಸ್ವಾತೀ, ರೇವತೀ, ಮೂಲ, ಉತ್ತರಾ, ಉಷಾ, ಉಭಾ, ಶತಭಿಷಕ್, ಈ ೧೧ನಕ್ಷತ್ರಗಳು ನಿಷೇಕದಲ್ಲಿ ಶುಭಪ್ರದಗಳು, ಪುಷ್ಯ, ಧನಿಷ್ಠಾ, ಮೃಗಶಿರ, ಅಶ್ವಿನೀ, ಚಿತ್ರಾಪುನರ್ವಸು ಈ ೬ ನಕ್ಷತ್ರಗಳು ನಿಷ್ಫಲಗಳೆಂದು ತಿಳಿಯುವದು.

ಮೂ॥ ಷಷ್ಠ್ಯಷ್ಟಮೀ ಪಂಚದಶೀಶ್ಚತುರ್ಥೀಂಚತುರ್ದ್ದಶಿಮ ಪ್ಯುಭಯತ್ರ ಹಿತೆಷಾಶ್ಯಭಾಸ್ಸ್ಯಸ್ತಿಥಯೊನಿಷೆಕೆ ವಾರೇಶ್ಯಶಾಂಕಾಯುಸಿತೆಂದುಜಾನಾಂ ॥

ಟೀ॥ ಷಷ್ಟೀ, ಅಷ್ಟಮೀ, ಚತುರ್ಥೀ, ಚತುರ್ದಶೀ, ಶುಕ್ಲಕೃಷ್ಣಪಕ್ಷಗಳಲ್ಲಿ, ಈ ತಿಥಿಗಳನ್ನು ಪೂರ್ಣಿಮಾ ಅಮಾವಾಸ್ಯೆಗಳನ್ನು ಸಹಾಬಿಟ್ಟು ಮಿಕ್ಕತಿಥಿಗಳುನಿಷೇಕದಲ್ಲಿಶುಭಪ್ರದಗಳು,ಮತ್ತು ಸೋಮ, ಬುಧ, ಗುರುಶುಕ್ರವಾರಗಳು ಸಹಶುಭಪ್ರದಗಳು

ಮೂ॥ ವೃಷಮಿಥುನಕುಳೀರಸಿಂಹಕನ್ಯಾತುಲಘಟಚಾಪಝಷಾಶುಭಂವಹಂತಿ। ಯಾತಿಶುಭಂಫಲಶಾಲಿನೊನುಕೂಲೆನಿಧನವಿಶುದ್ಧಿಯುತೆನಿಷೆಕಕಾರ್ಯ ॥

ಟೀ॥ ನಿಷೇಕ ಶುಭಕಾರ್ಯದಲ್ಲಿ ಅಷ್ಟಮಶುದ್ಧಿ ಮುಂತಾದಬಲವುಳ್ಳವಾಗಿಯೂಶುಭಗ್ರಹ ಸಂಬಂದ ದೃಷ್ಟಿಯುಳ್ಳವಾಗಿಯೂ ಅನುಕೂಲಗಳಾಗಿಯೂ, ಇದ್ದರೆ ವೃಷಭ, ಕಟಕ, ಮಿಥುನ,ಸಿಂಹ ಕನ್ಯಾ, ತುಲಾ, ಧನುಸ್ಸು, ಕುಂಭ, ಮೀನರಾಶಿಗಳು, ಶುಭಕರಗಳಾಗುತ್ತವೆ.

## ಪುಂಸವನವು.

ಮೂ॥ ಕುರ್ಯಾತ್ಪುಂಸವನಪ್ರಸಿದ್ಧವಿಷಯಮಾಸೆ ತೃತೀಯಥವಾಪಶ್ಯಂಸ್ಫೀತತನೌತುಷಾರಕಿರಣೆಪುಷ್ಯೆಥವಾವೈಷ್ಣವೆ॥ ಹಿತ್ವಾಕರ್ಕಟಕನ್ಯಯುಗ್ಮಮಖಿಲೆಷ್ವನ್ಯೆಷ್ವರಿಕ್ತೆತಿಥೌ। ಶುದ್ಧೆನೈಧನಧಾಮ್ನಿಶುಕ್ರಶಶಭೃದ್ವಿಣ್ಮಂತ್ರಿಣಾವಾಸರೆ ॥

ಟೀ॥ ಗರ್ಭವು ಸ್ಪಷ್ಟವಾದರೆ ೩ನೇ ತಿಂಗಳಲ್ಲಿ ಚಂದ್ರನು ಪುಷ್ಯ ನಕ್ಷತ್ರದಲ್ಲಾದರೂ ಶ್ರವಣದಲ್ಲಾದರೂ ಪ್ರಕಾಶವಾದ ಶರೀ

ರವುಳ್ಳವನಾಗಿ ಇರುವನಾಗ ಕರ್ಕಾಟಕ ಕನ್ಯಾ, ಮಿಥುನರಾಶಿಗಳನ್ನು ಬಿಟ್ಟು ಇತರರಾಶಿಗಳಲ್ಲಿಯೂ, ರಿಕ್ತಾತಿಥಿಗಳನ್ನು ಬಿಟ್ಟು ಅಷ್ಟಮಶುದ್ಧಿ ಇರುವಾಗಲೂ ಶುಕ್ರ ಚಂದ್ರ, ಬುಧ, ಗುರುಗಳ ವಾರಗಳಲ್ಲೂ ಗಂಡನು ತನ್ನ ಭಾರ್ಯೆಗೆ ಪುಂಸವನವನ್ನು ಮಾಡಬೇಕು

## ಸೀಮಂತವು

ಮೂ ॥ ಚತುರ್ಥಷಷ್ಠಾಷ್ಟಮಮಾಸಭೇದೇಭರ್ತ್ರಾದ್ಯಗರ್ಭಪ್ರಥಮಂವಿಧೇಯಂ । ಸೀಮಂತಕರ್ಮದ್ವಿಜ ಭಾಮಿನೀನಾಂಮಾಸೇಷ್ಟಮೇವಿಷ್ಣುಬಲಿಂಚಕುರ್ಯಾತ್ ॥

ಟೀ॥ ಗಂಡನು ಗರ್ಭವತಿಯಾದ ತನ್ನ ಭಾರ್ಯೆಗೆ ಗರ್ಭದಲ್ಲಿ ೪-೬-೮ ಈ ತಿಂಗಳುಗಳಲ್ಲಿ ಬ್ರಾಹ್ಮಣಸ್ತ್ರೀಯರಿಗೆ ಸೀಮಂತವನ್ನು ಮಾಡತಕ್ಕದ್ದು, ಮತ್ತು ೮ನೇ ಮಾಸದಲ್ಲಿ ವಿಷ್ಣುಬಲಿಯನ್ನು ಮಾಡತಕ್ಕದ್ದು.

## ಸೀಮಂತದಲ್ಲಿ ನಕ್ಷತ್ರವಾರಾದಿಗಳು.

ಮೂ ॥ ಸೀಮಂತತಿಷ್ಯಹಸ್ತಾದಿತಿಹರಿಶಶಭೃತ್ಪೌಷ್ಣವಿಧ್ಯುತ್ತರಾಖ್ಯಾಃ ಪಕ್ಷಚ್ಛಿದ್ರಾಂಶ್ಚರಿಕ್ತಾ ಪಿತೃತಿಥಿಮಪಹಾಯಾಮಾವಾಸ್ಯಾಃಪುಶಸ್ತಾಃ । ಸಿಂಹಾಳೀವರ್ಜಯಿತ್ವಾ ಶುಭಫಲಬಹುಳಾರಾಶಯೋಪ್ಯಂಶಕಾನಿ ಶ್ರೇಷ್ಠಾಸ್ಸ್ಯುಶ್ಶೀತ ರೋಚಿರ್ಭೃಗುಬುಧಧಿಷಣಾನಾಂವಿಶುದ್ಧೇಷ್ಟಮೇಪಿ ॥

ಟೀ॥ ಸೀಮಂತದಲ್ಲಿ ಪುಷ್ಯ, ಹಸ್ತ, ಪುನರ್ವಸೂ, ಶ್ರವಣ, ಮೃಗಶಿರ, ರೇವತಿ, ರೋಹಿಣೀ, ಉತ್ತರ, ಉಷಾ, ಉಭಾ, ಈ ನಕ್ಷತ್ರಗಳು ಮತ್ತು ಪಕ್ಷಚ್ಛಿದ್ರಗಳು, ರಿಕ್ತಾತಿಥಿಗಳು, ಪಿತೃತಿಥಿಗಳು, ಅಮಾವಾಸ್ಯಾ, ಅಷ್ಟಮೀ, ವ್ಯತೀಪಾತ, ವೈಧೃತಿ, ಮನ್ವಾದಿ ಯುಗಾದಿ, ಸಂಕ್ರಮಣ ಮುಂತಾದ ಪಿತೃದಿನಗಳು ಇವುಗಳನು ಬಿಟ್ಟು ಮಿಕ್ಕ ತಿಥಿಗಳಲ್ಲೂ ಸಿಂಹ ವೃಶ್ಚಿಕಗಳನ್ನು ಬಿಟ್ಟು ಇತರಶುಭರಾಶಿಗಳು ಅವುಗಳ ಅಂಶಗಳು, ಸೋಮ, ಬುಧ, ಗುರು, ಶುಕ್ರರುಗಳು, ಅಷ್ಟಮ ಶುದ್ಧಿಯು ಇವುಗಳೆಲ್ಲವು ಶ್ರೇಷ್ಠವು.

ಮೂ॥ ಶುಭಗ್ರಹೇಷುಧೀಧರ್ಮಕೇಂದ್ರಷ್ವರಿಭವತ್ರಿಷು । ಪಾಪೇಷುಷಟ್ಸುಚಂದ್ರೋಂತ್ಯೇವಿಧನಾತ್ಮಾದಿವರ್ಜಿತೇ ॥

ಟೀ॥ ಸಿಮಂತ ಲಗ್ನಕ್ಕೆ ೧-೪-೫-೭-೯-೧೦ ಈ ಸ್ಥಾನಗಳಲ್ಲಿ ಶುಭಗ್ರಹಗಳೂ, ೩-೬-೧೧ ಇವುಗಳಲ್ಲಿ ಪಾಪಗ್ರಹಗಳೂ ಇರುವಾಗಲೂ ಚಂದ್ರನು ೧೨-೮ ಜನ್ಮಗಳಲ್ಲಿಲ್ಲದೇ ಇರುವಾಗಲು ಸೀಮಂತ ಶುಭಕರವು.

ಮೂ॥ ಸೀಮಂತಲಗ್ನಾದಿಕೋಪಿಕ್ರೂರಃಪಂಚಾಷ್ಟರಿಷ್ಫಗಃ ।
ಯದಿಸೀಮಂತಿನೀಂಹನ್ಯಾತ್ತದ್ಗರ್ಭಂವಾನಸಂಶಯ ॥

ಟೀ॥ ಸೀಮಂತಲಗ್ನಕ್ಕೆ ೫-೮-೧೨ನೇ ರಾಶಿಗಳಲ್ಲಿ ಒಬ್ಬ ಪಾಪಗ್ರಹವಾದರೂ ಇದ್ದರೆ ಅವನು ಆ ಗರ್ಭಿಣಿಯನ್ನಾದರೂ ಹೊಟ್ಟೆಯಲ್ಲಿರುವ ಶಿಶುವಂನಾದರೂ ಸಂದೇಹವಿಲ್ಲದೆ ಕೊಲ್ಲುವನು.

ಇಪ್ಪತ್ತೊಂದು ಮಹಾದೋಷ ನಿರ್ಣಯವು.

ಮೂ॥ ಆದ್ಯಃ ಪಂಚಾಂಗಶುದ್ಧಿ ಸ್ಯಾದ್ವಿತೀಯಸ್ಸೂರ್ಯ ಸಂಕ್ರಮಃ । ತೃತೀಯಃ ಕರ್ತರೀದೋಷಶ್ಚಂದ್ರ ಷಷ್ಠಾಷ್ಟರಿಪ್ಫಗಶ । ಉದಯಾಸ್ತಾಂ ಶಯೋಶುದ್ಧಿ ರಹಿತೋದುರ್ಮುಹೂರ್ತಜಃ । ಗಂಡಾಂತಂ ಪಾಪಷಡ್ವರ್ಗಂ ಭೃಗುಷ್ಟಂ ಕುಜಾಷ್ಟಮಂ । ದಂಪತ್ಯೋರಷ್ಟಮಂ ಲಗ್ನಂರಾಶೇರ್ದ್ವಿಷಘಟೀಭವೇತ್ । ಕುನವಾಂಶೋವಾರದೋಷಃ ಖಾರ್ಜೂರಿಕೆಸಮಾಂಘ್ರಿಭಂ । ಗ್ರಹಣೋತ್ಪಾತಭಂಕ್ರೂರವಿದ್ಧರ್ಕ್ಷಕ್ರೂರಸಂಯುತಂ । ಅಕಾಲಗರಿತಂ ವೃಷ್ಟಿರ್ಮಹಾ ಪಾತಸ್ಸವೈಧೃತಿಃ । ಮಹಾದೋಷಾ ಅವಿಶಾಶ್ಚೈಷಾಂಫಲಂವಕ್ಷ್ಯೇ ಪೃಥಕ್ಪೃಥಕ್॥

ಟೀ॥ ೧ನೇದು ಪಂಚಾಂಗ ಶುದ್ಧಿಯಿಲ್ಲದು, ೨ನೇದುಸಂಕ್ರಾಂತಿ, ೩ನೇದು ಕರ್ತರೀದೋಷವು, ೪ನೇದು ೬-೮-೧೦, ಸ್ಥಾನಗಳಲ್ಲಿ ಚಂದ್ರನ ಇರುವಿಕೆಯು, ೫ನೇದು ಉದಯಸ್ತಾಂಶ ಶುದ್ಧಿ ಇಲ್ಲದ್ದು. ೬ನೇದು ದುರ್ಮುಹೂರ್ತವು, ೭ನೇದು ಗಂಡಾಂತವು, ೮ನೇದು ಗಂಡಾತವು, ೯ನೇದು ಪಾಪಷಡ್ವರ್ಗವು, ೧೦ನೇದು ಭೃಗುಷಟ್ಕವು, ೧೧ನೇದು ಕುಜಾಷ್ಟಮವು, ೧೨ನೇದು ದಂಪತಿಗಳ ಲಗ್ನಕ್ಕೆ ಅಷ್ಟಮಲಗ್ನವು, ೧೩ನೇದು ಲಗ್ನಕ್ಕೆವಿಷಘಟಿಕಾ ಸಂಬಂಧವು, ೧೪ನೇದು ಕುನವಾಂಶವು, ೧೫ನೇದು

ಖಾರ್ಜೂರ ಚಕ್ರದಲ್ಲಿ ಸಮವಾದ ನಕ್ಷತ್ರವು, ೧೭ನೇದು ಗ್ರಹ ಣೋತ್ಪಾತ ನಕ್ಷತ್ರವು, ೧೮ನೇದು ಕ್ರೂರಗ್ರಹಯುಕ್ತನಕ್ಷತ್ರವು ೧೯ನೇದು ಅಕಾಲ ಗರ್ಜಿತವೃಷ್ಟಿಗಳು, ೨೦ನೇದು ಮಹಾಪಾತ ದೋಷವು, ೨೧ನೇದು ವೈಧೃತಿದೋಷವು ಇಂತಾ ಇಪ್ಪತ್ತೊಂ ಮಹಾದೋಷಗಳ ಫಲಗಳನ್ನು ಪ್ರತ್ಯೇಕಪ್ರತ್ಯೇಕದೇಳುತ್ತೇನೆಂ ದು ಗ್ರಂಥಕರ್ತನ ವಾಕ್ಯವು.

ಪಂಚಾಂಗ ಸುದ್ಧಿದೋಷ ಸ್ವರೂಪವು

ಮೂ॥ ತಿಥಿವಾರಂಚನಕ್ಷತ್ರಂ ಯೋಗಂಚರಣಂತಥಾ। ಏತತ್ಪಂ ಚಸುಭಂಚೈವಪಂಚಾಂಗಂಶುದ್ಧಿಮದ್ಭವೇತ್ ॥ ಯಸ್ಮಿ ನ್ಪಂಚಾಂಗ ಜೋದೋಷನಲಗ್ನಂಪರಿವರ್ಜ್ಯೇ॥

ಟೀ॥ ತಿಥಿ, ವಾರ, ನಕ್ಷತ್ರ, ಯೋಗ, ಕರಣ ಇವುಗಳುಶುದ್ಧ ವಾದರೆ ಪಂಚಾಂಗಶುದ್ಧಿ, ಯಾವಲಗ್ನಕ್ಕೆ ಅದು ನೆಟ್ಟಗಿಲ್ಲವೊ ಆಲಗ್ನವನ್ನು ಬಿಡತಕ್ಕದ್ದು,

ಮೂ॥ ಅವಮಾತ್ರಿದ್ಯುಸ್ಪೃಶವೇಧಕ್ರಾಂತವೈಪ್ರುಸ್ತಥೈವಚ । ಏತೆಪಂಚವಿಧಾದೋಷಾಃಪಂಚಾಂಗದಶದೋಷಜಾಃ ॥

ಟೀ॥ ಅವಮಾ ತ್ರಿದ್ಯುಸ್ಪೃಕ್ ವೇಧಗಳು, ಕ್ರಾಂತಗಳು-ಹಾ ಗೆವೈಪ್ರ- ಈ ದೋಷಗಳು ಐದು ಪೂರ್ವಶ್ಲೋಕದಲ್ಲಿ ಹೇಳಲ್ಪ ಟ್ಟ ತಿಥಿವಾರಾದಿ ದೋಷಗಳು ೫ ಯಿವು ಶೇರಿ ಈ ೧೦ ದೋಷಗ ಳುಪಂಚಾಂಗದೋಷಗಳನ್ನಿಸಿ ಕೊಳ್ಳುತ್ತವೆ.

ಸೂರ್ಯನ ಸಂಕ್ರಾಂತಿದೋಷವು.

ಮೂ ॥ ತ್ಯಾಜ್ಯಾಸೂರ್ಯಸ್ಯ ಸಂಕ್ರಾಂತೇಃಪೂರ್ವತಃಪರತಸ್ಸ ದಾ।ವಿವಾಹಾದಿಷುಕಾರ್ಯೇಷುನಾಡ್ಯಷ್ಷೋಡಶಷೋಡಶ ॥

ಟೀ॥ ವಿವಾಹಾದೀಶುಭಕಾರ್ಯಗಳಲ್ಲಿ ಸೂರ್ಯನಸಂಕ್ರಾಂತಿ ಗಮುಂದು ೧೬ ಘಳಿಗೆಗಳೂ ಹಿಂದೆ೧೬ಘಳಿಗೆಗಳೂಬಿಡತಕ್ಕದು

ಕರ್ತರೀ ದೋಷಃ.

ಮೂ ॥ ಲಗ್ನಾಂತೆ ಮುಖಯೋಃ ಪಾಪವಕ್ರಯೋಶ್ಚುಭಯೋನ ಯೋಃ । ಸಾಕರ್ತರೀತಿವಿಜ್ಞೇಯಾದಂಪತ್ಯೋರ್ಗಳಕರ್ತರೀ ॥

ಟೀ॥ ವಿವಾಹಲಗ್ನಕ್ಕೆ ೨-೧೨ ಈ ಸ್ಥಾನಗಳಲ್ಲಿ ವಕ್ರಗಳಾದ

ಪಾಪಗ್ರಹಗಳಿದ್ದರೆ ಅವರನ್ನು ಶುಭಗ್ರಹಗಳು ನೋಡಿದರೂಪ್ರ ಯೋಜನವಿಲ್ಲ, ಅಂಥಾದೋಷವು ವಧೂವರರಿಗೆ ಹಾನಿಕರವು,ಗಂಡಕತ್ರಿಣಿಯಾಗುತ್ತದೆ.

ಮೂ॥ ಕರ್ತರೀದೋಷಮಷ್ಟಂಯಲ್ಲಗ್ನಂತತ್ಪರಿವರ್ಜಯೇತ್।
ಯದಿಸೌಮ್ಯಗ್ರಹೈರ್ಯುಕ್ತಂಗುಣೈಸ್ಸರ್ವೈಸ್ಸಮನ್ವಿತಂ॥

ಟೀ॥ ವಿವಾಹಾದಿ ಲಗ್ನಗಳಲ್ಲಿ ಶುಭಗ್ರಹಗಳಿದ್ದರೂ ಇತರಸುಗುಣಗಳಿದ್ದರೂ ಅದು ಕರ್ತರೀದೋಷ ದುಷ್ಟವಾದರೆ ಅದನುಸರ್ವಥಾಬಿಡತಕ್ಕದ್ದು.

ಷಷ್ಟಾಷ್ಟರಿಪ್ಫಗತ ಚಂದ್ರದೋಷು.

ಮೂ॥ ಷಡಷ್ಟರಿಪ್ಫಗೇಚಂದ್ರೇಲಗ್ನೆದೋಷಸ್ಸ್ಯಸಂಜ್ಞಿತಃ। ತಲ್ಲಗ್ನಂವರ್ಜಯೇದ್ಯತ್ನಾಜೀವಶುಕ್ರಸಮನ್ವಿತಂ॥

ಟೀ॥ ಯಾವಲಗ್ನಕ್ಕೆ ಚಂದ್ರನು ೬-೮-೧೨ ಈ ಸ್ಥಾನಗಳಲ್ಲಿರುತಾನೋ ಅದು ಲಗ್ನದೋಷವನ್ನಿಸಿಕೊಳ್ಳುತ್ತದೆ. ಅಂತ ದೊಷವುಳ್ಳ ಲಗ್ನವುಗುರು ಶುಕ್ರಯುಕ್ತವಾಗಿ ಇದ್ದರೂ ಅದನ್ನು ಅವಶ್ಯಬಿಡತಕ್ಕದ್ದು.

ಸಗ್ರಹಚಂದ್ರದೋಷವು.

ಮೂ॥ ಶಶಾಂಕೇಗ್ರಹಸಂಯುಕ್ತೆದೊಷಸ್ಸಗ್ರಹಸಂಜ್ಞಿತಃ।ತಸ್ಮಿಂತ್ಸಗ್ರಹದೊಷೇತುವಿವಾಹಂನೈವಕಾರಯೇತ್॥

ಟೀ॥ ಚಂದ್ರನು ಶುಭಗ್ರಹಗಳಾಗಲಿ ಪಾಪಗ್ರಹಗಳಾಗಯೂವ ಗ್ರಹದೊಂದಿಗಾದರೂ ಕೂಡಿದ್ದರೆ ಅದು ಸಗ್ರಹಚಂದ್ರದೋಷವೆಂಬುವದು, ಆ ದೋಷದಲ್ಲಿ ವಿವಾಹವನ್ನು ಮಾಡಕೂಡದು.

ಉದಯಾಸ್ತಶುದ್ಧಿಃ,

ಮೂ॥ ಲಗ್ನಲಗ್ನಾಂಶಕೌಸ್ವಸ್ವಪತಿನಾವೀಕ್ಷಿತೌ ನಚೆದನ್ಯೋನ್ಯಪತಿ ನಾಶುಭಮಿತ್ರಣವಾತಥಾ॥ ವ್ಯತ್ಯಯಶ್ಚೆತಥಾಮೃತ್ಯುಸ್ತಾಭ್ಯಾಂಸಪ್ತೋದಯಾಂಶಕಾ। ಏವಂಯುತೌಮೃತ್ಯುಕರೌಕ್ರೂರಗ್ರಹಯುತೌಯಥ॥

ಟೀ॥ ಲಗ್ನವು ಲಗ್ನಾಧಿಪತಿಯಿಂದಲೂ, ಅದರ ನವಾಂಶವು ಅದರ ಅಧಿಪತಿಯಿಂದಲೂ ಶೇರಲ್ಪಟ್ಟಾದರೂ ನೋಡಲ್ಪಟ್ಟಾದರೂ

ಇರಬೇಕು, ಅಥವಾನವಾಂಶಾಧಿಪತಿಯಿಂದ ಲಗ್ನವು, ಲಗ್ನಾಧಿಪತಿಯಿಂದ ನವಾಂಶವೂ, ಹಾಗೆ ಇರಬೇಕು, ಅಥವಾ ಅವುಗಳುಮಿತ್ರಗ್ರಹಗಳಿಂದಲಾಗಲಿ ಶುಭಗ್ರಹಗಳಿಂದಲಾಗಲಿ ನೋಡಲ್ಪಟ್ಟಿರಬೇಕು, ಹಾಗಿಲ್ಲದಿದ್ದರೆ ಮೃತ್ಯುಕರವು,ಹೀಗೆಲಗ್ನಕ್ಕೆಸಪ್ತಮರಾಶಿ ಅದರನವಾಂಶವು, ಸಹ ಕೆಳಗೆ ಹೇಳಿದಂತೆ ಶುಭಮಿತ್ರಗ್ರಹಯುಕ್ತಗಳಾಗಿದ್ದರೆ ಕ್ರೂರಗ್ರಹಯುಕ್ತಗಳಂತೆಮೃತ್ಯುಕರಗಳಾಗುತ್ತವೆ, ಅಂದರೆ ವಿವಾಹ ಲಗ್ನಾಧಿಪತಿ ಬಲವಂತನಾಗಿ ಲಗ್ನದಲ್ಲಿ ಇರಬೇಕು, ಹಾಗಿಲ್ಲದಿದ್ದರು ಲಗ್ನವನ್ನು ಶುಭಗ್ರಹವಾಗಲಿ ಮಿತ್ರಗ್ರಹವಾಗಲಿ ನೋಡಿಯಾದರೂ ಕೂಡಿಯಾದರೂ ಇರಬೇಕು, ಹಾಗೆಯೆ ಸಪ್ತಮಾಧಿಪತಿಯು ಬಲವಾದ ಸ್ಥಾನದಲ್ಲಾದರೂ ಉಚ್ಚ ಮಿತ್ರ ಸ್ವಕ್ಷೇತ್ರಗಳಲ್ಲಾದರೂಇರಬೇಕೆಂದು ಭಾವವು

ಮುಹೂರ್ತವಿಷಯಃ-ದಿವಾಮುಹೂರ್ತಃ.

ಮೂ॥ ರುದ್ರಾಹಿಮಿತ್ರಪಿತರೋವಸುವಾರವಿಶ್ವೇವೇದೋವಿಧಿಶ್ಶತಮ
ಖಃ ಪುರುಹೂತವಹ್ನಿಃ । ನಕ್ತಂಚರಾಖ್ಯವರುಣಾರ್ಯಮಯೋ
ನಯಶ್ಚಪ್ರೋಕ್ತಂದಿನಸ್ಯದಶಪಂಚದಿವಾಮುಹೂರ್ತಂ॥

ಟೀ॥ ರುದ್ರ, ಅಹಿ, ಮಿತ್ರ, ಪಿತೃ, ವಸು, ವಾರ, ವಿಶ್ವೇದೇವ, ವೇದ, ವಿಧಿ, ಶತಮಖ, ಪುರುಹೂತ, ವಹ್ನಿಃ, ನಕ್ತಂಚರ, ವರುಣ,ಅರಮ, ಈ ೧೫ ದಿನದ ಹಗಲಿನಲ್ಲಿ ಮುಹೂರ್ತಗಳು.

ರಾತ್ರಿ ಮುಹೂರ್ತಗಳು.

ಮೂ॥ ನಿಶಾಮುಹೂರ್ತಾಗಿರಿಶಾಜಪಾದಾಹಿರ್ಬುಧ್ನ್ಯಪೂಷಾಶ್ವಿ
ಯಮಾಗ್ನಯಶ್ಚ । ವಿಧಾತೃಚಂದ್ರಾದಿತಿಜೀವವಿಷ್ಣುತಿಗ್ಮ
ದ್ಯುತಿತ್ವಷ್ಟ್ರಸಮೀರಣಾಶ್ಚ ॥

ಟೀ॥ ಗಿರಿಶ, ಅಜಪಾದ, ಅಹಿರ್ಬುಧ್ನ್ಯ, ಪೂಷಾ, ಅಶ್ವಿ, ಯಮ ಅಗ್ನಿ, ವಿಧಾತಾ, ಚಂದ್ರ, ಅದಿತಿ, ಜೀವವಿಷ್ಣು, ತಿಗ್ಮ, ದ್ಯುತಿ, ತ್ವಷ್ಟ್ರ, ಸಮೀರಣ ಈ ೧೫ ರಾತ್ರಿಮುಹೂರ್ತಗಳು. ಅಂದರೆ,-೨ ಘಳಿಗೆಗೆ ಒಂದು ಮುಹೂರ್ತದಂತೆ ಲೆಕ್ಕಮಾಡಿ ಹಗಲಲ್ಲಿ ೩೦ ಘಳಿಗೆಗೆ ೧೫ ಮುಹೂರ್ತಗಳಲ್ಲಿ ರಾತ್ರಿಯಲ್ಲಿಯೂ ಹಾಗೆ ಎಣಿಸ ಹಗಲಿನ ೧೫ಮುಹೂರ್ತಗಳು ಭಗ, ಇಂದ್ರಾ, ಅಗ್ನಿ, ಅಹಿ

ನೈರೃತ್ಯ, ರೌದ್ರಪಿತ, ಈ ಮುಹೂರ್ತಗಳು ಅಶುಭಗಳು, ಮಿಕ್ಕವು ಶುಭಗಳು, ರಾತ್ರಿಮುಹೂರ್ತಗಳು ೧೫ರಲ್ಲಿ ರೌದ್ರ, ಅಜಾಂಘ್ರಿ, ಯಮ. ಅಗ್ನಿ, ಈ ೪ ಮುಹೂರ್ತಗಳು, ಅಶುಭಗಳು, ಮಿಕ್ಕ ೧೧ ಶುಭಕರಗಳು.

ವಾರಜನಿತ ದುರ್ಮುಹೂರ್ತಾಃ.

ಶ್ಲೋ॥ ಅರ್ಕವ್ಯೋರ್ಕ್ಯತುಹಿನಕಿರಣೇರಾಕ್ಷಸಬ್ರಹ್ಮಸಂಜ್ಞೌ । ಪಿತ್ರ್ಯಾಗ್ನ್ಯಯಾಷೌಕ್ಷಿತಿಸುತದಿನೇಚಂದ್ರಪುತ್ರೇಭಿಜಿಚ್ಚ । ನೈರೃತ್ರಬ್ರಾಹ್ಮೌಭೃಗುಸುತದಿನೇರಾಕ್ಷ ಸಾಪ್ಯೌಚಜೀವೇ। ಭೌಜಂಗೇಶೌಸವಿತೃಜದಿನೇವರ್ಜನೀಯಾಮುಹೂರ್ತಾಃ॥

ಟೀ॥ ಭಾನುವಾರದಲ್ಲಿ ಅರ್ಯಮಯೆಂಬ ಮುಹೂರ್ತವನ್ನು, ಸೋಮವಾರದಲ್ಲಿ ರಾಕ್ಷಸ, ಬ್ರಹ್ಮ ಇವುಗಳನ್ನು ಕುಜವಾರದಲ್ಲಿ ಪಿತೃ, ಅಗ್ನಿ, ಇವುಗಳನ್ನು ಬುಧವಾರದಲ್ಲಿ ಅಭಿಜಿನ್ಮುಹೂರ್ತವನ್ನು ಗುರುವಾರದಲ್ಲಿ ರಾಕ್ಷಸಜಲ ಮುಹೂರ್ತಗಳನ್ನು ಶುಕ್ರವಾರದಲ್ಲಿ ಪಿತೃ, ಬ್ರಹ್ಮ ಮುಹೂರ್ತಗಳನ್ನು ಶನಿವಾರದಲ್ಲಿ ಸರ್ಪ ಈಶಾನ ಮುಹೂರ್ತಗಳು ಇಂತಾ ದುರ್ಮುಹೂರ್ತಗಳನ್ನು ಬಿಟ್ಟು ವಿವಾಹಾದಿ ಶುಭ ಕಾರ್ಯಗಳನ್ನು ಮಾಡತಕ್ಕದ್ದು.

ಮೂ॥ ರ್ಕ್ಕಹಸ ರಾದಿವಾರೇಷುಯೆಮುಹೂರ್ತಾಸ್ತುನಿಂದಿತಾಃ ವಿವಾಹಾದಿಷುತೇವರ್ಜ್ಯಾಅಪಿಲಕ್ಷಗುಣೈರ್ಯುತಾಃ॥

ಟೀ॥ ಸೂರ್ಯಾದಿ ವಾರಗಳಲ್ಲಿಯಾವದು ಮುಹೂರ್ತಗಳು ಹೇಳಲ್ಪಟ್ಟವೆಯೋ ಅವುಗಳನ್ನು ವಿವಾಹಾದಿ ಶುಭಗಳಲ್ಲಿ ಅವಶ್ಯ ಬಿಡತಕ್ಕದ್ದು-ಅವುಗಳಿಗೆ ಬೇರೆ ಅನೇಕ ಗುಣಿಗಳಿದ್ದರೂ ಅವುಗಳು ತ್ಯಾಜ್ಯಗಳೆಂದು ಭಾವವು.

ಗಂಧಾಂತ ದೋಷಗಳು- ತಿಥಿಗಂಡವು

ಮೂ॥ ಪೂರ್ಣಾನಂದಾಖ್ಯಯೋಸ್ತಿಥ್ಯೋಸ್ಸಂಧೌನಾಡೀಚತುಷ್ಟಯಂ। ಗಂಡಾಂತಂಮೃತ್ಯುದಂಜನ್ಮಯಾತ್ರೋದ್ವಾಹವ್ರತಾದಿಷು॥

ಟೀ॥ ನಂದಾತಿಥಿ ಪೂರ್ಣಾತಿಥಿ, ಇವುಗಳ ಸಂಧಿಯಲ್ಲಿ ೪ಘಳಿಗೆಗಳು ಗಂಡಾಂತಗಳು, ಇವುಗಳಲ್ಲಿ ಯಾತ್ರೆಮದುವೆ ಮುಂ

ತಾದ ಶುಭಕಾರ್ಯಗಳನ್ನು ಮಾಡಕೂಡದು, ಅಂದರೆಪಂಚಮಿಯ ಅಂತದಲ್ಲಿ ೨ ಘಳಿಗೆ, ಷಷ್ಠಿಯ ಆದಿಯಲ್ಲಿ ೨ ಘಳಿಗೆಗಳು ಅಂತು ೪ ಘಳಿಗೆ ಬಿಡತಕ್ಕದ್ದು. ಹೀಗೆಯೇದಶಮಿ, ಏಕಾದಶಿಗಳಿಗೂ ಪೂರ್ಣಿಮಾ, ಪಾಡ್ಯಮಿಗಳಿಗೂನೋಡತಕ್ಕದ್ದು.

## ಲಗ್ನ ಗಂಡವು.

ಮೂ॥ ಕುಳೀರಸಿಂಹಯೋಃಕೀಟ ಚಾಪಯೋರ್ಮೀನಮೇಷಯೋಃ । ಗಂಡಾಂತಮಂತರಾಳಂಸ್ಯಾದ್ಘಟಿಕಾರ್ಧಂಮೃತಿಪ್ರದಂ ॥

ಟೀ॥ ಕಟಕ, ಸಿಂಹ, ವೃಶ್ಚಿಕ, ಧನುಸ್ಸು, ಮೀನ, ಮೇಷಈ ಎರಡೆರಡು ರಾಶಿಗಳ ಅಂತರಾಳದಲ್ಲಿ ಅರ್ಧಗಳಿಗೆ ಗಂಡಾಂತವು. ಅಂದರೆ ಕಟಕರಾಶಿಯಲ್ಲಿ ಕಾಲುಗಳಿಗೆಯೂ ಸಿಂಹದ ಆದಿಯಲ್ಲಿ ಕಾಲುಗಳಿಗೆ, ಅಂತು ಅರ್ಧಗಳಿಗೆ ಗಂಡಾಂತವಾದದರಿಂದ ವಿವಾಹಾದಿಶುಭಕಾರ್ಯಗಳಲ್ಲಿ ಅವಶ್ಯಬಿಡತಕ್ಕದ್ದು, ಹೀಗೆ ಯೇವೃಶ್ಚಿಕ ಧನುಸ್ಸು ಗಳಿಗೂ ಮೀನ ಮೇಷಗಳಿಗೂ ಗಂಡಾಂತವನ್ನು ತಿಳಿಯತಕ್ಕದ್ದು,

## ನಕ್ಷತ್ರಗಂಡಗಳು.

ಮೂ॥ ಸಾರ್ಪೇಂದ್ರಪೌಷ್ಣಭೇಷ್ವಂತ್ಯೇಷೋಡಶಾಂಶಾಭಸಂಧಯಃ । ತದಗ್ರಭೇಷ್ವಾದ್ಯಪಾದೆ ಪಾದಗಂಡಾಂತಸಂಜ್ಞಿಕಾಃ ॥

ಟೀ॥ ಆಶ್ರೇಷಾ ನಕ್ಷತ್ರದ ೪ನೇ ಪಾದದಲ್ಲಿ ೪ ಘಳಿಗೆ, ಮಖಾನಕ್ಷತ್ರದಮೊದಲು ಪಾದದಲ್ಲಿ ನಾಲ್ಕು ಘಳಿಗೆಗಳು ಹೀಗೆ ಜ್ಯೇಷ್ಠಾನಕ್ಷತ್ರ ಮೂಲನಕ್ಷತ್ರ ಇವುಗಳ ಅಂತ್ಯ ಆದಿಗಳಲ್ಲಿ ನಾಲ್ಕುನಾಲ್ಕು ಘಳಿಗೆಗಳು, ಹಾಗೆರೇವತೀ ಅಶ್ವಿನೀ ನಕ್ಷತ್ರಗಳ ಅಂತ್ಯ ಆದಿಗಳಲ್ಲಿಯೂ ಗಂಡಾಂತ ದೋಷಗಳನ್ನು ತಿಳಿಯತಕ್ಕದ್ದು.

## ಭೃಗುಷಟ್ಕವು.

ಮೂ॥ ಷಟ್ಕವಿಹಾಯದೋಷಂಚ ಲಗ್ನಾತ್ಷಷ್ಠಗತೆಸಿತೆ ಉಚ್ಚಗೆಶುಭಸಂಯುಕ್ತೆಂತಲ್ಲಗ್ನಂಸರ್ವದಾತ್ಯಜೇತಾ ॥

ಟೀ॥ ಶುಕ್ರನು ವಿವಾಹ ಲಗ್ನಕ್ಕೆ ೬ ನೇ ರಾಶಿಯಲ್ಲಿದ್ದರೆ ಭೃಗು ಷಟ್ಕವೆಂಬದೋಷ ಉಂಟಾಗುತ್ತದೆ, ಇದು ಪ್ರಬಲ ದೋಷವು, ಇದನ್ನು ಅವಶ್ಯ ಬಿಡತಕ್ಕದ್ದು. ಒಂದು ವೇಳೆ ಅಂತಾ ರಾಶಿ

ಯು ಶುಕ್ರನಿಗೆ ಉಚ್ಛಸ್ಥಾನ ವಾಗಿದ್ದರೂ ಅವನು ಶುಭಗ್ರಹ ಗಳೊಂದಿಗೆ ಕೂಡಿ ಇದ್ದರೂ ಪ್ರಯೋಜನವಿಲ್ಲ. ಆ ದೋಷವು ಯಾವಾಗ್ಯೂ ಬಿಡತಕ್ಕದ್ದು.

ಕುಜಾಷ್ಟಮ.

ಮೂ॥ ಕುಜಾಷ್ಟಮೋಮಹಾದೋಷೋ ಲಗ್ನಾದಷ್ಟಮಗೇ ಕುಜೇ।
ಶುಭತ್ರಯಯುತಂ ಲಗ್ನಂ ತ್ಯಜೇದ್ವ್ಯತ್ತುಂಗಗೆಯದಿ ॥

ಟೀ ॥ ಕುಜನು ವಿವಾಹಲಗ್ನಕ್ಕೆ ೮ನೇ ಸ್ಥಾನವಲ್ಲಿದ್ದರೆ ಕು ಜಾಷ್ಟಮವೆಂಬುವಮಹಾದೋಷ ಉಂಟಾಗುತ್ತದೆಯಾಗಿ ಇದ ರಲ್ಲಿ ವಿವಾಹವನ್ನು ಮಾಡಬಾರದು. ಒಂದು ವೇಳೆ ಆ ಲಗ್ನಕ್ಕೆ ಬ ಲವಿದ್ದರೂ ಕುಜನುಚ್ಛನಾಗಿದ್ದರೂ ಪ್ರಯೋಜನವಿಲ್ಲ.

ಮೂ॥ ಕುಜೇಷ್ಟಮೇಷಷ್ಠಗತೇಭೃಗೌವಾಷಷ್ಠಾಷ್ಟಮದ್ವಾದಶ
ಗೇಚಚಂದ್ರೇ। ತದ್ದೋಷರಾಶಂರವಿಆಯಸಂಸ್ಥೋಲಗ್ನೇಯದಾ
ಕೇಂದ್ರಗತೇಸುರೇಜ್ಯೇ ॥

ಟೀ॥ ವಿವಾಹಲಗ್ನಕ್ಕೆ ಭೃಗುಷಟ್ಕ ಕುಜಾಷ್ಟಮದ್ವಾದಶ ಚಂ ದ್ರಎಂಬಮೂರು ಪ್ರಬಲದೋಷಗಳನ್ನು ಲಗ್ನಕ್ಕೆ ೧೧ನೇಸ್ಥಾನ ದಲ್ಲಿರುವ ಸೂರ್ಯನು ಲಗ್ನ ಚತುರ್ಥ ಸಪ್ತಮ ದಶಮಗಳಲ್ಲಿ ರುವ ಬೃಹಸ್ಪತಿಯು ಸಹನಾಶಮಾಡುತ್ತಾರೆ.

ಅಷ್ಟಮ ಲಗ್ನದೋಷವು

ಮೂ॥ ಉಭಯೋರಷ್ಟಮಂಲಗ್ನಂವಿವಾಹಶುಭಕರ್ಮಣಿ।
ಯದಿಲಗ್ನಗತಿಸ್ಸೋಪಿಸ್ಸೋಪಿ ದಂಪತ್ಯೋರ್ಮರಣಪ್ರದಃ ॥

ಟೀ॥ ವಿವಾಹ ವಿಷಯದಲ್ಲಿ ದಂಪತಿಗಳ ಜನ್ಮಲಗ್ನಗಳಿಗೆ ಅ ಷ್ಟಮಲಗ್ನಗಳುವಿವಾಹ ಲಗ್ನವಾಗಿರಕೂಡದು ಅಂಥಾ ಅಷ್ಟ ಮಲಗ್ನಾಧಿಪತಿ ಅದರಲ್ಲೇ ಇದ್ದಪಕ್ಷದಲ್ಲಿ ದಂಪತಿಗಳಿಗೆ ಮರ ಣವುಂಟಾಗುತ್ತದೆ.

ವಿಷನಾಡೀದೋಷವು.

ಮೂ॥ ಆದ್ಯೈಪರೆಸ್ಸ್ಯಘಟಿಕಾಶ್ಚತಸ್ರೋವಿಷನಾಡಿಕಾಃ। ವಿಷ
ನಾಡೀ ಸಮಾಯುಕ್ತಂತಲ್ಲಗ್ನಂಸರ್ವಥಾತ್ಯಜೇತ್ ॥

ಟೀ॥ ವಿಷನಾಡೀಯುಕ್ತವಾದ ಲಗ್ನಕ್ಕೆ ಅದ್ಯಂತಗಳಲ್ಲಿ ನಾ

ಲ್ಪ್ಕ ವಿಷಗಳಿಗೆರಳು ಬಿಡತಕ್ಕವು. ಯಾವ ಲಗ್ನವು ವಿಷನಾಡೀ ಸಹಿತವಾಗಿರುತ್ತದೋ ಅದನ್ನು ತ್ಯಜಿಸಬೇಕು.

ವಿಶೇಷವು.

ಮೂ ॥ ಲಗ್ನಾಸ್ಯಾದೌವಿಷಂತ್ಯಕ್ತ್ವಾಪಶ್ಚಾತ್ಕರ್ಮಾಣಿಕಾರ ಯೇತ್॥ಲಗ್ನಾಂತ್ಯೇವಿಷಸಂಯುಕ್ತಂತಲ್ಲಗ್ನಂಪರಿವರ್ಜಯೇತ್

ಟೀ ॥ ಲಗ್ನಕ್ಕೆ ಮೊದಲು ವಿಷನಾಡಿರಳನ್ನು ಬಿಟ್ಟುತರುವಾಯ ಶುಭಕಾರ್ಯಗಳನ್ನು ಮಾಡತಕ್ಕದ್ದು. ಲಗ್ನವೆಲ್ಲಾ ವಿಷನಾಡೀ ಸಹಿತವಾದರೆ ಅದನ್ನೇ ಬಿಡಬೇಕು.

ಖಾರ್ಜೂರ ಸಾಮಾಂಘ್ರಿ ದೋಷಃ,

ಮೂ॥ ಏಕಾಮೂರ್ಧ್ವಗತಾಂತ್ರಯೋದಶತಥಾ ತಿರ್ಯಗ್ಗತಾಸ್ಥಾಪಯೇದ್ರೇಖಾಚಕ್ರಮಿದಂಬುಧೈರಭಿಹಿತಂ ಖಾರ್ಜೂರಿಕಂ ತತ್ರತು। ವ್ಯಾಘಾತಾದಿಷುಮೂರ್ಧ್ನಿಭಂತುಕಥಿತಂ ತತ್ರೈಕರೇಖಾಸ್ಥಯೋ। ಸೂರ್ಯಾಚಂದ್ರಮಸೋರ್ಮಿಥೋನಿಗದಿತೋ ದೃಕ್ಪಾತಯೇಕಾರ್ಗಳಃ॥ ವ್ಯಾಘಾತಶೂಲ ಪರಿಘಾವ್ಯತಿಪಾತ ಪೂರ್ವ ಗಂಡಾತಿಗಂಡಕುಲಿಶೇಷು ಸವೈಧೃತೇಷು ॥ ಆದಿತ್ಯ ಚಂದ್ರಪಿತೃಸಾರ್ಪಭ ದಸ್ರಮೂಲ ಮೈತ್ರಾಖ್ಯತಿಷ್ಯ ಸುರವರ್ಧಕಿಭಾನಿಮೂರ್ಧ್ನಿ ॥ ಚತುರ್ಥಕಸ್ತ್ವಾದ್ಯಪಾದ ಮಾದ್ಯಗಸ್ತು ಚತುರ್ಥಕಂ। ದ್ವಿತೀಯಗಸ್ತೃತೀಯಂಚತೃತೀಯಸ್ತುದ್ವಿತೀಯಕಂ । ಸಮಾಂಘ್ರಿವೇಧಸ್ಸರ್ವತ್ರವಿಜ್ಞೇಯೋಧಿಷ್ಣ್ಯಮಂಡಲೇ॥

ಟೀ॥ ಊರ್ಧ್ವವಾಗಿ ಒಂದು ರೇಖೆಯನ್ನು ಬರದ ಅದರಲ್ಲಿ ಅಡ್ಡಗಳಾದ ೧೩ ರೇಖೆಗಳನ್ನು ಬರದರೆ ಅದು ಖಾರ್ಜೂರ ಚಕ್ರವೆನ್ನಿಸಿ ಕೊಳ್ಳುತ್ತದೆ. ಇವರಲ್ಲಿ ವ್ಯಾಘಾತ ಮೊದಲಾದ ೧೦ಯೋಗಗಳಲ್ಲಿ ಹೇಳಲ್ಪಟ್ಟ ಆಯಾ ನಕ್ಷತ್ರವನ್ನು ಚಕ್ರದ ಶಿರಸ್ಸಿನಲ್ಲಿ ಬರಿಯಬೇಕು, ಆ ಚಕ್ರವಲ್ಲಿ ಸೂರ್ಯಚಂದ್ರರು ಒಂದು ರೇಖೆಯ ನಕ್ಷತ್ರವಲ್ಲಿದ್ದರೆ ಆ ನಕ್ಷತ್ರಗಳಿಗೆ ಅನ್ಯೋನ್ಯದೃಷ್ಟಿಯುಂಟಾಗುತ್ತದೆ, ಇದೇ ಏಕಾರ್ಗಳವು. ಮತ್ತು ವೈಧೃತಿಯೊಂದಿಗೆಸೇರಿದ ವ್ಯಾಘಾತ, ಶೂಲ, ಪರಿಘಾ, ವ್ಯತಿಪಾತ, ವಿಷ್ಕಂಭ, ಗಂಡಾತಿಗಂ

ಡವಜ್ರನಾಮ ಯೋಗಗಳಲ್ಲಿಪುನರ್ವಸು, ಮೃಗಶೀರ್ಷ, ಮಖ,ಆ ಶ್ಲೇಷಾ, ಅಶ್ವಿನೀ, ಮೂಲಾ. ಅನೂರಾಧಾ, ಪುಷ್ಯ, ಚಿತ್ರಾ ನಕ್ಷತ್ರ ಗಳು ಚಕ್ರದ ಶಿರಸ್ಸಿನಲ್ಲಿ ಕ್ರಮವಾಗಿ ಅಂಥಾ ಯೋಗಗಳ ನಕ್ಷ ತ್ರಗಳನ್ನು ಬರಿಯಬೇಕು, ಹೀಗೆ ಬರಿಯಲ್ಪಟ್ಟ ಚಕ್ರದಲ್ಲಿ ಬರಿ ಯಲ್ಪಟ್ಟ ನಕ್ಷತ್ರ ಮಂಡಲದಲ್ಲಿ ಸೂರ್ಯನು ನಾಲ್ಕನೇ ಪಾದದ ಲ್ಲಿದ್ದರೆ ಚಂದ್ರನಿರುವನಕ್ಷತ್ರದಮೊದಲನೇ ಪಾದವನ್ನು ಕುರಿತು, ಮೊದಲನೇ ಪಾದದಲ್ಲಿದ್ದರೆ ನಾಲ್ಕನೇ ಪಾದವನ್ನು ಕುರಿತು,೨ನೇ ಪಾದದಲ್ಲಿದ್ದರೆ ೩ನೇಪಾದವನ್ನು ಕುರಿತು, ೩ನೇಪಾದದಲ್ಲಿದ್ದರೆ ೨ನೇಪಾದವನ್ನು ಕುರಿತು ಸಮಪಾದ ವೇಧೆಯೆಂದು ತಿಳಿಯ ಬೇಕು. ಅಂದರೆ ಈ ಖಾಜರ್ಜಾರ ಚಕ್ರದಲ್ಲಿ ವ್ಯಾಘಾತಕ್ಕೆ ಪುನ ರ್ವಸು, ವಿಷ್ಕಂಭಕ್ಕಶ್ವಿನೀ, ಗಂಡಕ್ಕೆ ಮೂಲ,ಅತಿಗಂಡಕ್ಕನೂ ರಾಧಾ, ವಜ್ರಕ್ಕೆಪುಷ್ಯ, ವ್ಯತೀಪಾತಕ್ಕಾಶ್ಲೇಷಾ, ಶೂಲಕ್ಕೆ ಮೃ ಗಶಿರ, ಪರಿಘಕ್ಕೆ ಮಖಾ, ವೈಧೃತಿಗೆ ಚಿತ್ರಾ,ಈ ಯೋಗಗಳೊಳು ಯಾವಯೋಗದಲ್ಲಿ ಮುಹೂರ್ತವಿಡಬೇಕಾದರೂ ಅದಕ್ಕೆ ಹೇಳ ಲ್ಪಟ್ಟ ನಕ್ಷತ್ರವನ್ನು ತಲೆಯಲ್ಲಿ ಬರದು ಪ್ರದಕ್ಷಿಣ ಕ್ರಮವಾಗಿ೨೭ ನಕ್ಷತ್ರವನ್ನು ಬರದು ನೋಡುವಲ್ಲಿ ಮುಹೂರ್ತದ ನಕ್ಷತ್ರವಿದ್ದ ರೇಖೆಯ ಯೆದುರು ರೇಖೆಯಲ್ಲಿ ಸೂರ್ಯನಿರುವ ನಕ್ಷತ್ರವಿದ್ದರೆ ಖಾ ಜರ್ಜಾರಿಕೆ ದೋಷ ಉಂಟಾಗುತ್ತದೆ. ಬೇರೆ ರೇಖೆಯಲ್ಲಿದ್ದರೆ ದೋ ಷವಿಲ್ಲ ಮತ್ತು ಸೂರ್ಯನು ಪ್ರಥಮಪಾದದಲ್ಲಿದ್ದು .ಚಂದ್ರನು ೪ ನೇ ಪಾದದಲ್ಲಿದ್ದರೆ ಏಕಾರ್ಗಳ ದೋಷ ಉಂಟಾಗುತ್ತದೆ. ಈ ಮೇಲೆನಾಲ್ಕನೇ ಪಾದಕ್ಕೂ ೧ನೇ ಪಾದಕ್ಕೂ, ೩ನೇ ಪಾದಕ್ಕೂ, ೨ನೇಪಾದಕ್ಕೂ, ೩ನೇ ಪಾದಕ್ಕೂ ಯೇಕಾರ್ಗಳ ದೋಷವೆಂಬ ದಾಗಿಯೂ ಹೀಗಿಲ್ಲದೆ ಪಾದಭೇದವಿದ್ದರೆ ದೋಷವಿಲ್ಲವೆಂಬದಾಗಿ ಯೂ ತಿಳಿಯ ತಕ್ಕದ್ದು.

ಗ್ರಹಣೋತ್ಪಾತ ನಕ್ಷತ್ರ ದೋಷಃ,

ಮೂ॥ ಗ್ರಹಣೋತ್ಪಾತಭಂತ್ಯಾಜ್ಯಂಮಂಗಳೇತು ಋತುತ್ರ ಯಂ। ಯಾವಚ್ಚರವಿಣಾಭುಕ್ತಂಮುಕ್ತಂದಗ್ಧಮಿವೇಂಧನಂ॥

ಟೀ॥ ಯಾವ ನಕ್ಷತ್ರದಲ್ಲಿ ಚಂದ್ರ ಸೂರ್ಯ ಗ್ರಹಣ ಹಿಡಿಯು

ತ್ತದೋ ಅಂತಾ ನಕ್ಷತ್ರವನ್ನು ಸರ್ವ ಶುಭಕಾರ್ಯಗಳಲ್ಲೂ ಬಿಡತ ಕ್ಕದ್ದು, ವಿವಾಹದಲ್ಲಾದರೋ ೬ ತಿಂಗಳವರಿಗೂ ಬಿಡತಕ್ಕದ್ದು. ಸೂರ್ಯನಿಂದ ಬಿಡಲ್ಪಟ್ಟ ನಕ್ಷತ್ರವುಸುಡಲ್ಪಟ್ಟ ಕಟ್ಟಿಗೆಯಂತೆ ವ ರ್ಜಿಸತಕ್ಕದ್ದಾಗಿರುತ್ತದೆ.

ಕ್ರೂರವಿರುದ್ಧ ದೋಷಃ

ಮೂ॥ ಕ್ರೂರಗ್ರಹೇಣಸಂವಿದ್ಧಂಕ್ರೂರಗ್ರಹಸಮನ್ವಿತಂ । ಅ ಖಿಲರ್ಕ್ಷಂಪಂಚಗವ್ಯಂಸುರಾಬಿಂದುಯುತಂಯಥಾ ॥

ಟೀ॥ ಕ್ರೂರಗ್ರಹವಿದ್ಧವಾಗಿಯಾದರೂ ಯುಕ್ತವಾಗಿಯಾದ ರೂ ಇರುವ ಎಲ್ಲಾ ನಕ್ಷತ್ರಗಳೂ ಬಿಂದುಮಾತ್ರ ಸಾರಾಯಿ ಕಲಿ ತ ಪಂಚಗವ್ಯದಂತೆ ಅವಶ್ಯ ಬಿಡತಕ್ಕದ್ದು.

ಮೂ॥ ಕ್ರೂರವಿಮುಕ್ತಂದಗ್ಧಂ ಕ್ರೂರಗತಂಜ್ವಲಿತಧೂಮಿ ತಂಪುರತಃ । ತೇಷಾಂಕ್ರೂರಗತಾಂಶಾಂಸಮಸ್ತಕಾರ್ಯೇಷುವ ರ್ಜಯೇದ್ಧೀಮಾನ್ ॥

ಟೀ॥ ಕ್ರೂರಗ್ರಹದಿಂದ ಬಿಡಲ್ಪಟ್ಟದ್ದು ಸುಡಲ್ಪಟ್ಟದ್ದುಕ್ರೂ ರವಿರುವನಕ್ಷತ್ರವು, ಜ್ವಲಿತವು ಉರಿಯುವದು, ಕ್ರೂರಗ್ರಹ ಬ ರತಕ್ಕದ್ದು ಹೊಗೆ ಏಳುತ್ತಿರುವದು ಆದ್ದರಿಂದ ಸೂರ್ಯನು ಯಾ ವ ನಕ್ಷತ್ರದಲ್ಲಿರುತ್ತಾನೋ-ಅದು-ಅದಕ್ಕೆ ಹಿಂದಿನದು ಮುಂದಿನದು, ಈಮೂರುನಕ್ಷತ್ರಗಳನ್ನು ವಿವಾಹಾದಿಶುಭಕಾರ್ಯಗಳಲ್ಲಿಬಿಡತಕ್ಕದ್ದು

ಮಹಾಪಾತಕದೋಷಃ.

ಮೂ॥ ಯಸ್ಮಿನ್ದಿನೇಮಹಾಪಾತಸ್ತದ್ದಿನಂಪರಿವರ್ಜಯೇತ್ ಅ ಪಿಸರ್ವಗುಣೋಪೇತಂದಂಪತ್ಯೋರ್ಮೃತ್ಯುದಂ ಭವೇತ್ ॥

ಟೀ॥ ಯಾವದಿನದಲ್ಲಿ ಮಹಾಪಾತ ಉಂಟಾಗುತ್ತದೋ ಆದಿ ನಕ್ಕೆ ಮಿಕ್ಕಎಲ್ಲಾಗುಣಗಳೂ ಇದ್ದರೂ ಅದುಮೃತ್ಯುಕರವಾದ ದರಿಂದ ಅದನ್ನು ಬಿಡತಕ್ಕದ್ದು.

ಮೂ ॥ ಪರಿತ್ಯಜ್ಯ ಮಹಾದೋಷಾಂಚ್ಛೇಷಯೋರ್ಗುಣ ದೋಷ ಯೋಃ। ಗುಣಾಧಿಕಸ್ವಲ್ಪದೋಷಂಸಕಲಂಮಂಗಳಪ್ರದಂ ॥

ಟೀ ॥ ಮಹಾದೋಷಗಳನ್ನು ಶುದ್ಧವಾಗಿಬಿಟ್ಟು ಸಾಮಾನ್ಯ ದೋಷಗಳನ್ನು ಗುಣಗಳು ಅಧಿಕಗಳಾಗಿದ್ದರೆ ಪರಿಗ್ರಹಿಸಬಹುದು

ಶುಭಪ್ರದಗಳಾಗುತ್ತವೆ.

ಗುಳಿಕ ಯಮಕಂಟಕ ಅರ್ಧಪ್ರಹಾರ ಕಾಲನಿರ್ಣಯ

ಮೂ॥ ಅಹಪ್ರಮಾಣಂ ವಸುಭಾಗಿತಂ ಚತದ್ವಾರನಾಧಪ್ರಥ
ಮಾದ್ಯಭಾಗೌ। ಶೇಷಂಷಡಂಶಂಕ್ರಮವೀಕ್ಷಣೀಯಂಶಸೇಸ್ತು
ಭಾಗಂಗುಳಿಕಾಂವದಂತಿ॥ ಶನ್ಯಂಶೊಗುಳಿಕಾಜ್ಞ್ಯಾಯಾಗು
ರ್ವಂಶೊಯಮಕಂಟಕಃ। ಅರ್ಧಪ್ರಹಾರ ಸ್ಸೌಮ್ಯಾಂಶ
ಶ್ಯಾರ್ಕಾಂಶಃಕಾಲಸಂಜ್ಞಿಕಃ ॥

ಟೀ॥ ದಿನಪ್ರಮಾಣ ಘಳಿಗೆಗಳು ೮ರಲ್ಲಿ ಭಾಗಿಸಿ ಆ ಭಾಗಗ
ಳಲ್ಲಿ ಮೊದಲು ೨ಭಾಗಗಳು ವಾರಾಧಿಪತಿಗೆ, ತರುವಾಯ ಆರು
ಅಂಶಗಳಿಗೆ ಮಿಕ್ಕ ಆರುಗ್ರಹಗಳು ಭಾಗಸ್ಥರಾದದರಿಂದಿಮುಹೂ
ರ್ತವು ಗುರುವಿನ ಅಂಶಕಾಲವಾದರೆ ಯಮಕಂಟಕನ ಕಾಲವೆಂ
ಬದಾಗಿಯೂ, ಶನಿಯ ಅಂಶವಾಗಿದ್ದರೆ ಗುಳಿಕ ಕಾಲವೆಂಬದಾಗಿ
ಯೂ, ಬುಧನಅಂಶವಾಗಿದ್ದರೆ ಅರ್ಧಪ್ರಹಾರ ಕಾಲವೆಂಬದಾಗಿ
ಯೂ, ರವಿಯ ಅಂಶವಾಗಿದ್ದರೆ ಕಾಲವೆಂಬದಾಗಿಯೂ ತಿಳಿಯ
ತಕ್ಕದ್ದು.

ಯಾತ್ರಾ ಪ್ರಕರಣವು.

ಮೂ॥ ನಂದಾಭಿಧಾನಾಸ್ತಿಥಯಸ್ತು ಪೂರ್ವೆಭದ್ರಾಯಭ
ದ್ರಾಃಕಥಿತಾಯಮೇಚ। ಜಯಾಜಯಾರ್ಧಂಯದಿಪಶ್ಚಿಮೆ
ಚಪೂರ್ಣಾಉದೀಚ್ಯಾಂನಗತಂತುರಿಕ್ತ॥

ಟೀ॥ ಮೂಲ ದಿಕ್ಕಿಗೆ ಪ್ರಯಾಣಕ್ಕೆ ನಂದಾ ತಿಥಿಗಳು ಶುಭಗ
ಳು ದಕ್ಷಿಣಕ್ಕೆ ಭದ್ರಾ ತಿಥಿಗಳು ಪಡುವಲ ದಿಕ್ಕಿಗೆ ಜಯಾ ತಿಥಿ
ಗಳು, ಬಡಗಲದಿಕ್ಕಿಗೆ ಪೂರ್ಣಾ ತಿಥಿಗಳಲ್ಲಿರಿಕ್ತಾತಿಥಿಗಳಲ್ಲಿ ಯಾ
ವ ದಿಕ್ಕಿಗೂ ಪ್ರಯಾಣವಾಗಕೂಡದು.

ತಿಥಿಶೂಲೆಗಳು

ಮೂ॥ ಪ್ರತಿಪನ್ನವಮೀಪೂರ್ವೆದ್ವಿತೀಯಾ ದಶಮೊತ್ತ್ತತೆ।
ತೃತೀಯೇಕಾದಶೀಚಾಗ್ನ್ಯೌ ಚತುರ್ದ್ವಾದಶನೈಋತೆ। ಪಂ
ಚತ್ರಯೋದಶೀಯಾಮ್ಯೇಜಲೆಷಷ್ಠಿತ್ರಯೋದಶೀ। ಸಪ್ತಮೀ
ಪೂರ್ಣಿಮಾವಾಯಾಅಮಾವಾಸ್ಯಾಷ್ಟಮೀಶಿವೆ॥

ಟೀ॥ ಮೂಡಲ ದಿಕ್ಕಿನಲ್ಲಿ ಪಾಡ್ಯಮಿ ನವಮಿಗಳೂ, ಬಡಗಲದಿಕ್ಕಿನಲ್ಲಿ ಬಿದಿಗೆದಶಮಿಗಳೂ, ಆಗ್ನೆಯದಿಕ್ಕಿನಲ್ಲಿತದಿಗೆ ಏಕಾದಶೀಗಳು ನೈಋುತ್ಯದಿಕ್ಕಿನಲ್ಲಿ ಚೌತಿ ದ್ವಾದಶಿಗಳೂ, ತೆಂಕಣ ದಿಕ್ಕಿನಲ್ಲಿ ಪಂಚಮಿ ತ್ರಯೋದಶಿಗಳೂ. ಪಡವಲದಿಕ್ಕಿನಲ್ಲಿ ಷಷ್ಠೀ ತ್ರಯೋದಶಿಗಳೂ. ವಾಯುವ್ಯದಿಕ್ಕಿನಲ್ಲಿಸಪ್ತಮಿ ಪೌರ್ಣಮಿಗಳೂ, ಈಶಾನ್ಯ ದಿಕ್ಕಿನಲ್ಲಿ ಅಮಾವಾಸ್ಯೆ ಅಷ್ಟಮಿಗಳೂ ತಿಥಿಶೂಲಗಳೆಂದು ತಿಳಿಯತಕ್ಕದ್ದು.

## ವಾರಶೂಲಗಳು.

ಮೂ॥ ನಪೂರ್ವೇಶನಿಸೋಮೌಚನಗುರುರ್ದಕ್ಷಿಣೇತಥಾ । ನಪ
ಶ್ಚಾದ್ಭಾನುಶುಕ್ರೌಚನೋತ್ತರೇಬುಧಮಂಗಲೌ ॥

ಟೀ॥ ಶನಿಸೋಮವಾರಗಳಲ್ಲಿ ಮೂಡಲದಿಕ್ಕಿಗೂ, ಗುರುವಾರದಲ್ಲಿ ದಕ್ಷಿಣ ದಿಕ್ಕಿಗೂ. ರವಿ ಶುಕ್ರವಾರಗಳಲ್ಲಿ ಪಡುವಲ ದಿಕ್ಕಿಗೂ, ಬುಧ ಮಂಗಳವಾರಗಳಲ್ಲಿ ಉತ್ತರದಿಕ್ಕಿಗೂ ಪ್ರಯಾಣ ಹೊರಡಕೂಡದು.

ಮೂ॥ ಶನಿಗುರುಶ್ಚಾಪ್ಯಾಗ್ನೆಯೆಸೋಮಶುಕ್ರೌಚನೈಋುತೆ
ಕುಜಾದಿತ್ಯೌಚವಾಯುವ್ಯೆಬುಧಈಶಾನ್ಯೆಯೆವಚ ॥

ಟೀ॥ ಶನಿಗುರುವಾರಗಳಲ್ಲಿ ಆಗ್ನೆಯದಿಕ್ಕಿಗೂ, ಸೋಮ, ಶುಕ್ರವಾರಗಳಲ್ಲಿನೈರುಋುತಿ ದಿಕ್ಕಿಗೂ, ಕುಜ ರವಿವಾರಗಳಲ್ಲಿ ವಾಯುವ್ಯಕ್ಕೂ ಬುಧವಾರದಲ್ಲಿ ಈಶಾನ್ಯದಿಕ್ಕಿಗೂ ಪ್ರಯಾಣ ಮಾಡಕೂಡದು

## ವಾರಶೂಲ ಭಂಗಃ.

ಮೂ॥ ದ್ವಾವಿಂಶತಿರ್ಗುರೌಚೈವದ್ವಾದಶಂದುಜಭೌಮಯೋಃ
ಪಂಚಾದಶೇಭೃಗೌಭಾನೌ ಮಂದೆಂದ್ವೋಶ್ಚಾಷ್ಟನಾಡಿಕಾಃ ।
ವಾರಶೂಲಾಖ್ಯಮಾಸ್ತ್ಯಜ್ಯಾಶ್ಶೇಷಂಗಮನಶೋಭನಂ ॥

ಟೀ॥ ಗುರುವಾರದಲ್ಲಿ ೨೨ ಗಳಿಗೆಗಳು, ಅಂಗಾರಕ ಬುಧವಾರಗಳಲ್ಲಿ ೧೨ ಗಳಿಗೆಗಳು, ಶುಕ್ರ ರವಿವಾರಗಳಲ್ಲಿ ೧೫ ಗಳಿಗೆಗಳು, ಸೋಮ ಶನಿವಾರಗಳಲ್ಲಿ ೮ ಗಳಿಗೆಗಳು, ತ್ಯಾಜ್ಯಗಳು ಮಿಕ್ಕ ಗಳಿಗೆಗಳೆಲ್ಲಾ ಪ್ರಯಾಣದಲ್ಲಿ ಶುಭಕರಗಳು.

ದಿಗ್ವಾರಫಲವು.

ಮೂ॥ ಅಂಗಾರಕೇಪ್ರಾಗ್ಗಮನೇಂಚಲಾಭಃ ಸೋಮೇಶನೌದಕ್ಷಿಣ ಮರ್ಥಲಾಭಃ । ಗುರೌಬುಧೇಪಶ್ಚಿಮಕಾರ್ಯಸಿದ್ಧಿ ರವೌಭೃಗೌಚೋತ್ತರಧಾನ್ಯಲಾಭಃ ॥

ಟೀ॥ ಮಂಗಳವಾರದಲ್ಲಿ ಮೂಡಲಕಡೆಗೆ ಪ್ರಯಾಣಲಾಭಕರವು ಸೋಮಶನಿವಾರಗಳಲ್ಲಿ ದಕ್ಷಿಣದಿಕ್ಕಿಗೆ ಪ್ರಯಾಣಅರ್ಥಲಾಭವು, ಬುಧಗುರುವಾರಗಳಲ್ಲಿ ಪಶ್ಚಿಮದಲ್ಲಿ ಪ್ರಯಾಣದಿಂದ ಕಾರ್ಯಸಿದ್ಧಿಯು, ರವಿಶುಕ್ರವಾರಗಳಲ್ಲಿ ಉತ್ತರ ಪ್ರಯಾಣದಿಂದ ಲಾಭವಹುದು.

ಪ್ರತ್ಯೇಕ ವಾರಫಲವು.

ಮೂ॥ ಆರ್ಕೇಕ್ಲೇಶಮನರ್ಥಕಂಚಗಮನೇಸೋಮೇಚಬಂಧುಪ್ರಿಯಂ । ಭೂಜಾತೇನಲತಸ್ಕರಜ್ವರಭಯಂ ಪ್ರಾಪ್ತಂವ್ಯಮರ್ಥಂಬುಧೇ । ಕ್ಷೇಮಾರೋಗ್ಯಮಿದಂಕರೋತಿಧಿಷಣೇಶುಕ್ರೇಚಲಾಭಂಸ್ಥಿರಂ । ವ್ಯಾಧಿಂಭಂಗಮಿದಂಕರೋತಿಸತತಂಮಂದೇದಿನೇಗಮ್ಯತಾ ॥

ಟೀ॥ ಭಾನುವಾರದಲ್ಲಿ ಪ್ರಯಾಣದಿಂದ ಕ್ಲೇಶವು ಮತ್ತು ಅನರ್ಥಕವು, ಸೋಮವಾರದಲ್ಲಿ ಬಂಧುಜನ ಸಂತೋಷ, ಕುಜವಾರದಲ್ಲಿ ಅಗ್ನಿ ಚೋರಜ್ವರಭಯವು, ಬುಧವಾರದಲ್ಲಿ ಧನಲಾಭವು, ಗುರುವಾರದಲ್ಲಿ ಕ್ಷೇಮಾರೋಗ್ಯಗಳುಂಟಾಗುತ್ತವೆ. ಶುಕ್ರವಾರದಲ್ಲಿ ಸ್ಥಿರಲಾಭ ಉಂಟಾಗುತ್ತದೆ, ಶನಿವಾರದಲ್ಲಿ ಪ್ರಯಾಣದಿಂದ ವ್ಯಾಧಿ ಭಂಗಗಳುಂಟಾಗುತ್ತವೆ.

ವಾರದೋಷಭಂಗವು.

ಮೂ॥ ಕ್ಷೀರಂಚಭಾನೌದಧಿಶೀತರಶ್ಮೌಕುಜೇ ಚಮಾಷಾಕ್ಷಬುಧೇಚಲಾಜಾಂ । ಜೀವೇಪಿಚಾಜ್ಯಂಭೃಗುಪಾಯಸಂಚಮಂದೇಚವಾರೇತಿಲಪಿಷ್ಟಮಾಹುಃ ॥

ಟೀ॥ ಭಾನುವಾರದಲ್ಲಿ ಹಾಲನ್ನೂ, ಸೋಮವಾರದಲ್ಲಿ ಮೊಸರನ್ನು, ಶುಕ್ರವಾರದಲ್ಲಿ ಉದ್ದನ್ನೂ, ಬುಧವಾರದಲ್ಲಿ ಭತ್ತದಅರಳನ್ನು, ಗುರುವಾರದಲ್ಲಿ ತುಪ್ಪವನ್ನು, ಶುಕ್ರವಾರದಲ್ಲಿ ಪಾಯಸ

ವನ್ನು, ಶನಿವಾರದಲ್ಲಿ ಎಳ್ಳನ್ನು, ದಾನಮಾಡಿ ಹೊರಡುವಂಥಾವನಿಗೆ ವಾರದೋಷಗಳಿಲ್ಲವೆಂದು ಭಾವವು.

ತಿಥಿವಿಷಯದಲ್ಲಿ ವಿಶೇಷವು.

ಮೂ॥ ದ್ವಿತೀಯಾಚತೃತೀಯಾಚಪಂಚಮೀಸಪ್ತಮೀತಥಾ ದಶಮ್ಯೇಕಾದಶೀಚೈವಯಾತ್ರಾಸಿದ್ಧಿಂತ್ರಯೋದಶೀ। ಕೃಷ್ಣವಾಯದಿವಾಶುಕ್ಲೇ ವರ್ಜನೀಯಾಚತುರ್ದಶೀ । ಪೌರ್ಣಮಾಸ್ಯಾಮಮಾಯಾಂಚನಗಂತವ್ಯಂಕದಾಚನ ॥

ಟೀ॥ ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ದಶಮೀ, ಏಕಾದಶಿ, ತ್ರಯೋದಶೀ ಈ ೭ ತಿಥಿಗಳು ಯಾತ್ರಾಸಿದ್ಧಿಯನ್ನು ಕೊಡುತ್ತವೆ, ಕೃಷ್ಣಪಕ್ಷದಲ್ಲಾದರೂ ಶುಕ್ಲ ಪಕ್ಷದಲ್ಲಾದರೂ, ಚತುರ್ದಶಿಯುತ್ಯಾಜ್ಯವು, ಮತ್ತು ಪೂರ್ಣಿಮಾ ಅಮಾವಾಸ್ಯಾ ಈ ತಿಥಿಗಳಲ್ಲಿ ಯಾವಾಗ್ಯೂಪ್ರಯಾಣಮಾಡಕೊಡದು

ಮೂ॥ಇಂದ್ರೇದಧಿಯಮೇತೈಲಂವಾರುಣೆಗುಡಮೇವಚ। ಉತ್ತರಕ್ಷೀರಮಾಜ್ಯಂಚವಾರದೋಷೋನವಿದ್ಯತೆ॥

ಟೀ॥ ಪೂರ್ವದಿಕ್ಕಿಗೆ ಪ್ರಯಾಣ ಹೊರಡುವಾಗ ಮೊಸರನ್ನೂ ದಕ್ಷಿಣದಿಕ್ಕಿಗೆ ಪ್ರಯಾಣವಾದಾಗ ಯೆಣ್ಣೆಯನ್ನು, ಪಶ್ಚಿಮದಿಕ್ಕಿಗೆ ಪ್ರಯಾಣವಾದಾಗ ಬೆಲ್ಲವನ್ನೂ ಉತ್ತರದಿಕ್ಕಿಗೆ ಪ್ರಯಾಣವಾದಾಗ ಹಾಲನ್ನೂ ತುಪ್ಪವನ್ನು ಸಹದಾನಮಾಡಿ ಹೊರಟರೆ ಆ ವಾರದೋಷ ಉಂಟಾಗುವದಿಲ್ಲ.

ಪ್ರಯಾಣ ಯೋಗ್ಯ ನಕ್ಷತ್ರಗಳು.

ಮೂ॥ಮೃಗಾಶ್ವಿನೀಪುಷ್ಯಪುನರ್ವಸೂಚಹಸ್ತಾನುರಾಧಾಶ್ರವಣಾನಿಲಾಚಧನಿಷ್ಠರೇವತ್ಯಖಿಲೆಪ್ರಯಾಣೆಫಲಂಲಭೆಚ್ಛೀಘ್ರನಿವರ್ತನಂಚ॥

ಟೀ॥ ಮೃಗಶಿರ, ಅಶ್ವಿನೀ, ಪುಷ್ಯ, ಪುನರ್ವಸೂ, ಹಸ್ತಾ, ಅನೂರಾಧಾ, ಶ್ರವಣ, ಮೂಲ, ಧನಿಷ್ಠಾ, ರೇವತೀ,ಈನಕ್ಷತ್ರಕಳದು ಹೊರಡುವವನಿಗೆ ಶೀಘ್ರವಾಗಿ ನಿವೃತ್ತಿಯುಶುಭ ಫಲವೂ ಸಹ ಉಂಟಾಗುತ್ತವೆ.

ಮೂ॥ಕೃತ್ತಿಕಾಭರಣೀಸಾರ್ಪದ್ವಿದೈವತ್ಯತ್ರಿಪೂರ್ವಕಾಃ । ರು

ದ್ರಭಂದೋಷಿತಾಶ್ಚೈಲಶೇಷಾಸ್ಯುರ್ಮಧ್ಯತಾರಕಾಃ॥

ಟೀ॥ಇಲ್ಲಿಪ್ರಯಾಣಕ್ಕೆ ಯೋಗ್ಯಗಳಾಗಿ ಹೇಳಲ್ಪಟ್ಟನಕ್ಷತ್ರಗಳ ಲ್ಲಿ ೪ನೇ ಪಾದಗಳು ಶ್ರೇಷ್ಟಗಳು. ೨-೩ನೇ ಪಾದಗಳು ಮಧ್ಯ ಮಗಳು. ೧ನೇಪಾದಗಳುಅಧಮಗಳು, ಆದರಿಂದಆನಕ್ಷತ್ರಗಳಲ್ಲಿ ಒಂದೊಂದು ಪಾದಕ್ಕೆಇಷ್ಟಿಷ್ಟು ಗಳಿಗೆಗಳೆಂದು ಯೋರ್ಪಡಿಸಿ ಆಯಾ ಪಾದಗಳಲ್ಲಿ ಪ್ರಯಾಣಮಾಡತಕ್ಕದ್ದು.

ನಕ್ಷತ್ರಶೂಲಗಳು.

ಮೂ॥ಪೂರ್ವೆಜ್ಯೇಷ್ಟಧನಿಷ್ಟೇಚಶ್ರವಣಾಶ್ವಿನಿದಕ್ಷಿಣೆ । ಪಶ್ಚಿಮೆ ಪುಷ್ಯರೋಹಿಣ್ಯೌಹಸ್ತ್ರಾಫಲ್ಗುನಿಚೋತ್ತರೆ । ಯೆತನ್ನಕ್ಷತ್ರಶೂ ಲಾಯಾಂನಯಾತ್ರಾಪುನರಾಗಮಃ॥

ಟೀ॥ಪೂರ್ವದಿಕ್ಕಿಗೆ ಜ್ಯೇಷ್ಠಾ, ಧನಿಷ್ಠಾ, ದಕ್ಷಿಣಕ್ಕೆ ಶ್ರವಣ ಅಶ್ವಿ ನೀ, ಪಶ್ಚಿಮಕ್ಕೆಪುಷ್ಯ, ರೋಹಿಣೀ ಉತ್ತರಕ್ಕೆ ಹಸ್ತ ಫಲ್ಗುನೀ, ಈ ಮೇರೆಈನಕ್ಷತ್ರಗಳು ಶೂಲಗಳಾದದರಿಂದ ಇವುಗಳಲ್ಲಿ ಈದಿ ಕ್ಕುಗಳಿಗೆ ಪ್ರಯಾಣ ಮಾಡಕೂಡದು, ಅಂದರೆ ಈ ಪ್ರಯಾಣ ಗಳು ನಡಿಯಲಾರವು.

ಲಗ್ನಗಳು

ಮೂ॥ಚರಲಗ್ನೆಚಗಂತವ್ಯಂದ್ವಿಸ್ವಭಾವೆಸದಾನೃಪೈಃ । ಲಗ್ನೆ ಸ್ಥಿರೆನಗಂತವ್ಯಂ ಯತ್ರಾಯಾಂಕ್ಷೇಮಮಿಚ್ಛತಾ॥

ಟೀ॥ಪ್ರಯಾಣದಲ್ಲಿ ಕ್ಷೇಮವಾಗಿ ಪುನಃ ಸ್ವಸ್ಥಾನವನ್ನು ಸೇರ ಬೇಕೆಂದುಅಪೇಕ್ಷಿಸುವವನು ಚರಲಗ್ನದಲ್ಲಿ ಪ್ರಯಾಣ ಮಾಡತ ಕ್ಕದ್ದು, ದ್ವಿಸ್ವಭಾವಲಗ್ನದಲ್ಲಿ ಅರಸುಗಳು ಪ್ರಯಾಣ ಮಾಡ ತಕ್ಕದ್ದು, ಸ್ಥಿರಲಗ್ನದಲ್ಲಿ ಯಾರೂಪ್ರಯಾಣ ಮಾಡಕೂಡದು

ಮೂ॥ದಿಗೀಶಾಸ್ಸೂರ್ಯಶುಕ್ರಾರರಾಹ್ವರೀಂದುಜ್ಞಸೂರಯಃ ।ದಿ ಗೀಶ್ವರೆಲಲಾಟಸ್ಥೆಯಾತುರ್ನಪುನರಾಗಮಃ॥

ಟೀ॥ ರವಿ, ಶುಕ್ರ, ಕುಜ, ರಾಹು, ಶನಿ, ಸೋಮ, ಬುಧ, ಗುರುಗ ಳು ಪ್ರಾಗ್ದಿಕ್ಕು ಮೊದಲು ೮ದಿಕ್ಕುಗಳಿಗೆ ಅಧಿಪತಿಗಳು, ಯಾವ ದಿಕ್ಕಿ ಅಧಿಪತಿಯು ಆದಿಕ್ಕಿನಲ್ಲಿ ಇದ್ದುಕೊಂಡು ಯೆದುರುನೋ ಡುತ್ತಲಿರುತ್ತಾನೋ ಆದಿಕ್ಕಿಗೂ ಪ್ರಯಾಣ ಹೋಗುವವನು ಪು

ನಃಸ್ವಸ್ಥಾನವನ್ನು ಸೇರುವದಿಲ್ಲ

ಲಲಾಟಯೋಗಃ.

ಮೂ॥ಲಗ್ನಸ್ಥೋಭಾಸ್ಕರಃಪ್ರಾಚ್ಯಾಂದಿಶಿಯಾತುರ್ಲಲಾಟಕಃ । ದ್ವಾದಶೈಕಾದಶೇಶುಕ್ರೇಲಗ್ನೇಯಾಂತುಲಲಾಟಕಃ। ದಶಮಸ್ಥಃಕು ಜೋಲಗ್ನಾದ್ದ್ಯಾಮ್ಯಾಯಾಂತುಲಲಾಟಕಃ। ನವಮಾಷ್ಟಮಗೋ ರಾಹುರ್ನೈರುತ್ಯಾಂತುಲಲಾಟಕಃ। ಲಗ್ನಾತ್ಸಪ್ತಮಗಸ್ಸೌರಿಃ ಪ್ರತೀಚ್ಯಾಂತುಲಲಾಟಕಃ । ಷಟ್ಪಂಚಮಗತಶ್ಚಂದ್ರೋವಾಯು ವ್ಯಾಂತುಲಲಾಟಕಃ॥ಚತುರ್ಥಸ್ಥಾನಗಸ್ಸೌಮ್ಯಉತ್ತರಸ್ಯಾಂ ಲಲಾಟಕಃ। ದ್ವಿತ್ರಿಸ್ಥಾನಗತೋಜೀವಐಶಾನ್ಯಾಂತುಲಲಾಟಕಃ॥

ಟೀ॥ಪ್ರಯಾಣ ಲಗ್ನದಲ್ಲಿರುವ ಸೂರ್ಯನು ಪೂರ್ವದಿಕ್ಕಿಗೆ ಪ್ರ ಯಾಣ ಮಾಡುವನಿಗೆ ಲಲಾಟದಲ್ಲಿರುತ್ತಾನೆ. ಲಗ್ನಕ್ಕೆ ೧೨-೧೧ ಈಸ್ಥಾನಗಳಲ್ಲಿರುವ ಶುಕ್ರನು ಅಗ್ನೇಯದಿಕ್ಕಿಗೆ ಪ್ರಯಾಣ ಮಾ ಡುವನಿಗೆ ಲಲಾಟಸ್ಥನು, ಲಗ್ನಕ್ಕೆ ೧೦ನೇ ಸ್ಥಾನದಲ್ಲಿರುವ ಕು ಜನು ದಕ್ಷಿಣಕ್ಕೆ ಪ್ರ ಯಾಣ ಮಾಡುವನಿಗೆ ಲಲಾಟಸ್ಥನು, ಲಗ್ನಕ್ಕೆ ೯-೮ನೆ ಸ್ಥಾನದಲ್ಲಿರುವ ರಾಹುವು ನೈಋತ್ಯದಲ್ಲಿ ಲಲಾಟಗನು ಲಗ್ನಕೆ ೭ನೇ ಸಾನದಲ್ಲಿರುವ ಶನಿಯು, ಪಶ್ಚಿಮದಲ್ಲಿ ಲಲಾಟಗ ನು, ಲಗ್ನಕ್ಕೆ ೫-೬ಈ ಸ್ಥಾನದಲ್ಲಿರುವ ಚಂದ್ರನು ವಾಯುವ್ಯದ ಲ್ಲಿ ಲಲಾಟಗನು, ಲಗ್ನಕ್ಕೆ ೪ರಲ್ಲಿರುವ ಬುಧನು ಉತ್ತರ ದಿಕ್ಕಿನಲ್ಲಿ ಲಲಾಟಗನು, ಲಗ್ನಕ್ಕೆ೨-೩ನೇ ಸ್ಥಾನಗಳಲ್ಲಿರುವ ಗುರುವು ಈಶಾ ನ್ಯ ದಿಕ್ಕಿನಲ್ಲಿಲಲಾಟಗನು, ಅಂದರೆ ಪ್ರಯಾಣ ಮಾಡುವಾಗ ಪ್ರ ಯಾಣಲಗ್ನಕ್ಕೆ ಆಯಾಸ್ಥಾನಗಳಲ್ಲಿ ಆಯಾ ಗ್ರಹಗಳಿರುವಾಗ ಆಯಾ ದಿಕ್ಕುಗಳಿಗೆ ಹೋಗುವ ವರೆಗೆ ಪ್ರಯಾಣಶುಭಕರವಾಗ ಲಾರದೆಂದು ತಿಳಿಯಬೇಕು.

ಶುಕ್ರಮೌಢ್ಯಾದಿ-ದೋಷವು

ಮೂ॥ಮೂಢೇಶುಕ್ರೇಕಾರ್ಯಹಾನಿಃಪ್ರತಿಶುಕ್ರೇಪರಾಜಯಃ।
ಪ್ರತೀಂದುಜಕೃತೋದೋಷೋಹಂತಿಪ್ರತ್ಯಾರವಿವಚ॥

ಟೀ॥ಶುಕ್ರನುಮೂಢನಾದರೆ ಕಾರ್ಯಹಾನಿಯು, ಪರಾಜಯವು, ಪ್ರತಿಕುಜ ಪ್ರತಿಬುಧ, ದೋಷವು ಸಹಾ ಪ್ರಯಾಣ ಕರ್ತನಿಗೆ

ನಾಳಕೆರವು,

ಪ್ರತಿಶುಕ್ರದೋಷಭಂಗಃ.

ಮೂ॥ಏಕಗ್ರಾಮೇಚತುಶ್ಶಾಲೇವಿವಾಹೇಯಜ್ಞಕರ್ಮಣಿ। ದುರ್ಭಿಕ್ಷ ರಾಜಕಲಹೇಪ್ರತಿಶುಕ್ರಂನವಿದ್ಯತೆ॥

ಟೀ॥ಒಂದೇಯೂರಲ್ಲಿಒಂದ ಮನೆಯಿಂದ ಮತ್ತೊಂದು ಗೃಹಕ್ಕೆ ಪ್ರವೇಶ ಮಾಡುವಾಗಲೂ ವಿವಾಹದಲ್ಲೂ ಚತುಶ್ಶಾಲೆಯಲ್ಲೂ ಯಜ್ಞದಲ್ಲಿಯು ದುರ್ಭಿಕ್ಷದಲ್ಲೂ ರಾಜಕಲಹದಲ್ಲಿಯೂ ಪ್ರತಿಶುಕ್ರದೋಷವಿಲ್ಲ.

ಮೂ ॥ ತ್ರಿಕೋಣಕೇಂದ್ರಗಾಸೌಮ್ಯಾಃಕ್ರೂರಾಸ್ತ್ರ್ಯಾಯಾರಿಗಾಯದಿ। ಯಾತ್ರಾಸಿದ್ಧಿರ್ಭವೇದ್ದೃಷ್ಟ್ವಶವೇರೋದನವರ್ಜಿತೆ॥

ಟೀ॥ ಪ್ರಯಾಣ ಲಗ್ನಕ್ಕೆಶುಭಗ್ರಹಗಳು ಕೇಂದ್ರತ್ರಿಕೋಣಗಳಲ್ಲಿಯೂಪಾಪಗ್ರಹಗಳು ೩-೬-೧೧ನೇ ಸ್ಥಾನಗಳಲ್ಲೂ ಇರುವಾಗ ಪ್ರಯಾಣವುಸಫಲವಾಗುತ್ತದೆ. ಮತ್ತು ಅಳುವ ಶಬ್ದವನ್ನು ಕೇಳದೆ ಹೆಣವನ್ನು ಮಾತ್ರನೋಡಿದರೆ ಪ್ರಯಾಣ ಸಿದ್ಧಿಯುಂಟಾಗುತ್ತದೆ. ಯಾತ್ರಾ ಪ್ರಕರಣವು ಸಂಪೂರ್ಣವು.

ತಾರಾಬಲವು.

ಮೂ॥ಜನ್ಮನಕ್ಷತ್ರಮಾರಭ್ಯನಿತ್ಯಭಾಂತಂಚಗಣ್ಯತೆ। ನವಸಂಖ್ಯಾಹರೇದ್ಭಾಗಂನವತಾರಾಃಪ್ರಕೀರ್ತಿತಾಃ॥

ಟೀ॥ ಜನ್ಮನಕ್ಷತ್ರಮೊದಲು ನಿತ್ಯ ನಕ್ಷತ್ರದವರಿಗೂ ಯೆಣಿಸಿ ೯ ರಿಂದ ಭಾಗಿಸುವಲ್ಲಿ ಮಿಕ್ಕ ನಕ್ಷತ್ರಗಳಿಗೆ ೯ ರವರಿಗೂ ಫಲಗಳು ಹ್ಯಾಗಂದರೆ.—

ಮೂ॥ಜನ್ಮಸಂಪದ್ವಿಪತ್ಕ್ಷೇಮಪ್ರತ್ಯಕ್ಸಾಧನನೈಧನಂ । ಮಿತ್ರಂಪರಮಮೈತ್ರಂಚನವತಾರಾಃಪ್ರಕೀರ್ತಿತಾಃ॥

ಟೀ॥೧ನೇದು ಜನ್ಮತಾರೆ, ೨ನೇದು ಸಂಪತ್ತಾರೆ, ೩ನೇದು ವಿಪತ್ತಾರೆ, ೪ನೇದು ಕ್ಷೇಮತಾರೆ, ೫ನೇದು ಪ್ರತ್ಯಕ್ತಾರೆ, ೬ನೇದು ಸಾಧನತಾರೆ, ೭ನೇದು ನೈಧನತಾರೆ, ೮ನೇದು ಮಿತ್ರತಾರೆ, ೯ನೇದು ಪರಮಮೈತ್ರತಾರೆ, ಈಮೇರೆ ೯ ನಕ್ಷತ್ರಗಳಿಗೂ ಫಲಗಳನ್ನು ತಿಳಿಯಬೇಕು.

ಮೂ॥ಜನ್ಮಭಂದೇಹನಾಶಾಯಸಂಪತ್ಸಂಪದಯೇವಚ । ವಿಪಚ್ಚಕಾರ್ಯನಾಶಾಯಕ್ಷೇಮಂಕ್ಷೇಮಕೃತೋಭವೇತ್ । ಪ್ರತಕ್ಚಕಾರ್ಯನಾಶಾಯಸಾಧನಂಕಾರ್ಯಸಾಧನೇ । ನೈಧನಂನಿಧವೇಪಿಸ್ಯಾನ್ಮಿತ್ರಂಚಸುಖಸಂಪದಿ । ಪರಮೈತ್ರಂಸುಖವಿದ್ಯಾತ್ತಾರಾಬಲಮಿತಿಕ್ರಮಾತ್

ಟೀ॥ಜನ್ಮನಕ್ಷತ್ರವು ದೇಹನಾಶವನ್ನು ಮಾಡುತ್ತದೆ, ಸಂಪತ್ತಾರೆಯು ಸಂಪತ್ತನ್ನು ಮಾಡಿಸುತ್ತದೆ, ವಿಪತ್ತಾರೆಯು ಕಾರ್ಯನಾಶವನ್ನು ಮಾಡುತ್ತದೆಕ್ಷೇಮತಾರೆಯು ಕ್ಷೇಮವನ್ನು ಮಾಡುತ್ತದೆ ಪ್ರತ್ಯೆಕ್ತಾರೆಯು ಕಾರ್ಯನಾಶಕರವು, ಸಾಧನತಾರೆಯು ಕಾರ್ಯಸಾಧಕವಾಗುತ್ತದೆ, ನೈಧನತಾರೆಯುನಿಧಾನಕರವಾಗುತ್ತದೆ,ಮಿತ್ರತಾರೆಯುಸುಖಸಂಪತ್ಪ್ರದವು, ಪರಮ ಮೈತ್ರದಲ್ಲಿಸುಖಪ್ರದವು, ಈಮೇರೆ ಕ್ರಮವಾಗಿ ಫಲಗಳನ್ನು ತಿಳಿಯಬೇಕು.

ತಾರಾಧಿಪತ್ಯವು.

ಮೂ॥ಜನ್ಮನ್ಯರ್ಕೋಹಿಮಕರಸುತಸ್ಸ್ವಂಹಿಕೇಯಸ್ಸುರೇಜ್ಯಃ । ಕೇತುಶ್ಚಂದ್ರೋ ದಿನಕರಸುತೋಭಾರ್ಗವೋಭೂಮಿಪುತ್ರಃ ॥ ತಾಪಂಲಾಭಂಕ್ಷತಿಧೃಲಯಾನ್ಕೀರ್ತಿ ಹಾನಿಪ್ರಮೋದಾ ನ್ಮೃತ್ಯುಂತಾರಾಬಲಮನುದಿನಂತೇದಿಶಾಂತಿಕ್ರಮೇಣ॥

ಟೀ॥ಜನ್ಮಮೊದಲಾದ ೯ತಾರೆಗಳಿಗೂ ಅಧಿಪತಿಗಳು ಕ್ರಮವಾಗಿ ಜನ್ಮತಾರೆಗೆ ಸೂರ್ಯನು ಅಧಿಪತಿಯು, ಅವನು ಸಂತಾಪವನ್ನು ಕೊಡುತ್ತಾನೆ, ಸಂಪತ್ತಾರೆಗೆ ಬುಧನಧಿಪತಿಯು, ಅವನು ಲಾಭವನ್ನೀಯುತ್ತಾನೆ. ವಿಪತ್ತಾರೆಗೆ ರಾಹುವು ಅವನು ನಾಶವನ್ನು ಕೊಡುತ್ತಾನೆ, ಕ್ಷೇಮತಾರೆ ಬೃಹಸ್ಪತಿಯಧಿಪನು, ಅವನು ಧೈರ್ಯವನ್ನು ಮಾಡಿಸುತ್ತಾನೆ. ಪ್ರತ್ಯೆಕ್ತಾರೆಗೆ ಕೇತುವಧಿಪನು,ಅವನು ಮರಣವನ್ನು ಕೊಡುತ್ತಾನೆ, ಸಾಧನತಾರೆಗೆ ಚಂದ್ರನಧಿಪನು ಅವನು ಕೀರ್ತಿಯನ್ನು ಕೊಡುತ್ತಾನೆ, ನೈಧನತಾರೆಗೆ ಶನಿಯಧಿಪನು, ಅವನು ಪ್ರಾಣಹಾನಿಯನ್ನು ಕೊಡುತ್ತಾನೆ, ಮೈತ್ರತಾರೆಗೆ ಶುಕ್ರನಧಿಪತಿಯು ಅವನು ಸಂತೋಷವನ್ನು·ಕೊಡುತ್ತಾರೆ, ಪರಮಮೈತ್ರತಾರೆಗೆ ಕುಜನಧಿಪನು, ಅವನು ಮರಣವನ್ನುಕೊ

ಡುತ್ತಾನೆ, ಈ ಮೇರೆ ತಾರಾಧಿಪತಿಗಳಿಂದ ಫಲವನ್ನು ತಿಳಿಯತಕ್ಕದ್ದು ಈ ಶ್ಲೋಕದಿಂದ ನೇತಾರೆಯು ಪರಮ ಮೈತ್ರವಾದ್ದರಿಂದ ಅದು ಅತ್ಯಂತ ಮೈತ್ರವಾದದ್ದು. ವಿಶೇಷ ಶುಭಪ್ರದವೆಂದು ಕೆಲವರು ನುಡಿಯುತ್ತಾರೆ, ಅದಕ್ಕಧಿಪತಿಯಾದ ಅಂಗಾರಕನು ಮರಣ ಫಲಪ್ರದವೆಂದು ತಿಳಿಯಬರುವದರಿಂದ ಅದು ಮೈತ್ರ ತಾರೆಗೆ ವಿರೋಧವಾಗಿ ವರಂ ಅಮೈತ್ರವಾಗಿ ನಾಶಕರವಾದುದೆಂದು ತಿಳಿಯಬೇಕು.

## ತಾರಾವಾಹನಗಳು.

ಮೂ ॥ ಮಯೂರಹಯಮೇಷಾಶ್ಚ ಗಜವಾಯಸಜಂಭುಕಾಃ ।
ಮೃಗೇಂದ್ರೋವೈನತೇಯಶ್ಚ ಹಂಸಸ್ಸ್ಯುರ್ಜನ್ಮಭಾದಿಷು ॥

ಟೀ॥ ನವಿಲು, ಕುದುರೆ, ಕುರಿ, ಆನೆ, ಕಾಗಿ, ನರಿ, ಸಿಂಹ, ಗರುಡ,ಹಂಸ, ಇವುಗಳು ಜನ್ಮಾದಿ ತಾರೆಗಳಿಗೆ ವಾಹನಗಳೆಂದರಿವುದು

## ವಾಹನ ಫಲಗಳು.

ಮೂ॥ ಮಯೂರೇಶ್ಚ ಮನಸ್ತಾಪಂ ಹಯೋಲಾಭಾರ್ಥ ಸಂಪದೌ। ಮೇಷಸ್ತು ಕಲಹಂಚೈವ ರಾಜ್ಯಪ್ರಾಪ್ತಿ ಗಜಸ್ತಥಾ ॥ ವಾಯಸಃ ಕಾರ್ಯನಾಶಂಚ ಜಬುಕಸ್ಸುಖಮೇವಚ । ಸಿಂಹೋರಣಭಯಂಚೈವ ವೈನಹೆಯಸ್ಸುಖಂಬಹು । ಹಂಸಶ್ಚ ಕಾರ್ಯವಿಭ್ರಂಶಂ ವಾಹನಾನಾಂ ಫಲಂಲಭೇತ್ ॥

ಟೀ॥ ನವಿಲು ಮನಸ್ತಾಪವನ್ನು, ಕುದುರೆ ಲಾಭಾರ್ಥ ಸಂಪತ್ತುಗಳನ್ನು, ಕುರಿಯು ಕಲಹವನ್ನು, ಗಜವು ರಾಜ್ಯ ಪ್ರಾಪ್ತಿಯನ್ನು ಕಾಗಿಯು ಕಾರ್ಯನಾಶವನ್ನು, ನರಿಯು ಸುಖವನ್ನು, ಸಿಂಹವು ಯುದ್ಧಭಯವನ್ನು, ಗರುತ್ಮಂತ ಬಹುಸುಖವನ್ನು, ಹಂಸವು ಕಾರ್ಯಹಾನಿಯನ್ನು, ಈ ಮೇರೆ ಫಲಗಳನ್ನು ಕೊಡುತ್ತವೆ. ಇವು ವಾಹನ ಫಲಗಳೆಂದು ತಿಳಿಯುವದು.

## ಗ್ರಂಥಾಂತರೆ.

ಮೂ ॥ ಜನ್ಮರ್ಕ್ಷೆಸಪ್ತ ನಾಡ್ಯಸ್ಸ್ಯುಸ್ತಿಸ್ರಸ್ತು ವಿಪರೀಸ್ಮೃತಾ। ಪ್ರತ್ಯಗೆಸ್ವೈಧನೆಚಾಷ್ಟೌನಿಂದ್ಯಾಶ್ಯೈಷಾಶ್ಶುಭಾವಹಾಃ॥

ಟೀ॥ ಜನ್ಮತಾರೆಗಳಲ್ಲಿ ೭ ಘಳಿಗೆಗಳು ತ್ಯಾಜ್ಯಗಳು, ವಿಪತ್ತಾ

ರೆಯಲ್ಲಿ ೩ ಘಳಿಗೆಗಳುತ್ಯಾಜ್ಯಗಳು, ಪ್ರತ್ಯಕ್ತಾರೆಯಲ್ಲಿಯೂ ನೈಧನತಾರೆಯಲ್ಲೂ ೪ ಘಳಿಗೆಗಳು ಬಿಡತಕ್ಕವು, ಮಿಕ್ಕಘಳಿಗೆಗಳು ಶುಭಗಳೆಂದು ತಿಳಿಯುವದು

ಮೂ॥ ಜನ್ಮತ್ರಿಪಂಚಸಪ್ತಾಖ್ಯಾತಾರಾಇಷ್ಟಫಲಪ್ರದಾಃ ।ತದ್ದೋಷಪರಿಹಾರಾಯದದ್ಯಾದೇತದ್ವಿ ಜಾಯತೇ । ಶಾಕಂಗುಡಂಚಲವಣಂಸತಿಲಂಕಾಂಚನಂಕ್ರಮಾತ್ ॥ ವಿಪದಿಪ್ರತ್ಯೇಗೆಚೈವಚಕರಮಂಚಾದ್ಯಕೆಂವಿನಾ । ಸ್ವೋಚ್ಚೆ ಸ್ವರ್ಕ್ಷಗತಶ್ಚಂದ್ರಶ್ಶುಭದಸ್ಸರ್ವಕರ್ಮಸು ॥

ಟೀ॥ ಜನ್ಮ, ವಿಪತ್, ಪ್ರತ್ಯಕ್, ನೈಧನತಾರೆಗಳು ಅನಿಷ್ಟಫಲಗಳಾಗಿವೆ ಅದದರಿಂದ ತದ್ದೋಷಪರಿಹಾರಕ್ಕಾಗಿ ಕ್ರಮವಾಗಿ ಶಾಕ, ಬೆಲ್ಲ, ಉಪ್ಪು, ಬಂಗಾರುಸಹಿತ ಎಳ್ಳು ಇವುಗಳಂನು ಬ್ರಾಹ್ಮಣನಿಗೆ ದಾನಮಾಡಬೇಕು, ಮತ್ತು ಜನ್ಮತಾರೆಯನ್ನು ಪರಮಮೈತ್ರತಾರೆಯನ್ನು ಬಿಟ್ಟುಕಡೆಮೆವಿಪತ್ತಾರೆಯಲ್ಲೂಪ್ರತ್ಯಕ್ತಾರೆಯಲ್ಲಿಯೂ ಚಂದ್ರನು ಸ್ವೋಚ್ಚ ಸ್ವಕ್ಷೇತ್ರಗತನಾಗಿ ಇದ್ದರೆ ಸರ್ವ ಕರ್ಮಗಳಲ್ಲೂ ಶುಭಕರನು.

ಚಂದ್ರಬಲವು,

ಮೂ॥ ಜನ್ಮಾನಲಯುತೌಸಪ್ತದಶಮೆಕಾದಶೆಶುಭಃ। ಚತುಷ್ಟದ್ವಾದಶೆಕೃಷ್ಣೆಶುಕ್ಲೆದ್ವಿನವಪಂಚಮೆ । ಯಥಾಮಾತಾಸುತಾ್ರಕ್ಷೆತ್ತಥಾರಕ್ಷತುಚಂದ್ರಮಾಃ ॥

ಟೀ॥ ಚಂದ್ರನು ಜನ್ಮ ೩-೬-೭-೧೧ ಈ ಸ್ಥಾನಗಲ್ಲಿದ್ದರೆ ಶುಭಪ್ರದನು, ಅವನು ಕೃಷ್ಣಪಕ್ಷದಲ್ಲಿ ೪-೮-೧೨ ಸ್ಥಾನಗಳಲ್ಲಿ ಇದ್ದರೂ ಶುಕ್ಲಪಕ್ಷದಲ್ಲಿ ೨-೯-ಈ ಸ್ಥಾನಗಳಲ್ಲಿ ಯಿದ್ದರೂ ತಾಯಿ ಮಕ್ಕಳನ್ನು ರಕ್ಷಿಸುವಂತೆರಕ್ಷಿಸುವನು.

ಮೂ॥ ಯಾತ್ರಾವಿವಾಹಸೀಮಂತಮಾಂಜೀಭಧನಭುಕ್ತಿಷು । ವಿದ್ಯಾರಂಭೆಚತಾರಾಯಾಃ ಪ್ರಧಾನಂಬಲಮಿಂದುವತ್ ॥

ಟೀ॥ ಯಾತ್ರಾ, ವಿವಾಹ, ಸೀಮಂತ, ಉಪನಯನ, ಅನ್ನಪ್ರಾಶನ, ವಿದ್ಯಾರಂಭ, ಇವುಗಳಲ್ಲಿ ಚಂದ್ರಬಲ್ಲವಂತೆ ತಾರಾಬಲವು ಪ್ರಧಾನವಾಗಿರ್ಪುದು.

## ವಾಸ್ತುಪ್ರಕರಣವು.

ಮೂ॥ ವಕ್ಷ್ಯತೇತದನುವಾಸ್ತುಲಕ್ಷಣಂಪೂರ್ವಶಾಸ್ತ್ರಮನು ಸೃತ್ಯಯತ್ನತಃ । ಮೂಢದೋಷರಹಿತೇಧವರ್ಾಸಿತೇತ್ಪ್ರ ಭೆತಸುದಿನಶುಭೋದಯೆ ॥

ಟೀ॥ಪೂರ್ವ ಶಾಸ್ತ್ರಗಳನ್ನು ಅನುಸರಿಸಿ ವಾಸ್ತು ಲಕ್ಷಣವು ಹೇಳಲ್ಪಡುತ್ತದೆ, ಗುರುಶುಕ್ರರ ಮೂಢದೋಷವಿಲ್ಲದ ತಿಂಗಳಲ್ಲಿ ಶುಭ ದಿನದಲ್ಲಿಶುಭಲಗ್ನದಲ್ಲಿಯೂ ಅದು ಆರಂಭಿಸತಕ್ಕದ್ದು.

ಮೂ॥ ಗೃಹಸಂಸ್ಥಾಪನಂಚೈತ್ರೆಧನಲಾಭಶುಭಪ್ರದಂ । ವೈಶಾಖೆತುಶುಭಂವಿಂದ್ಯಾಜ್ಜ್ಯೇಷ್ಠೆತಾಮರಣಂಧ್ರುವಂ । ಆಷಾಢೆ ಗೋಕುಲಂಹಂತಿಶ್ರಾವಣೆಭೃತ್ಯವರ್ಧನಂ । ಭಾದ್ರಪೆರೋಗಪೀಡಾಚಾಶ್ವಿಜೆಕಲಹಂತಥಾ।ಕಾರ್ತಿಕ್ಯಾಂಧನಲಾಭಸ್ಸ್ಯಾನ್ಮಾರ್ಗಶೀರ್ಷೆಧನಕ್ಷಯಃ ।ಪುಷ್ಯೇಚಾಗ್ನಿಭಯಂನಿತ್ಯಮಾಘೇತುಬಹುಪುತ್ರದಂ।ಫಾಲ್ಗುನೆತನುನಾಶಸ್ಸ್ಯಾನ್ಮಾಸಾನಾಂಚಫಲಾಫಲಂ॥

ಟೀ॥ಚೈತ್ರಮಾಸದಲ್ಲಿ ಗೃಹಾರಂಭವು ಧನಲಾಭಕರವು, ವೈಶಾಖದಲ್ಲಿಶುಭಕರವು, ಜ್ಯೇಷ್ಠದಲ್ಲಿ ಮರಣಪ್ರದವು,ಆಷಾಢದಲ್ಲಿ ಪಶುನಾಶ, ಶ್ರಾವಣದಲ್ಲಿಭೃತ್ಯವೃದ್ಧಿ, ಭಾದ್ರಪದದಲ್ಲಿ ರೋಗಪೀಡಾ,ಅಶ್ವೀಯುಜದಲ್ಲಿ ಕಲಹ,ಕಾರ್ತೀಕದಲ್ಲಿ ಧನಲಾಭ, ಮಾರ್ಗಶಿರದಲ್ಲಿ ಧನಕ್ಷಯ, ಪುಷ್ಯದಲ್ಲಿ ಅಗ್ನಿಭಯ, ಮಾಘದಲ್ಲಿ ಬಹುಪುತ್ರಪ್ರದ, ಫಾಲ್ಗುನದಲ್ಲಿ ಶರೀರನಾಶವು, ಈ ಮೇರೆಮಾಸಗಳ ಫಲಾಫಲಗಳನ್ನು ತಿಳಿಯತಕ್ಕದ್ದು.

ಮೂ॥ಗೋಕರ್ಕಿಹರಿಕುಂಭಾಜತೌಳಿಕೀಟಮೃಗಸ್ಥಿತೆ। ದಿವಾಕರೆಗೃಹಾರಂಭಃಪುತ್ರಪೌತ್ರಾಭಿವೃದ್ಧಿದಃ॥

ಟೀ॥ ಸೂರ್ಯನು ವೃಷಭ, ಕಟಕ, ಸಿಂಹ, ಕುಂಭ, ಮೇಷ, ತುಲಾ ವೃಶ್ಚಿಕ, ಮಕರ ರಾಶಿಗಳಲ್ಲಿ ಇರುವಾಗ ಹೊಸದಾಗಿ ಗೃಹಾರಂಭ ಮಾಡಿದರೆಪುತ್ರಪೌತ್ರಾಭಿವೃದ್ಧಿಯನ್ನುಂಟುಮಾಡುತ್ತದೆ.

ಮೂ॥ಸ್ಥಿರರಾಶಿಗತೆಸೂರ್ಯೆಗೃಹಕರ್ಮಸುಶೋಭನಂ।ಚರೆತುಮಧ್ಯಮಂವಿಂದ್ಯಾದ್ದ್ವಿಸ್ವಭಾವೆತುನಿಂದಿತಂ॥

ಟೀ॥ ಸೂರ್ಯನು ಸ್ಥಿರರಾಶಿಯಲ್ಲಿರುವಾಗ ನೂತನ ಗೃಹಾರಂಭ

ವು ಮಂಗಳಕರವು,ಚರರಾಶಿಯಲ್ಲಿರುವಾಗ ಮಧ್ಯಮ ದ್ವಿಸ್ವಭಾವರಾಶಿಗಳಲ್ಲಿರುವಾಗ ಅಧಮವು.

ಮೂ॥ಗುರುಭಾರ್ಗವಯೊರ್ಮೌಢ್ಯೇಬಾಲ್ಯವಾರ್ಧಿಕಯೊರಪಿ।ಚಾತುರ್ಮಾಸ್ಯಾಂಶೂನ್ಯಮಾಸೆಗೃಹಕರ್ಮನಕಾರಯೆತ್॥

ಟೀ॥ಗುರುಶುಕ್ರರ ಮೌಢ್ಯದಲ್ಲಿಯೂ, ಬಾಲ್ಯ ವಾರ್ಧಿಕಾವಸ್ಥೆಗಳಲ್ಲಿಯೂ ಚಾತುರ್ಮಾಸ್ಯದಲ್ಲಿಯೂ, ಗೃಹನಿರ್ಮಾಣ ಕಾರ್ಯವನು ಮಾಡಕೂಡದು.

## ಗೃಹದ್ವಾರ ನಿರ್ಣಯವು.

ಮೂ॥ಸಿಂಹೆರ್ಕೆಪಶ್ಚಿಮೆದ್ವಾರಂವೃಷಭೆಚೊತ್ತರೆತಥಾ । ಕುಂಭೆಪೂರ್ವದಿಶಿದ್ವಾರಂವೃಶ್ಚಿಕೆಚೈವದಕ್ಷಿಣೆ । ಏವಂಕೃತಂಚೆತ್ತದ್ವೇಶ್ಮಶೋಭನಂಸೌಖ್ಯವರ್ಧನಂ॥

ಟೀ ॥ ಸೂರ್ಯನು ಸಿಂಹದಲ್ಲಿರುವಾಗ ಮನೆಗೆ ಪಶ್ಚಿಮಕಡೇ ಬಾಗಲನ್ನು ವೃಷಭ ರಾಶಿಯಲ್ಲಿರುವಾಗ ಉತ್ತರಭಾಗದಲ್ಲಿಯೂ, ಕುಂಭರಾಶಿಗತನಾಗಿ ಇರುವಾಗ ಪೂರ್ವಭಾಗದಲ್ಲೂ, ವೃಶ್ಚಿಕದಲ್ಲಿರುವಾಗ ದಕ್ಷಿಣ ಭಾಗದಲ್ಲಿಯೂ ಮನೆಯ ಬಾಗಲನ್ನು ಇರಿಸತಕ್ಕದ್ದು. ಈ ಮೇರೆ ಬಾಗಲು ಇರಿಸಲ್ಪಟ್ಟರೆ ಆ ಮನೆಯು ಶುಭಸೌಖ್ಯವೃದ್ಧಿಕರವಾಗುವದು,

ಮೂ।ಮೃಗೆರ್ಕೆಪಶ್ಚಿಮದ್ವಾರಂತುಲಾಯಾಂಚೊತ್ತರಂಕೃತಂ ಕರ್ಕಟಸ್ಥೆಪುರೊದ್ವಾರಂಮೆಷಸ್ಥೆದಕ್ಷಿಣಂಸ್ಮೃತಂ ।ಏವಂಕೃತೆತುತದ್ವೇಶ್ಮಮಧ್ಯಮಂಪರಿಕೀರ್ತಿತಂ॥

ಟೀ॥ಸೂರ್ಯನು ಮಕರದಲ್ಲಿರುವಾಗ ಪಶ್ಚಿಮದ್ವಾರವನ್ನು,ತುಲೆಯಲ್ಲಿರುವಾಗೆ ಉತ್ತರಬಾಗಿಲನ್ನು, ಕಟಕದಲ್ಲಿರುವಾಗ ಪೂರ್ವದ್ವಾರವನ್ನೂ ಮೇಷದಲ್ಲಿರುವಾಗ ದಕ್ಷಿಣದ ಬಾಗಲನ್ನು ಮಾಡಿದರೆ ಆ ಮನೆಯು ಮಧ್ಯಮಫಲಪ್ರದವಾಗಿ ಇರುವದು.

## ನಕ್ಷತ್ರಗಳು.

ಮೂ॥ ಉತ್ತರಾತ್ರಿತಯಂಚಿತ್ರಾರೋಹಿಣೀಸ್ವಾತಿರೇವತಿ । ಜ್ಯೇಷ್ಠಾಮೃಗಶಿರೊಮೂಲಾಚಾಸ್ವಿನೀಹಸತಿಷ್ಯಕಾಃ । ಮೈತ್ರಂಚೈತೆಪ್ರಶಸ್ತಾಹಿಸರ್ವದಾವಾಸ್ತುಕರ್ಮಣಿ॥

ಟೀ॥ಉತ್ತರ ಫಲ್ಗುನೀ, ಉಷಾ, ಉಭಾ ಚಿತ್ರಾ, ರೋಹಿಣೀ,ಸ್ವಾತೀ, ಜ್ಯೇಷ್ಠಾ, ಮೃಗಶಿರ, ಮೂಲ, ಅಶ್ವಿನೀ. ಹಸ್ತ, ಪುಷ್ಯ ಅನೂರಾಧಾ, ಈ ನಕ್ಷತ್ರಗಳು ವಾಸುಕರ್ಮದಲ್ಲಿ ಯೋಗ್ಯಯೋಗಗಳಾಗಿರುತ್ತವೆ.

ವಾಸಿಷ್ಠೇ—ವಸಿಷ್ಠಮತದಲ್ಲಿ

ಮೂ॥ರೋಹಿಣೀಮೃಗಚಿತ್ರಾರ್ಕವಾಸವೋತ್ತರವೈಶ್ವಭಂ । ಶ್ರವಣಂಚೈವಭಾನ್ಯಷ್ಟಶಸ್ತಾನಿಗೃಹಕರ್ಮಣಿ॥

ಟೀ॥ ರೋಹಿಣೀ, ಮೃಗಶಿರ, ಚಿತ್ರಾ, ಹಸ್ತಾ, ಜ್ಯೇಷ್ಠಾ,ಉತ್ತರಾ, ಉತ್ತರಾಷಾಢಾ, ಶ್ರವಣ, ಈ ೮ ನಕ್ಷತ್ರಗಳು ಗೃಹಕರ್ಮದಲ್ಲಿ ಪ್ರಶಸ್ತಗಳು.

ಮೂ ॥ ಸ್ವಾತೀಪುಷ್ಯಾನುರಾಧಾಶ್ವಿಶತಾಹಿರ್ಬುಧ್ನ್ಯಪೌಷ್ಣಭಂ। ಸಪ್ತಮಧ್ಯಫಲಾನ್ಯತ್ರಶೇಷಾಣಿಪರಿವರ್ಜಯೇತ್ ॥

ಟೀ॥ ಸ್ವಾತೀ, ಪುಷ್ಯ, ಅನೂರಾಧಾ, ಅಶ್ವಿನೀ, ಶತಭಿಷಕ್, ಉಭಾ, ರೇವತೀ ಈ ೭ ನಕ್ಷತ್ರಗಳು ಮಧ್ಯಮ ಫಲಪ್ರದಗಳು. ಮಿಕ್ಕವನ್ನು ಬಿಡತಕ್ಕದ್ದು.

ಯೋಗಗಳು.

ಮೂ ॥ ಪರಿಘಸ್ಯಚಪೂರ್ವಾರ್ಧಂ ಕೃತ್ಸ್ನಂವೈಧೃತಿಪಾತಯೋಃ। ಗಂಡಾತಿಗಂಡಯೋಷ್ಷಟ್ಚನಾಡಿಕಾಃಪಂಚಶೂಲಕೇ॥

ಟೀ॥ ಪರಿಘಯೋಗಕ್ಕೆ ಪೂರ್ವಾರ್ಧವನ್ನೂ, ವೈಧೃತಿವ್ಯತೀಪಾತಗಳ ೬೦ ಗಳಿಗೆಗಳನ್ನು ಗಂಡದಲ್ಲೂ ಅತಿಗಂಡದಲ್ಲೂ ೬ ಗಳಿಗೆಗಳನ್ನು ಶೂಲದಲ್ಲಿ ೫ ಗಳಿಗೆಗಳನ್ನು ಸಹ ಬಿಡತಕ್ಕದ್ದು.

ಮೂ॥ ವ್ಯಾಘಾತೇನವನಾಡಿಶ್ಚ ವಾಸ್ತುಕರ್ಮಣಿವರ್ಜಯೇತ್। ನಿಂದ್ಯಯೋಗೇಷುಸರ್ವೇಷುವಿಷ್ಟ್ಯಾಂಸರ್ವಂವಿವರ್ಜಯೇತ್ ॥

ಟೀ॥ ವ್ಯಾಘಾತದಲ್ಲಿ ೯ ಗಳಿಗೆಗಳನ್ನು ಬಿಡತಕ್ಕದ್ದು, ಯೆಲ್ಲಾ ದುಷ್ಟಯೋಗಗಳಲ್ಲಿಯೂ ಭದ್ರಕರಣದಲ್ಲೂ ಎಲ್ಲಾ ಗಳಿಗೆಗಳನ್ನೂ, ಬಿಡತಕ್ಕದ್ದು.

ಲಗ್ನಗಳು.

ಮೂ॥ ದ್ವ್ಯಂಗೇಷುಸ್ಥಿರವಾಭವನೇವಿಲಗ್ನೇ ಸೌಮ್ಯಗ್ರಹೈರ್ಯುಕ್ತೇ

ನಿರೀಕ್ಷಿತೇವ। ಕರ್ಮಸ್ಥಿತೈರ್ವೀರ್ಯಯುತೈಶ್ಚ ಸೌಮ್ಯೈರ್ನಿ
ರ್ಮಾಣಮಾಹುರ್ಭವನಸ್ಯಸಂಪದಃ ॥

ಟೀ॥ ಶುಭಗ್ರಹಗಳಿಂದ ಕೂಡಲ್ಪಟ್ಟೂ ನೋಡಲ್ಪಟ್ಟೂ ಇರುವಲ್ಲಿ ಲಗ್ನದಲ್ಲಿಯೂ, ಅಥವಾ ಷಡ್ಬಲಯುಕ್ತವಾದಶುಭಗ್ರಹಗಳು ಕರ್ಮಸ್ಥಾನವ ಅಂದರೆ ೧೦ನೇ ರಾಶಿಗಳಲ್ಲಿರುವಾಗಲೂ ಇಂತಾ ಲಗ್ನದಲ್ಲಿ ಗೃಹನಿರ್ಮಾಣ ಶುಭಕರವೆಂಬದಾಗಿ ಸತ್ಪುರುಷರು ಹೇಳುತ್ತಾರೆ

ಮೂ॥ ಪಾಪೈಸ್ತ್ರಿಷಷ್ಠಾಯಗತೈಸ್ತ್ರಿಕೋಣಗೈಃಕೇಂದ್ರಾಶ್ರಿ
ತೈಸ್ಸಾಧುಭಿರಾಲಯಸ್ಯ। ವಧಂತಿನಿರ್ಮಾಣಮಿಹಾಷ್ಟಮ
ಸ್ಥಃಕ್ರೂರಸ್ತುಕರ್ತುರ್ಮರಣಂನರೋತಿ ॥

ಟೀ॥ ಗೃಹನಿರ್ಮಾಣದಲಗ್ನಕ್ಕೆ ೩-೬-೧೧ ಸ್ಥಾನಗಳಲ್ಲಿಪಾಪ ಗ್ರಹಗಳಿರುವಾಗಲೂ, ೧-೪-೫-೭-೯- ೧೦ಈಸ್ಥಾನಗಳಲ್ಲಿಶುಭಗ್ರಹಗಳಿರುವಾಗಲೂ ಗೃಹನಿರ್ಮಾಣವು ಶುಭಕರವು, ಲಗ್ನಕ್ಕೆ ೮ನೇ ಸ್ಥಾನದಲ್ಲಿ ಪಾಪಗ್ರಹವಿದ್ದರೆ ಗೃಹಕರ್ತನಿಗೆ ಮರಣಉಂಟಾಗುತ್ತೆ.

ಮೂ॥ ಋಕ್ಷಂಪ್ರಜಾಪತೇಶ್ಚಾದ್ಯಂತಲ್ಲಗ್ನೆವೆಶ್ಮಕಂಶುಭಂ। ತ
ನ್ನಕ್ಷತ್ರೆವಿಶದ್ಗೆಹಂಶುಭಂಶಂಸಂತಿಸೂರಯಃ ॥

ಟೀ॥ ಬ್ರಹ್ಮನಕ್ಷತ್ರವಾದ ರೋಹಿಣಿಯಲ್ಲಿ ಮನೆಯಮೇಲೆ ಮುಚ್ಚತಕ್ಕದ್ದು, ಅದರ ಲಗ್ನ ಅಂದರೆ ವೃಷಭ, ಲಗ್ನ ದಲ್ಲೂ ಮುಚ್ಚವದು ಶುಭಕರವು ಅಂತಾ ರೋಹಿಣೀ ನಕ್ಷತ್ರದಲ್ಲಿ ಹೃಗ ಪ್ರವೇಶವು ಶುಭಕರವೆಂದು ಹಿರಿಯರು ನುಡಿಯುತ್ತಾರೆ.

ಮೂ॥ ಸ್ತಂಭಂಚಂದ್ರೊದಯೆಸ್ಥಾಪ್ಯಂವೆಶ್ಮಾರೋಹಂಬುಧೊದ
ಯೆ। ಶುಕ್ರೊದಯೆತುಸಂಛಾದ್ಯಂನಚಾಗ್ನಿಭಯಮಾಪ್ನುಯಾತ್

ಟೀ॥ ಚಂದ್ರನಲಗ್ನದಲ್ಲಿ ಕಂಬಸ್ಥಾಪನ ಮಾಡತಕ್ಕದ್ದು, ಬುಧನ ಲಗ್ನದಲ್ಲಿ ಮನೇಮೇಲೆ ಹತ್ತಿಕಟ್ಟತಕ್ಕದ್ದು, ಶುಕ್ರನ ಲಗ್ನದಲ್ಲಿ ಮನೆಯನ್ನು ಮುಚ್ಚತಕ್ಕದ್ದು, ಹೀಗೆಮಾಡಿದರೆ ಯಾವಾಗ್ಯೂ ಅಗ್ನಿಭಯ ಉಂಟಾಗುವದಿಲ್ಲ.

ಮೂ॥ ತ್ರಿಕೋಣಕೇಂದ್ರಗಾಸ್ಸೌಮ್ಯಾಃಪಾಪಾಸ್ತ್ರ್ಯಾಯೊ

ರಿಗಾಸ್ತಥಾಗೃಹಪ್ರಾರಂಭಲಗ್ನೋತ್ಥದೋಷಾನ್ಹನ್ತಿನಸಂಶಯಃ

ಟೀ॥ ಗೃಹಪ್ರಾರಂಭ ಲಗ್ನಕ್ಕೆ ೧-೪-೫-೭-೯-೧೦ ಈ ಸ್ಥಾನಗಳಲ್ಲಿ ಶುಭಗ್ರಹಗಳೂ, ೩-೬-೧೧ ಈ ಸ್ಥಾನಗಳಲ್ಲಿ ಪಾಪಗ್ರಹಗ್ರಹಗಳೂ ಇದ್ದರೆ ಲಗ್ನ ಗತಗಳಾದ ಸರ್ವದೋಷಗಳನ್ನೂ ನಿಸ್ಸಂದೇಹವಾಗಿ ಹರಿಸುತ್ತದೆ.

ಮೂ॥ ಗುರೌವಾಭಾರ್ಗವೇವಾಪಿಚನ್ದ್ರೇಣಸಹಲಗ್ನಗೇ । ತತ್ರಸಂಸ್ಥಾಪಿತಂವೇಶವಹ್ನಿನಾಚನಬಾಧ್ಯತೇ ॥

ಟೀ॥ ಗುರುವಾದರೂ ಶುಕ್ರನಾದರೂ ಚಂದ್ರನೊಂದಿಗೆ ಶೇರಿ ಲಗ್ನದಲ್ಲಿದ್ದರೆ ಆ ಮನೆಯೂ ಯಾವಾಗ್ಯೂ ಅಗ್ನಿಯಿಂದ ಬಾಧಿಸಲ್ಪಡುವದಿಲ್ಲ.

ಮೂ॥ ಭೃಗೌಲಗ್ನಗತೇಜೀವೇಮಧ್ಯಾಹ್ನಾಸ್ತುಮಯೇಸತಿ । ಗೃಹಸಂಸ್ಥಾಪನಂಯೋಗ್ಯಂವಾಯುಷ್ಯಂಚಶತಾಬ್ದಕಂ ॥

ಟೀ॥ ಶುಕ್ರನಾದರೂ, ಗುರುವಾದರೂ ಲಗ್ನಗತನಾಗಿ ಮಧ್ಯಾಹ್ನದಲ್ಲಿ ಅಭಿಜಿನ್ನಕ್ಷತ್ರದಲ್ಲಾದರೂ ಗೋಧೂಳಿಲಗ್ನದಲ್ಲಾದರೂ ಗೃಹಾರಂಭವು ಯೋಗ್ಯವಾದದ್ದು, ಮತ್ತು ಹಾಗೆ ಕಟ್ಟಲ್ಪಟ್ಟದ ಮನೆಗೆ ನೂರು ಸಂವತ್ಸರ ದೀರ್ಘಾಯುಷ್ಯ ವೆಂದು ಹೇಳಬೇಕಾಗಿರುತ್ತದೆ.

## ಗೃಹಪ್ರವೇಶವಿಷಯವು

ಮೂ ॥ ಅಥಪ್ರವೇಶೋನವಮಂದಿರಸ್ಯಸೌಮ್ಯಾಯನೇಜೀವಸಿತೌಬಲಾಢ್ಯೌ । ಸಿತೇಚಪಕ್ಷೇಸಭವಾಸರೇಚವಾಸ್ತ್ವರ್ಚನಂಭೂತಬಲಿಂಚಕುರ್ಯಾತ್॥

ಟೀ॥ಉತ್ತರಾಯಣದಲ್ಲಿ ಗುರು ಶುಕ್ರರು ಬಲಿಷ್ಟರಾಗಿ ಇರುವಾಗಲೂ ಶುಕ್ಲಪಕ್ಷದಲ್ಲೂ ವಾಸ್ತುಪೂಜಾ ಭೂತಬಲಿ ಮುಂತಾದ ಶಾಂತಿಗಳನ್ನು ಮಾಡಿ ನೂತನ ಗೃಹಪ್ರವೇಶವನ್ನು ಮಾಡತಕ್ಕದ್ದು.

ಮೂ॥ಮಾಘಫಾಲ್ಗುನವೈಶಾಖಜ್ಯೇಷ್ಟಮಾಸಾಶ್ಶುಭಪ್ರದಾಃ॥ಸಹಪೂರ್ಜ್ಯಾಚವಿಜ್ಞೇಯಾಮಧ್ಯಮೌತುಪ್ರವೇಶನೇ॥

ಟೀ॥ಮಾಘ ಫಾಲ್ಗುನ ವೈಶಾಖ ಜ್ಯೇಷ್ಟ ಮಾಸಗಳೇ ನೂತನ

ಗೃಹಪ್ರವೇಶದಲ್ಲಿ ಶುಭಪ್ರದಗಳು, ಕಾರ್ತೀಕ ಮಾರ್ಗಶಿರ ಮಾಸಗಳು ಮಧ್ಯಮಗಳು

ಮೂ॥ವ್ಯರ್ಕಾರವಾರೆತಿಥಿಷುರಿಕ್ತಾಮಾವರ್ಜಿತಾಸುಚ। ದಿವಾವಾಯದಿವಾರಾತ್ರಾಪ್ರವೇಶೋಮಂಗಳಪ್ರದಃ॥

ಟೀ ॥ ಭಾನು ಮಂಗಳವಾರಗಳನ್ನು ಬಿಟ್ಟು ಕಡಮೆ ವಾರಗಳಲ್ಲಿಯೂ ರಿಕ್ತತಿಥಿಗಳು, ಅಮಾವಾಸ್ಯ ಇವುಗಳನ್ನು ಬಿಟ್ಟು ಕಡಮೆ ತಿಥಿಗಳಲ್ಲಿಯೂ, ಹಗಲಲ್ಲಾದರೂ ರಾತ್ರಿಯಲ್ಲಾದರೂ ನೂತನ ಗೃಹಪ್ರವೇಶವುಮಂಗಳಪ್ರದವು.

ಮೂ॥ಚಂದ್ರಜೀವಬುಧಶುಕ್ರವಾಸರೇಶ್ರೀಕರಸ್ಸುತಮಹಾರ್ಥಲಾಭದಃ ಸೂರ್ಯಸೂನುದಿ ವಸೇಸ್ಥಿರಪ್ರದಃ ಕಿಂತುಚೋರಭಯಮತ್ರವಿದ್ಯತೇ॥

ಟೀ॥ಚಂದ್ರ,ಗುರು,ಬುಧ,ಶುಕ್ರವಾರಗಳಲ್ಲಿ,ನೂತನ ಗೃಹಪ್ರವೇಶವು ಸಂಪತ್ಕರವು, ಮತ್ತು ಪುತ್ರಧನಲಾಭಕರವು, ಶನಿವಾರದಲ್ಲಿ ಸ್ಥಿರತ್ವವನ್ನುಂಟು ಮಾಡುತ್ತದೆ. ಆದರೆ ಶನಿವಾರದಲ್ಲಿ ಗೃಹಪ್ರವೇಶವು ಚೋರಭಯವನ್ನುಂಟುಮಾಡುತ್ತದೆ.

ಮೂ ॥ ರಿಕ್ತಾಮಮಾದಗ್ಧತಿಥಿರ್ದಿನೇಶಭೂಸೂನುಷಡ್ವರ್ಗಮಿನೇಂದುದೃಷ್ಟಿಂ । ಕ್ರೂರಗ್ರಹಾಧಿಷ್ಟಿತವಿದ್ಧಭಂಚಭಂವರ್ಜನೀಯಂತ್ರಿಪಥಂಪ್ರವೇಶ

ಟೀ॥ನೂತನ ಗೃಹಪ್ರವೇಶದಲ್ಲಿ ರಿಕ್ತಾ, ಅವಮಂದಗತಿಥಿಃ, ಚತುರ್ಥೀ, ನವಮೀ ಚತುರ್ದಶಿ, ದಗ್ಧತಿಥಿಗಳನ್ನು, ಸೂರ್ಯ ಕುಜ ಷಡ್ವರ್ಗಗಳನ್ನೂ ಸೂರ್ಯ ಚಂದ್ರರದೃಷ್ಟಿಯುಳ್ಳದ್ದಾಗಿಯೂ ಕ್ರೂರಗ್ರಹಗಳಿರು ವಂತಾದ್ದಾಗಿಯೂ ಅಂಶದೃಷ್ಟಿಬಿದ್ದಂತಾದ್ದಾಗಿಯೂ ಇರುವನಕ್ಷತ್ರವನ್ನು ಹೀಗೆತಿಥಿ ಷಡ್ವರ್ಗನಕ್ಷತ್ರಗಳನ್ನು ನೂತನ ಗೃಹಪ್ರವೇಶದಲ್ಲಿ ಬಿಡತಕ್ಕದ್ದು

ಮೂ॥ ರೋಹಿಣ್ಯಾಂತ್ರಿಷುಚೋತ್ತರಾಸುಶುಭದೋಗೇಹಪ್ರವೇಶೋನವಃಪೌಷ್ಣೇವಾಸವಮಿತ್ರತೋಶ್ಚವಿಹಿತಸ್ಸ್ವಪಸ್ಮಿನ್ಪುರಾಣೇಗೃಹೇ ।ಆದ್ಯೇಹಸ್ತಪರೀಜ್ಯಭೇನವಗೃಹೇಶಸ್ತಃಪುರಾಣೇತಥಾ । ಕುಂಭೇಕರ್ಕಿಣಿಭಾರ್ಕಗೇಚಯುವತೌನಿಂದ್ಯಃಪ್ರವೇಶೋಗೃಹೇ॥

ಟೀ॥ರೋಹಿಣಿಯಲ್ಲೂ, ಉತ್ತರಾ, ಉತ್ತರಾಷಾಢಾ,ಉತ್ತರಾಭಾದ್ರಗಳಲೂ, ನೂತನಗೃಹಪ್ರವೇಶವು ಶುಭಪ್ರದವು ರೇವತಿ, ಜ್ಯೇಷ್ಟ ಅನೂರಾಧೆ, ಈ ನಕ್ಷತ್ರಗಳಲ್ಲಿ ತನ್ನ ಹಳೆಮನೆಯಲ್ಲಿ ಪ್ರವೇಶವು ಶುಭಕರವು, ಅಶ್ವಿನೀ, ಹಸ್ತ, ಶ್ರವಣ, ಪುಷ್ಯ ಇವುಗಳಲ್ಲಿ ನೂತನ ಗೃಹಪ್ರವೇಶವು, ಒಳ್ಳೇದಲ್ಲ ಹಾಗೆಯೇಹಳೇಮನೆಯಲ್ಲಿಯೂ ಪ್ರವೇಶವು ಶುಭಕರವಲ್ಲಮತ್ತುಸೂರ್ಯನು, ಕುಂಭ ಕಟಕ, ಕನ್ಯಾರಾಶಿಗಳಲ್ಲಿ ಇರುವಾಗ ಗೃಹಪ್ರವೇಶ ಕಾರ್ಯವನ್ನು ಮಾಡಲೇಕೂಡದು.

ಮೂ॥ಅರ್ಕಾನಿಲಾರ್ದ್ರಾದಿತಿದಸ್ರವಿಷ್ಣುಕೃಷೆಪ್ರವಿಷ್ಟಂನವಮಂ
ದಿರಂಯತ್ ಅಬ್ದತ್ರಯಾತತ್ಪರ ಹಸ್ತಯಾತಂ ಶೇಷೇಷುಧಿ
ಷ್ಣ್ಯೇಚಮೃತ್ಯುದಂಸ್ಯಾತ್

ಟೀ॥ಹಸ್ತ, ಸ್ವಾತೀ ಪುಷ್ಯ, ಪುನರ್ವಸು, ಅಶ್ವಿನೀ, ಶ್ರವಣ ಈ ನಕ್ಷತ್ರಗಳಲ್ಲಿ ಪ್ರವೇಶಿಸಲ್ಪಟ್ಟ ಮನೆಯು ಮೂರುವರ್ಷಗಳೊಳಗಾಗಿ ಅನ್ಯಕ್ರಾಂತವಾಗುತ್ತದೆ ಮಿಕ್ಕ ನಕ್ಷತ್ರಗಳಲ್ಲಿ ಮೃತ್ಯುಪ್ರದವಾಗುತ್ತದೆ.

ಮೂ॥ಸ್ಥಿರವಾರುಣಮೈತ್ರೇಂದಂತ್ವಷ್ಟೃಪೌಷ್ಣವಸೂಡುಷು ।
ಪ್ರವೇಶಶ್ರೀಕರೋಜ್ಯೇಷ್ಟಪುಷ್ಯರೇಮಧ್ಯಮಸ್ಮೃತಃ॥

ಟೀ॥ರೋಹಿಣೀ ಉತ್ತರಾ ಉಷಾ ಉಭಾ ಶತಭಿಷಕ್ ಅನೂರಾಧಾ ಮೃಗಶೀರ್ಷ, ಚಿತ್ತಾ ರೇವತಿ, ಧನಿಷ್ಟಾ ಈ ನಕ್ಷತ್ರಗಳಲ್ಲಿ ಗೃಹಪ್ರವೇಶವುಸಂಪತ್ಪ್ರದವಾಗುತ್ತದೆ ಜ್ಯೇಷ್ಟಾಪುಷ್ಯನಕ್ಷತ್ರಗೃಹಪ್ರವೇಶ ಮಧ್ಯಮವು.

ಮೂ॥ ಕೇಂದ್ರೇಷುಸೌಮ್ಯೇಗುರುಶುಕ್ರಲಗ್ನೆಪಾಪೇಷುಕೇಂದ್ರೇಷುಮವರ್ಜಿತೇಷು । ಗ್ರಾಮೆಸ್ಥಿರೆವಾಥವನೇನಲಗ್ನೆಗೃಹಂವಿಶಚ್ಛ್ರೀತಕರನು ಕೊಲೆ॥

ಟೀ॥ಲಗ್ನ ಚತುರ್ಥ ಸಪ್ತಮ ದಶಮಸ್ಥಾನಗಳಲ್ಲಿ ಶುಭಗ್ರಹ ವಿರುವಾಗಲೂ ಲಗ್ನವು ಧನುಸ್ಸು ಮೀನ ವೃಷಭ ತುಲಾ ಈ ನಲ್ಕು ರಾಶಿಗಳಲ್ಲೊಂದಾಗಿರುವಾಗಲೂ ಅಥವಾ ಸ್ಥಿರಲಗ್ನದಲ್ಲೂ ಗ್ರಾ

ಮಪ್ರವೇಶವನ್ನಾದರು ಮಾಡಿದರೆ ಶುಭಕರವಾಗುತ್ತದೆ ಅಂದರೆ ಇಂತಾ ಗ್ರಹಬಲದಲ್ಲಿ ಅರಣ್ಯವನ್ನು ಪ್ರವೇಶಿಸಿದರೂ ಸೌಖ್ಯವ ಹುದು.

ಮೂ॥ ಜನ್ಮಭೆಜನ್ಮಲಗ್ನೆ ವಾತಾಭ್ಯಾಮುಪಚೆಯೆಷಿವಾ । ಪ್ರವೇಶಃ ಪುತ್ರಧನದಸ್ತ್ವನ್ಯಥಾಶೋಕಹಾನಿದಃ ॥

ಟೀ॥ ಜನ್ಮನಕ್ಷತ್ರದಲ್ಲಾಗಲಿ ಜನ್ಮ ಲಗ್ನದಲ್ಲಾಗಲಿ ಅವುಗಳಿಗೆ ೩-೬-೧೦-೧೧ನೇ ಸ್ಥಾನಗಳಲ್ಲಾದರೂ ಗ್ರಹಪ್ರವೇಶವುಸಂತಾನ ಧನಗಳನ್ನು ಕೊಡುತ್ತದೆ, ಹಾಗಿಲ್ಲದೆ ಬೇರೆ ನಕ್ಷತ್ರಲಗ್ನಗಳಲ್ಲಿಗೃಹಪ್ರವೇಶಮಾಡಿದರೆಶೋಕಹಾನಿಗಳನ್ನುಂಟುಮಾಡುತ್ತಾದೆ

ಮೂ॥ ವ್ಯಾಧಿಸಾಧನದಶ್ಚೈವಾವಿತ್ತದೋಬಂಧುನಾಶಕಃ ।ಸುತಹಾಶತ್ರುಹಾಸ್ತ್ರೀಘ್ನಃ ಪ್ರಾಣಹಾಪೀಡನಪ್ರದಃ ॥

ಟೀ॥ ರೋಗವೃದ್ಧಿಕರವು, ದಾರಿದ್ರ್ಯಪ್ರದವು, ಬಂಧುನಾಶಕರವು, ಸಂತಾನಹಾನಿಪ್ರದವು, ಮಿತ್ರನಾಶಕರವು, ಸ್ತ್ರೀನಾಶಕರವು, ಪ್ರಾಣಹರವು, ಕೇಡು ಮಾಡುವದೂ ಆಗುತ್ತದೆ.

ಮೂ॥ ಸಿದ್ಧಿಕೃದ್ಧನಕೃಚ್ಚೈವಾಭಯಕೃಜ್ಜನ್ಮರಾಶಿತಃ ॥

ಟೀ॥ ಜನ್ಮರಾಶಿಯಲ್ಲಿ ಮಾಡಲ್ಪಟ್ಟಗೃಹಪ್ರವೇಶವು ಕಾರ್ಯಸಿದ್ಧಿಕರವು, ಧನಪ್ರದವು, ಅಭಯವನ್ನುಂಟು ಮಾಡುವದು.

ಮೂ॥ ಅಕವಾಟಮವಾಚ್ಛನ್ನ ಮದತ್ತಬಲಿಭೋಜನಂ । ಗೃಹಾನ್ನೆಪ್ರವಿಶೆದೆವಂವಿಪದಾಮಾಕರಂಹಿತತ್ ॥

ಟೀ॥ ಕದವಿಡದೆಯೂ, ಮೇಲೆಹೊದ್ದಿಕೆ ಇಲ್ಲದೆಯೂ, ದಿಗ್ದೇವತಾಬಲಿಬ್ರಾಹ್ಮಣಭೋಜನ ಇವುಗಳನ್ನು ಮಾಡದೆಯೂ ಇರುವ ಮನೆಯನ್ನು ಪ್ರವೇಶಿಸಬಾರದು, ಯಾತಕ್ಕೆಂದರೆ ಆಮನೆಯುಸರ್ವಆಪತ್ತಿಗಳಿಗೂ ಸ್ಥಾನವಾಗಿರುತ್ತದೆ.

## ಕೂಪಾರಂಭವು.

ಮೂ॥ ರೆವತ್ಯುತ್ತರಭಾದ್ರಾಚಹಸ್ತಮೈತ್ರಪಿತ್ರಸ್ತಥಾ । ಶ್ರವಣಂಬ್ರಹ್ಮತಿಷ್ಯಂಚಕೂಪಾರಂಭೆಪ್ರಶಸ್ಯತೆ ॥

ಟೀ॥ ರೇವತಿ, ಉತ್ತರಾ ಭಾದ್ರಾ, ಹಸ್ತ, ಅನೂರಾಧಾ, ಮಘಾ

ಶ್ರವಣ, ರೋಹಿಣೀ, ಪುಷ್ಯ, ಈ ನಕ್ಷತ್ರಗಳು ಕೂಪಾರಂಭದಲ್ಲಿ ಪ್ರಶಸ್ತಗಳು.

ಮೂ॥ ಮತ್ಸ್ಯಕುಳೀರೆ ಮಕರೇಬಹೂದಕಂಕುಂಭೆವೃಷೆಚಾರ್ಧ ಜಲಪ್ರಮಾಣಂ। ಆಳ್ಯಾಂಚತೌಲ್ಯಾಂಮಿಥುನೇಚಪಾದಂಶೇಷೆ ತುರಾಶೌಜಲನಾಶನಂಚ॥

ಟೀ॥ ಮೀನ, ಕರ್ಕಾಟಕ, ಮಕರ, ಈ ರಾಶಿಗಳಲ್ಲಿ ಕೂಪಾರಂಭವಾಡಿದರೆ ಬಹುಜಲ ಉಂಟಾಗುತ್ತದೆ. ಅಂದರೆ ಇವು ಸಂಪೂರ್ಣ ಜಲರಾಶಿಗಳಾದದರಿಂದ ಸಂಪೂರ್ಣಜಲವೆಂದು ಭಾವವು, ಕುಂಭ ವೃಷಭರಾಶಿಗಳು ಅರ್ಧಜಲರಾಶಿಗಳಾದದರಿಂದ ಅವುಗಳಲ್ಲಿ ಕೂಪಾರಂಭವಾಡಿದರೆ ಅರ್ಧಜಲವುಂಟು, ವೃಶ್ಚಿಕ ತುಲಾ ಮಿಥುನಗಳು ಪಾದ ಜಲ ರಾಶಿಗಳಾದದರಿಂದ ಅವುಗಳಲ್ಲಿಪಾದಜಲವು, ಮಿಕ್ಕ ರಾಶಿಗಳು ನಿರ್ಜಲ ರಾಶಿಗಳಾದದರಿಂದ ಶುದ್ಧವಾಗಿ ನಿರ್ಜಲಗಳಾಗಿರುತ್ತವೆ.

ಮೂ॥ ಕೇಂದ್ರೇಷುಪಾಪಯುಕ್ತೇಷುಕೃಚ್ಛ್ರಣಾಪಿನಸಿಧ್ಯತಿ। ಚಂದ್ರಶುಕ್ರಯುತೇಕೇಂದ್ರೇಪರ್ವತೇಚಜಲಂಭವೇತ್॥

ಟೀ॥ ಕೂಪಾರಂಭ ಲಗ್ನದ ಕೇಂದ್ರಗಳಲ್ಲಿ ಪಾಪ ಗ್ರಹಗಳಿದ್ದರೆ ಎಷ್ಟುಅಗದರೂ ನೀರು ಬೀಳುವದಿಲ್ಲ ಕೇಂದ್ರದಲ್ಲಿ ಚಂದ್ರ ಶುಕ್ರರಿದ್ದರೆ ಬೆಟ್ಟದಮೇಲೂ ನೀರುಬೀಳುವದು.

ಮೂ॥ ಅರ್ಕರಾಶೌಜಲಂಶೂನ್ಯಂಪಾಷಾಣಶ್ಚಾಪಿದೃಶ್ಯತೇ। ಜಲರಾಶಿಗತೇಚಂದ್ರೇಶುಕ್ರೇವಾಪಿವಿಶೇಷತಃ॥

ಟೀ॥ ಸೂರ್ಯನಿರುವ ರಾಶಿಯಲ್ಲಿ ಕೂಪಾರಂಭವಾಡಿದರೆನಿರ್ಜಲವಾಗುವದು. ಮತ್ತುಬಂಡೆಕಲ್ಲು ಕಾಣಬರುವದು, ಚಂದ್ರಶುಕ್ರರು ಜಲ ರಾಶಿಯಲ್ಲಿದ್ದರೆ ಬಹುಜಲ ಕಾಣಬರುವದು.

## ಬೀಜಾವಾಪಪ್ರಕರಣವು.

ಮೂ॥ ಪಂಚಮೀಸಪ್ತಮೀಚೈವಚ ಪೌರ್ಣಮಾಸೀತ್ರಯೋದಶೀ। ತೃತೀಯೈಕಾದಶೀಚೈವಪ್ರಶಸ್ತಾಬೀಜಕರ್ಮಣೀ॥

ಟೀ॥ ಬೀಜ ಬಿತ್ತುವ ಕೆಲಸದಲ್ಲಿ ಪಂಚಮೀ, ಸಪ್ತಮೀ, ಪೂ

ಣೀವಾ, ತ್ರಯೋದಶೀ, ಈ ತಿಥಿಗಳು ಪ್ರಶಸ್ತಗಳು.

ಮೂ॥ ಅರ್ಕೋದಯೆಸೂರ್ಯವಾರೆಸರ್ವಬೀಜಾನಿವಾಪಯೆತ್ ॥
ಸೋಮವಾರೆಮಿಥೊಲಗ್ನೆ ಜಲಪುಷ್ಪಾಂಕುರಾನ್ಯಸೆತ್ ॥

ಟೀ॥ ಭಾನುವಾರದಲ್ಲಿ ಸಿಂಹಲಗ್ನದಲ್ಲಿ ಸಕಲ ಬೀಜಗಳಂನು ಬಿತ್ತಬಹುದು, ಸೊಮವಾರದಲ್ಲಿ ಮಿಥುನ ಲಗ್ನದಲ್ಲಿ ನೀರಲ್ಲಿ ನೆನಸಿ ಮೊಳಕೆಹೊರಟಬೀಜಗಳನ್ನು ಬಿತ್ತಬೇಕು.

ಮೂ॥ ಕುಜಸ್ಯವಾರೆತಲ್ಲಗ್ನೆ ಕೊದ್ರವಾನ್ವಾಪಯೆದ್ಬುಧಃ ।
ಬುಧವಾರೆಸೌಮ್ಯಲಗ್ನ ಕ್ರಮುಕಸ್ಥಾಪನಂನವಂ॥

ಟೀ॥ ಕುಜನ ವಾರದಲ್ಲೂ ಮೇಷವೃಶ್ಚಿಕ ಲಗ್ನಗಳಲ್ಲೂ ಹಾರಕೆಗಳನ್ನು ಬಿತ್ತಬೇಕು, ಬುಧವಾರದಲ್ಲೂ ಅವನಲಗ್ನದಲ್ಲೂ ಅಡಿಕೆ ಸೊಸಿಗಳನ್ನು ನಾಟಬಹುದ

ಮೂ॥ ಸ್ಥಾಪಯೆತ್ಫಲವೃಕ್ಷಾಂಚತಲ್ಲಗ್ನೆ ದಿವಸೆಗುರೊಃ॥ ಶುಕ್ರವಾರೆತದುದಯೆಸ್ಥಾಸಯೆತ್ಕುಸುಮಾಂತರಂ ॥

ಟೀ॥ ಗುರುವಾರದಲ್ಲೂ ಅವನ ಲಗ್ನದಲ್ಲೂಫಲ ವೃಕ್ಷಗಳ ತೋಪನ್ನೂ ಹಾಕಬೇಕು. ಶುಕ್ರವಾರದಲ್ಲೂ ಅವನಲಗ್ನದಲ್ಲೂ ಹೂವುಗಳ ತೋಟವನ್ನು ಹಾಕಬೇಕು.

ಮೂ॥ ಮಂದಸ್ಯಲಗ್ನೆ ಮನ್ಹಾಹೆಕೃಷ್ಣಧಾನ್ಯನಿವಾಪಯೆತ್

ಟೀ॥ ಶನಿವಾರದಲ್ಲೂ ಅವನ ಲಗ್ನದಲ್ಲೂ ಯಳ್ಳುರಾಗಿ ಮುಂತಾದಕರೀಧಾನ್ಯಗಳನ್ನೂ ಬಿತ್ತಬೇಕು.

ಮೂ ॥ ಸ್ವಾತೀಪುಷ್ಯಮಘಾಪ್ರಜೆಶವರುಣಾಸ್ರಾಸ್ಸಾಂತ್ಯಮಿತ್ರೊತ್ತರಾ। ಮೂಲಾಧೊಕ್ಷಜಹಸ್ತಭಾನಿ ಸತತಂಬೀಜಸ್ಯವಾಪೆಶುಭಾಃ । ಆದಿತ್ಯೆಂದವವಾಸವಾಸ್ಸತರಗಾವಾಪೆನದಾಮಭ್ಯಮಾಃ । ಶುಕ್ರೆಂದೋರ್ಬುಧಜೀವಯೊಶ್ಚ ದಿವಸಸ್ತ್ವಾಶ್ಚನಾನ್ಯೆಪರಾಃ ॥

ಟೀ॥ ಸ್ವಾತೀ, ಪುಷ್ಯ, ಮಘಾ, ರೋಹಿಣಿ, ಶತಭಿಷಕ್, ಆಶ್ರೇಷಾ, ರೇವತೀ, ಅನೂರಾಧಾ, ಉತ್ತರಾ, ಉಷಾ, ಉಭಾ, ಮೂಲ, ಶ್ರವಣ, ಹಸ್ತ ಈ ನಕ್ಷತ್ರಗಳು ಯಾವಾಗ್ಯು ಬಿತ್ತುವಕೆಲಸದಲ್ಲಿ

ಶುಭಪ್ರದಗಳು, ಅಶ್ವಿನೀ, ಪುನರ್ವಸು, ಮೃಗಶಿರ, ಜ್ಯೇಷ್ಠಾ, ಈ ನಕ್ಷತ್ರಗಳು ಯಾವಾಗ್ಯೂ ಮಧ್ಯಮಗಳು, ಮಿಕ್ಕ ನಕ್ಷತ್ರಗಳುನಿಷ್ಫಲಗಳು, ಶುಕ್ರ, ಸೋಮ, ಗುರು, ಬುಧವಾರಗಳು ಪ್ರಶಸ್ತಗಳು, ಮಿಕ್ಕವು ನಿಷ್ಪ್ರಯೋಜನಗಳೆಂದು ತಿಳಿಯುತಕ್ಕದ್ದು.

ಗೌಳೀವಾಕ್ಪತನಫಲಗಳು.

ಮೂ॥ ಭಾಗ್ಯಶ್ರೀಜಯಯುದ್ಧಲಾಭಗಮನಕ್ಷೇಮಾರ್ತಿಪೀಡಾರ್ಥಕೃತ್ಪ್ರಾಗಾದಿಷ್ವಧರೋರ್ಧ್ವಯೋರಪಿಸದಾಶ್ರೋತುಃ ಕ್ರಮಾದ್ಗೌಳಿವಾಕ್। ಲಕ್ಷ್ಮೀಂಮೂರ್ಧ್ನಿಗಳೇಚಮಿತ್ರಮುದರೆ ಪುತ್ರಂಚಪಾರ್ಶ್ವೈರ್ಮುದಂ ಕಟ್ಯಾಂ ವಾಹನಮರ್ಥಮೇಷ್ಯತಿಪದೆ ಗೌಳಿಪ್ರಪಾತೇಫಲಮ್॥

ವ್ಯಾ॥ ಆ॥ ಗೌಳಿವಾಕ್ಪತನಯೋಃಫಲಮಾಹ। ಭಾಗ್ಯೇತಿ॥ ಗೌಳೀವಾಕ್ ಗೌಳೀಗೃಹಗೋಧಿಕಾ ತಸ್ಯಾಃ ವಾಕ್ಪ್ರಾಗಾದಿಷು ಪ್ರಾಗಾದ್ಯಷ್ಟದಿಕ್ಷು ಅಧರೋರ್ಧ್ವಯೋಃ ಶ್ರೋತುಃ ಕ್ರಮಾದ್ಭಾಗ್ಯಾದಿಫಲಕೃದ್ಭವದಿತಿಯೋಜನಾ ಅಯಮರ್ಥಃ ಗೌಳೀವಾಕ್ ಪ್ರಾಚ್ಯಾಂಚೇತಿ ಶ್ರೋತುಃಭಾಗ್ಯಕೃತ್ ಅಗ್ನೆಯಾಂಶ್ರೀಕೃತ್ದಕ್ಷಿಣಸ್ಯಾಂ ಜಯಕೃತ್ ನೈರುತ್ಯಾಂ ಯುದ್ಧಕೃತ್ ಪ್ರತೀಚ್ಯಾಂ ಲಾಭಕೃತ್ ವಾಯವ್ಯಾಂ ಗಮನಕೃತ್ ಉದೀಚ್ಯಾಂಕ್ಷೇಮ ಕೃತ್ ಈಶಾನ್ಯಾ ಮಾರ್ತಿಕೃತ್ ಭೂಮೌ ಪೀಡಾಕೃತ್ ಸ್ಯಸ್ಯೋರ್ಧ್ವಭಾಗೇಚೇತ್ ಅರ್ಥಕೃತ್ ಶ್ರೋತುರಿತಿ ಸರ್ವತ್ರಾನ್ವಯಃ॥ಅಥ ಪತನಫಲ್ಲ ಮಾಹ॥ ಗೌಳಿಪ್ರಪಾತೆ ಮೂರ್ಧ್ನಿಶಿರಸಿ ಚೇತ್ಲಕ್ಷ್ಮೀಂಗಳೇಕಂಠೆ ಮಿತ್ರಂಬಂಧುಲಾಭಉದರೆ ಪುತ್ರಂ ಪುತ್ರಲಾಭಂ ಪಾರ್ಶ್ವೇಮುದಂ ಸಂತೋಷಂಕಟ್ಯಾಂವಾಹನಂಪದೇಪಾದೇ ಅರ್ಥಂಚೈಷ್ಯತೀತಿ ಫಲಮವಗಂತವ್ಯಂ॥

ಟೀ॥ ಗೌಳಿವಾಕ್ಕು ಬೀಳುವಿಕೆ ಇವುಗಳ ಫಲಗಳನ್ನು ಹೇಳುತ್ತಾನೆ,—ಪೂರ್ವದಿಕ್ಕು ಮೊದಲು ಈಶಾನ್ಯದ ವರಿವಿಗು ೮ ದಿಕ್ಕುಗಳಲ್ಲಿಯು ಊರ್ಧ್ವಾದ ಪ್ರವೇಶಗಳು ೨ ಅಂತು ೧೦ಹತ್ತುದಿಕ್ಕುಗಳಲ್ಲಿ ನುಡಿಯುತ್ತಇದ್ದರೆ ಆ ಸಮಯದಲ್ಲಿ ಪ್ರಯಾಣ

ಮಾಡಿದವರಿಗೆ ಕ್ರಮವಾಗಿ ಭಾಗ್ಯ-ಸಂಪತ್ತು-ಜಯ-ಯುದ್ಧ-ಲಾಭ-ಗಮನ-ಕ್ಷೇಮ-ದುಃಖ-ಪೀಡೆ-ಧನ-ಈ ದಶವಿಧ ಲಾಭಗಳು ಕ್ರಮವಾಗಿ ಒಂದೊಂದು ದಿಕ್ಕಿಗೆ ಒಂದೊಂದುಫಲವಾಗುವದು ಪತನ ಅಂದರೆ ಮೇಲಿನಿಂದ ಬೀಳುವದು (ಇದರ ಫಲವೆಂತೆಂದರೆ ಶಿರಸ್ಸು ಕಂಠ ಹೊಟ್ಟೆಪಾರ್ಶ್ವವು ಕಟಿ ಅಂದರೆ ಸೊಂಟ ಪಾದಗಳು, ಈ ಸ್ಥಾನಗಳಲ್ಲಿ ಬಿದ್ದರೆ ಐಶ್ವರ್ಯ ಬಂಧುಲಾಭಪುತ್ರಲಾಭಸಂತೋಷ,ವಾಹನಧನಈ ಫಲಗಳುಉಂಟಾಗುವವೆಂದುತಾತ್ಪರ್ಯವು.

ಸಟೀಕಾ ಮುಹೂರ್ತ ದರ್ಪಣವು.

## ಸಂಪೂರ್ಣಂ.



